ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ—೧

# ಚಂದ್ರಗುಪ್ತ ವಿಜಯ

ಎಚ್. ಎಂ. ಶಂಕರನಾರಾಯಣರಾವ್, ಎಂ. ಎ.

ಮಾರಾಟಗಾರರು :

ಮಿತ್ರ ಮತ್ತು ಕಂಪನಿ, ಲ್ಯಾನ್ಸ್‌ಡೌನ್ ಬಿಲ್ಡಿಂಗ್ಸ್

ಮೈಸೂರು

೧೯೪೭

ಮೊದಲನೆಯ ಮುದ್ರಣ ೧೯೪೬

ತಿದ್ದಿದ ಎರಡನೆಯ ಮುದ್ರಣ ೧೯೪೭

ಮೂರನೆಯ ಮುದ್ರಣ ೧೯೪೭





**ಬೆಲೆ : ಒಂದು ರೂಪಾಯಿ**

ಮುದ್ರಕರು :

ಜಿ. ಎಚ್. ರಾಮರಾವ್ ಬಿ. ಎಸ್. ಸಿ

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್

ಮೈಸೂರು

ಪ್ರಕಾಶಕರು :

**ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು**

# ಎರಡನೆಯ ಮುದ್ರಣದ ಮುನ್ನುಡಿ

ಮೈಸೂರು ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯವರು ಈ ಗ್ರಂಥವನ್ನು ೧೯೪೮ನೆಯ ವರುಷಕ್ಕೆ ಹೈಸ್ಕೂಲು ಎರಡನೆಯ ತರಗತಿಗೆ ಪಠ್ಯ ಪುಸ್ತಕವನ್ನಾಗಿ ನಿಯಮಿಸಿದುದರಿಂದ ಇದನ್ನು ಎರಡನೆಯ ಬಾರಿ ಅಚ್ಚು ಮಾಡಿಸುವ ಸುಯೋಗ ದೊರಕಿತು. ಇದಕ್ಕಾಗಿ ಇಲಾಖೆಯವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಈ ಅವಕಾಶವನ್ನು ಉಪಯೋಗಿಸಿಕೊಂಡು ಈ ಗ್ರಂಥದ ಭಾಷೆಯನ್ನೂ, ವಿಷಯವನ್ನೂ ಪರಿಷ್ಕರಿಸಿದೆ. ಮೊದಲನೆಯ ಮುದ್ರಣಕ್ಕಾಗಿ ಉಪಯೋಗಿಸಿಕೊಂಡ ಗ್ರಂಥಗಳಿಂದ ಈಗಲೂ ತುಂಬ ಪ್ರಯೋಜನವಾಯಿತು. ಈ ಗ್ರಂಥದಲ್ಲಿ ಕಂಡು ಬರುವ ಶಬ್ದರೂಪಗಳಲ್ಲಿಯೂ ಪ್ರಯೋಗಗಳಲ್ಲಿಯೂ ಭಿನ್ನಾಭಿಪ್ರಾಯಕ್ಕೆ ಅವಕಾಶ ವುಂಟೆಂದು ನಾನು ಬಲ್ಲೆ. ಬಹು ಜನರಿಗೆ ಒಪ್ಪಿಗೆಯಾಗಬಹುದೆಂಬ ನಂಬಿಕೆಯಿಂದ ಈ ಪ್ರಯೋಗಗಳನ್ನು ಇರಿಸಿಕೊಂಡಿದ್ದೇನೆ. ಈ ಗ್ರಂಥದಲ್ಲಿ ಕಂಡುಬರಬಹುದಾದ ಲೋಪದೋಷಗಳನ್ನು ತೋರಿಸಿ ಉಪಕರಿಸಿದಲ್ಲಿ ಅವುಗಳನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತೇನೆ.

ಮುಖಚಿತ್ರವನ್ನು ಬರೆದುಕೊಟ್ಟ ಶ್ರೀ. ರಾ. ವೆಂ. ಶ್ರೀನಿವಾಸರಿಗೂ, ಗ್ರಂಥವನ್ನು ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ಉಷಾ ಅಚ್ಚುಕೂಟದ ಶ್ರೀ. ಆರ್. ಎನ್. ಹಬ್ಬು ಅವರಿಗೂ ನಾನೂ ಆಭಾರಿ.

ಮೈಸೂರು
೩೦ ಮೇ ೧೯೪೭

ಎಚ್. ಎಂ. ಶಂಕರನಾರಾಯಣರಾವ್

# ಮೂರನೆಯ ಮುದ್ರಣದ ಮುನ್ನುಡಿ

ಎರಡನೆಯ ಮುದ್ರಣ ಪ್ರತಿಗಳು ಮುಗಿದುಹೋದ ಕಾರಣ ಈ ಮುದ್ರಣ ವನ್ನು ಹೊರತಂದಿದೆ. ಇದು ಎರಡನೆಯ ಮುದ್ರಣದ ಪುನರ್ ಮುದ್ರಣ ; ಇದರಲ್ಲಿ ಯಾವ ಬದಲಾವಣೆಗಳನ್ನೂ ಮಾಡಿಲ್ಲ.

ಅತ್ಯಲ್ಪ ಕಾಲದಲ್ಲಿ ಇದನ್ನು ಸುಂದರವಾಗಿ ಮುದ್ರಿಸಿಕೊಟ್ಟ ಮೈಸೂರು ಅಚ್ಚುಕೂಟದ ಮಾಲೀಕರಾದ ಶ್ರೀಮಾನ್ ಜಿ. ಎಚ್. ರಾಮರಾಯರಿಗೆ ನನ್ನ ವಂದನೆಗಳು

ಮೈಸೂರು
೧೦ ಜುಲೈ ೧೯೪೭

ಎಚ್. ಎಂ. ಶಂಕರನಾರಾಯಣರಾವ್

# ವಿಷಯ ಸೂಚಿಕೆ


| | | ಪುಟ |
|---|---|---|
| ೧ | ಪರಿಚಯ | ೧ |
| ೨ | ಮೌರ್ಯರ ಮರಣ | ೨ |
| ೩ | ಸಿಂಹ ಪರೀಕ್ಷೆ | ೭ |
| ೪ | ಚಾಣಕ್ಯ ಪ್ರತಿಜ್ಞೆ | ೧೩ |
| ೫ | ಕಾರ್ಯೋದ್ಯೋಗ | ೧೮ |
| ೬ | ಸ್ನೇಹಸಂಪಾದನೆ | ೨೨ |
| ೭ | ಲಂಪಾಕಾಧಿಪತಿಯ ಪರಾಜಯ | ೨೯ |
| ೮ | ಸೇನಾಪ್ರಯಾಣ | ೩೩ |
| ೯ | ಮಿತ್ರಭೇದ | ೩೫ |
| ೧೦ | ಜಪಶಾಲೆ | ೩೯ |
| ೧೧ | ವರ್ತಕರ ವಿಪತ್ತು | ೪೧ |
| ೧೨ | ಗಂಗಾಸ್ನಾನ | ೪೩ |
| ೧೩ | ಕ್ಷಪಣಕ ಪರೀಕ್ಷೆ | ೪೬ |
| ೧೪ | ಪುಣ್ಯಾಶ್ರಮ ದರ್ಶನ | ೫೦ |
| ೧೫ | ಸಂಧಾನ | ೫೪ |
| ೧೬ | ನಂದರ ಮರಣ | ೬೩ |
| ೧೭ | ಕಂಟಕ ನಿವಾರಣೆ | ೭೧ |
| ೧೮ | ರಾಕ್ಷಸನ ತಂತ್ರ | ೭೫ |
| ೧೯ | ಪರ್ವತರಾಜನ ಮರಣ | ೭೯ |
| ೨೦ | ಪಲಾಯನ | ೮೨ |
| ೨೧ | ಕೆಳೆತನ | ೮೪ |
| ೨೨ | ಆಶ್ರಯ | ೮೮ |
| ೨೩ | ರಾಕ್ಷಸನ ಮುದ್ರಿಕೆ | ೯೧ |
| ೨೪ | ಮಿತ್ರಪ್ರೇಮಿ ಚಂದನದಾಸ | ೯೮ |
| ೨೫ | ಪ್ರತೀಕಾರ | ೧೦೫ |
| ೨೬ | ಕಪಟ ಕಲಹ | ೧೧೦ |
| ೨೭ | ವಿಷಬೀಜ | ೧೨೧ |
| ೨೮ | ಫಲದ ಮಾರ್ಗದಲ್ಲಿ | ೧೨೫ |
| ೨೯ | ರಾಕ್ಷಸನ ಸಂಗ್ರಹ | ೧೩೩ |
| ೩೦ | ಪಟ್ಟಾಭಿಷೇಕ | ೧೪೬ |
| | ಅನುಬಂಧ | ೧೫೦ |

# ಅರಿಕೆ

(ಮೊದಲನೆಯ ಮುದ್ರಣಕ್ಕೆ ಬರೆದದ್ದು)

ನಂದರನ್ನು ಕೊಂದು ಚಂದ್ರಗುಪ್ತ ಮೌರ್ಯನನ್ನು ಪಾಟಲೀಪುರದ ಸಿಂಹಾಸನದ ಮೇಲೆ ಸ್ಥಿರವಾಗಿ ಕುಳ್ಳಿರಿಸಲು ಚಾಣಕ್ಯನೆಂಬ ಬ್ರಾಹ್ಮಣನು ಕೈಕೊಂಡ ರಾಜತಂತ್ರಗಳನ್ನು ವಿವರಿಸುವ ಈ ಐತಿಹಾಸಿಕ ಕಥೆ ಎರಡು ಸಾವಿರ ವರುಷಗಳಿಗಿಂತಲೂ ಹಿಂದಿನದು. ಈ ಕಥೆಯನ್ನು ವಿಶಾಖದತ್ತನೆಂಬ ಕವಿ ಸಂಸ್ಕೃತ ಭಾಷೆಯಲ್ಲಿ ನಾಟಕ ರೂಪವಾಗಿ ಮನಸ್ಸನ್ನು ಸೆರೆಹಿಡಿಯುವಂತೆ ರಚಿಸಿದ್ದಾನೆ. ಈ ನಾಟಕವನ್ನೇ ಆಧಾರವಾಗಿಟ್ಟುಕೊಂಡು, ಈ ವಿಷಯಕ್ಕೆ ಸಂಬಂಧಿಸಿದ ನಾಲ್ಕಾರು ಗ್ರಂಥಗಳನ್ನು ಉಪಯೋಗಿಸಿಕೊಂಡು ಈ ಚಿಕ್ಕ ಪುಸ್ತಕವನ್ನು ಬರೆದಿದೆ. ಯಾವ ಒಂದು ಗ್ರಂಥಕ್ಕೂ ಈ ಪುಸ್ತಕ ಋಣಿಯಲ್ಲ; ಆದರೆ ಎಲ್ಲ ಗ್ರಂಥಗಳಿಗೂ ಇದು ಋಣಿ. ಈ ಪುಸ್ತಕದ ಭಾಷೆಯೆಲ್ಲ ಸಂಪೂರ್ಣವಾಗಿ ನನ್ನದು.

ಈ ಸಂದರ್ಭದಲ್ಲಿ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ K73 ನೆಯ ನಂಬರಿನ 'ಮುದ್ರಾಮಂಜೂಷ' ದ ಓಲೆಯ ಪ್ರತಿಯನ್ನು ನನ್ನ ಕೆಲಸಕ್ಕೆ ಆಮೂಲಾಗ್ರವಾಗಿ ಪರಿಶೀಲಿಸಲಾಯಿತು. ಮುದ್ರಿತ ಪುಸ್ತಕಕ್ಕೂ ಓಲೆಯ ಪ್ರತಿಗೂ ಗಮನಾರ್ಹವಾದ ಕೆಲವು ವ್ಯತ್ಯಾಸಗಳು ಕಂಡು ಬಂದ ಕಾರಣ ಅವುಗಳಲ್ಲಿ ಕೆಲವು ಅಂಶಗಳನ್ನು ವಾಚಕರ ಗಮನಕ್ಕೆ ತರಲಾಗಿದೆ.

ಓಲೆಯ ಪ್ರತಿಯಲ್ಲಿ 209 ಓಲೆಗಳಿವೆ. ಅಕ್ಷರಗಳು ಮುದ್ದಾಗಿದ್ದು ಸ್ಫುಟವಾಗಿವೆ. 175 ನೆಯ ಓಲೆ ಒಂದು ಪಕ್ಕದಲ್ಲಿ ಸ್ವಲ್ಪ ಒಡೆದಿದೆ. ಒಂದೆರಡು ಓಲೆಗಳಲ್ಲಿ ಮಾತ್ರ ಬರವಣಿಗೆ ಒಂದು ಪಕ್ಕದಲ್ಲಿದೆ. ಗ್ರಂಥ ಅಸಮಗ್ರ. ಚಂದನದಾಸನನ್ನು ಬಿಡಿಸಿಕೊಳ್ಳಲು ರಾಕ್ಷಸನು ಬಂದಾಗ ಚಾಣಕ್ಯನು ಅವನಿಗೆ ಕಾಣಿಸಿಕೊಂಡು ಅಭಿವಾದನ ಮಾಡುವನಷ್ಟೆ. ಆಗ ರಾಕ್ಷಸನು 'ವಿಷ್ಣುಗುಪ್ತರೆ, ತಾವು ನನಗೆ ನಮಸ್ಕರಿಸಕೂಡದು. ನಾನು ಚಂಡಾಲಸ್ಪರ್ಶದಿಂದ ದೂಷಿತನಾಗಿದ್ದೇನೆ.' ಎನ್ನುತ್ತಾನೆ. ಅಲ್ಲಿಯವರೆಗೆ ಗ್ರಂಥವಿದೆ. ಮುಂದೆ ಹತ್ತಾರು ಬರಿಯ ಓಲೆಗಳಿವೆ. ಗ್ರಂಥವನ್ನು ಪೂರ್ಣಮಾಡಲು ಲಿಪಿಗಾರನಿಗೆ ಏನು ಅಡ್ಡಿ ಬಂತೋ!

ಗ್ರಂಥ ದೇವತಾಸ್ತೋತ್ರರೂಪವಾದ ಸಂಸ್ಕೃತ ಶ್ಲೋಕದಿಂದ ಮೊದಲಾಗುವುದಿಲ್ಲ. ಅವತರಣಿಕೆಯನ್ನೇ ಕವಿ ವಸ್ತುನಿರ್ದೇಶರೂಪವಾದ ಮಂಗಳವೆಂದು ಭಾವಿಸಿದ್ದರೂ ಇರಬಹುದು.

ಗ್ರಂಥ ಈ ರೀತಿ ಮೊದಲಾಗುತ್ತದೆ—

ಸಕಲ ಶ್ರೇಯಸ್ಸನ್ನಪೇಕ್ಷಿಸುತ್ತಿರುವ ಭೂಪತಿಗಳಿಂದ (ಲೂ) ಪ್ರಜ್ಞಾಶಾಲಿಗಳಾದ ಮಂತ್ರಿಗಳಿಂದಲೂ ಅವಶ್ಯವಾಗಿ ತಿಳಿದು ಆಚರಿಸುವವಕ್ಕೆ ಯೋಗ್ಯವಾದ ಸಾಮಾದಿ ಚತುರೋಪಾಯ ಯುಕ್ತವಾಗಿ ಕಾಮಂದಾದಿ ಮುನಿಗಳಿಂದ ಪ್ರಣೀತವಾದ ದಂಡನೀತಿಶಾಸ್ತ್ರ ಪ್ರಯೋಗದಲ್ಲಿ ಪ್ರವೀಣನಾದ ಚಾಣಕ್ಯನೆಂಬ ವಿಪ್ರವರ್ಯನು ತನಗೆ ಅವಮಾನವಂ ಮಾಡಿದ ನವನಂದರನ್ನು ಛದ್ಮನೆಯಿಂದ ನಿಗ್ರಹಿಸಿ ಚಂದ್ರಗುಪ್ತನಿಗೆ ಆ ನಂದರಾಜ್ಯಾಧಿಪತ್ಯವನ್ನು ಉಂಟುಮಾಡಿದನೆಂದು ಸಂಕ್ಷೇಪವಾಗಿ ಪುರಾಣದಲ್ಲಿ ಹೇಳಿದ ಕಥೆಯನ್ನು ಮುದ್ರಾಮಂಜೂಷವೆಂಬ ಗ್ರಂಥದಿಂದ ಆನುಪೂರ್ವಿಕವಾಗಿ ಸುಲಭದಿಂದ ಕಾವ್ಯ ಸರಣಿಯುಕ್ತವಾದ ಕನ್ನಡಭಾಷಾರೂಪದಿಂದ ಪೇಳುತ್ತಲಿದೇನೆ.

ಈ ಭಾಗದಲ್ಲಿ ಮುದ್ರಿತ ಗ್ರಂಥಕ್ಕೂ ಓಲೆಯ ಪ್ರತಿಗೂ ಕಂಡುಬರುವ ಪಾಠಾಂತರಗಳ ಮಾತು ಹಾಗಿರಲಿ. ಇಲ್ಲಿ ಗಮನಿಸತಕ್ಕ ಮುಖ್ಯವಾದ ಮೂರು ಅಂಶಗಳಿವೆ.

(1) ಮುದ್ರಾಮಂಜೂಷವನ್ನು ಬರೆದ ಕವಿ ಕೆಂಪುನಾರಾಯಣನೆಂದು ಇಲ್ಲಿ ಹೇಳಿಲ್ಲ. ಪ್ರತಿ ಅಧ್ಯಾಯದ ಕೊನೆಯಲ್ಲೂ ಕವಿಗೆ ಆಶ್ರಯ ಕೊಟ್ಟ ಮುಮ್ಮಡಿ ಕೃಷ್ಣರಾಜ ಒಡೆಯರ ಬಿರುದಾದ ಮೇಲೆ ಗ್ರಂಥಕರ್ತೃ ನಾರಾಯಣಶರ್ಮನೆಂದು ಹೇಳಿದೆ. ಕೆಂಪುನಾರಾಯಣನೆನ್ನುವುದು ಕವಿಯ ರೂಢನಾಮವಾಗಿದ್ದಿರಬಹುದು.

(2) ಮುದ್ರಾಮಂಜೂಷಕ್ಕೆ ಪೂರಾಣಗಳು ಆಧಾರವಾಗಿರಬಹುದು. ಆದರೆ ಮುದ್ರಾಮಂಜೂಷದ ಉತ್ತರಾರ್ಧದ ಕಥೆ ವಿಶಾಖದತ್ತನ ನಾಟಕದ ಕನ್ನಡದ ಸರಳಗದ್ಯಾನುವಾದ. ಅಲ್ಲದೆ ಪೂರ್ವಕಥೆಗೆ ಕೆಲವು ಸೂಚನೆಗಳನ್ನು ನಾಟಕದಲ್ಲೇ ಕಾಣಬಹುದು. ಕವಿ ಇಲ್ಲಿ ತನ್ನಗ್ರಂಥಋಣವನ್ನು ಒಪ್ಪಿಕೊಳ್ಳದಿರುವುದು ಆಶ್ಚರ್ಯವೇ ಸರಿ. ಈ ವಿಷಯದಲ್ಲಿ ನಾರಾಯಣಶರ್ಮನು ರನ್ನನಂತೆ. ಪಂಪ, ಭಟ್ಟನಾರಾಯಣನನ್ನು ನೆನೆಯದೆ ಕಾಳಿದಾಸ, ಬಾಣರನ್ನು ರನ್ನನು ನೆನೆ

ದಿರುವಂತೆ, ಕಥಾಭಾಗಕ್ಕೆ ಆಧಾರವಾದ ವಿಶಾಖದತ್ತನ ನಾಟಕವನ್ನಾಗಲೀ, ವರ್ಣನಾಭಾಗಕ್ಕೆ ಮೂಲಭೂತವಾದ ಬಾಣನ ಕಾದಂಬರಿಯನ್ನಾಗಲೀ ನೆನೆಯದೆ ನಾರಾಯಣಶರ್ಮನು ಪುರಾಣಗಳನ್ನು ಮಾತ್ರ ಹೆಸರಿಸಿದ್ದಾನೆ. ಇದೂ ಅಲ್ಲದೆ ಮುದ್ರಾಮಂಜೂಷಕ್ಕೆ ಆಧಾರಗಳನ್ನು ಗೊತ್ತುಪಡಿಸುವ ಕಾರ್ಯ ನಡೆಯಬೇಕಾಗಿದೆ.

(3) ಮುದ್ರಾಮಂಜೂಷದ ಸರಣಿ ಸುಲಭವಾದ ಕಾವ್ಯಸರಣಿ. ಈ ಗ್ರಂಥವನ್ನು ಓದಿದವರೆಲ್ಲ ಈ ಅಂಶವನ್ನು ಒಪ್ಪಲೇಬೇಕು. ಇದಕ್ಕೆ ಹೊಂದಿಕೊಳ್ಳುವ ಹಾಗೆ ಈ ಗ್ರಂಥಕ್ಕೆ ಮನಸೋತು ಮುಮ್ಮಡಿ ಕೃಷ್ಣರಾಜ ಒಡೆಯರು ಇದನ್ನು ಆನೆಯ ಮೇಲೆ ಅಂಬಾರಿಯಲ್ಲಿಟ್ಟು ರಾಜಧಾನಿಯ ರಾಜಬೀದಿಗಳಲ್ಲಿ ಮೆರವಣಿಗೆ ಮಾಡಿಸಿದನೆಂಬ ಐತಿಹ್ಯ ಬೇರೆ ಇದೆಯಂತೆ.

ಮುದ್ರಿತ ಗ್ರಂಥದಲ್ಲಿ ಕಂಡುಬರುವ, ಓಲೆಯ ಪ್ರತಿಯಲ್ಲಿಲ್ಲದ ಭಾಗಗಳಿಗೆ ಎರಡು ಉದಾಹರಣೆ—(1) ಸಂಸ್ಕೃತ ಸುಭಾಷಿತ ಪದ್ಯಗಳು ಅವುಗಳ ಮೇಲಿನ ಟೀಕೆ ಓಲೆಯ ಪ್ರತಿಯಲ್ಲಿ ಕಂಡು ಬರುವುದಿಲ್ಲ. (2) ಚಾಣಕ್ಯ ಚಂದ್ರಗುಪ್ತರು ಪಾಟಲೀಪುರದ ಮೇಲೆ ದಂಡೆತ್ತಿ ಬಂದಾಗ ಭಯಗೊಂಡ ಹೆಂಗಸರು, ವರ್ತಕರು ನಾನಾ ರೀತಿಯಲ್ಲಿ ಮಾತನಾಡಿಕೊಳ್ಳುತ್ತಾರೆ. ಆ ಭಾಗವೂ ಓಲೆಯ ಪ್ರತಿಯಲ್ಲಿಲ್ಲ.

ಓಲೆಯ ಪ್ರತಿಯಲ್ಲಿ ಅಲ್ಲಲ್ಲೇ ವರ್ಣನೆಗಳು ಹೆಚ್ಚಾಗಿವೆ. ಮೊದುನೆಯ ಅಧ್ಯಾಯದಲ್ಲಿ ಬರುವ ನಗರ ವರ್ಣನೆ, ನಾಲ್ಕನೆಯ ಅಧ್ಯಾಯದಲ್ಲಿ ಬರುವ ಪರ್ವತರಾಜ್ಯದ ವರ್ಣನೆ ಇವು ಈ ಅಂಶವನ್ನು ಸ್ಪಷ್ಟಪಡಿಸುತ್ತವೆ.

ಓಲೆಯ ಪ್ರತಿಯಲ್ಲಿ ಕಂಡು ಬಂದು ಅರ್ಥಪುಷ್ಟಿ ಕೊಡುವ ನಾಲ್ಕು ಸಂದರ್ಭಗಳು—

(1) ಸಿಂಹಪರೀಕ್ಷೆ ಚಂದ್ರಗುಪ್ತನಿಂದ ನಡೆಯಿತೆಂದು ಅರಿತಾಗ, ನಂದರಿಗೆ ಸಂತೋಷ ಸಂಕಟಗಳು ಏಕಕಾಲದಲ್ಲಿ ಉಂಟಾದವು ಸಿಂಹಪರೀಕ್ಷೆ ತಮ್ಮ ನಗರದಲ್ಲೇ ಆದ ಸಂತೋಷ, ಚಂದ್ರಗುಪ್ತನಂಥ ಬುದ್ಧಿವಂತನಾದ ಹಗೆ ಉಳಿದುದಕ್ಕೆ ಸಂಕಟ. ಚಂದ್ರಗುಪ್ತನನ್ನು ಸೆರೆಯಿಂದ ಬಿಡಿಸಬೇಕೇ, ಬೇಡವೇ ಎಂದು ಅದರ ಮನಸ್ಸು ತೂಗಾಡುತ್ತಿತ್ತು.

ಇದನ್ನರಿತ ವಕ್ರನಾಸನೆಂಬ ಮಂತ್ರಿ ನಂದರಿಗೆ 'ಚಂದ್ರಗುಪ್ತನಲ್ಲಿ ಅನುಗ್ರಹವನ್ನುಂಟುಮಾಡಲು ಅವರಿಗೆ 'ಚಂದ್ರಗುಪ್ತನು ತಮ್ಮನ್ನೇ ನಂಬಿರುತ್ತಾನೆ' ಎನ್ನುವನು. 'ತಮ್ಮನ್ನೇ ನಂಬಿರುವ' ಎಂಬ ಮಾತು ಸನ್ನಿವೇಶಕ್ಕೆ ಉಚಿತವಾಗಿಲ್ಲವೇ?

(2) ಚಕ್ರವರ್ತಿಯ ಮೊಮ್ಮಗನನ್ನು ಅನ್ನಸತ್ರಾಧಿಕಾರಿಯಾಗಿ ನಿಯಮಿಸಿದರೆ ಎಲ್ಲಿ ನೊಂದುಕೊಳ್ಳುವನೋ ಎಂದಳುಕಿ ಅವನನ್ನು ಸಮಾಧಾನಗೊಳಿಸಲು ಸುಮತಿ ಎಂಬ ಮಂತ್ರಿ ಅವನಿಗೆ ಈ ರೀತಿ ಹೇಳುತ್ತಾನೆ—

ಚಂದ್ರಗುಪ್ತನೇ, ನೀನು ಮಾಡಿದ ಸಿಂಹಪಂಜರಪರೀಕ್ಷೆಗೆ ಪ್ರಭುಗಳು ಸುಪ್ರೀತರಾಗಿ ನಿನಗೆ ನೇಮಿಸಿರುವ ಅಧಿಕಾರವೇನೆಂದರೆ— ನೀನು ಪ್ರಭುಗಳಿಗೆ ಸ್ವಜನವಾದುದರಿಂದ ತಾವೇ ಜಾಗ್ರತೆಯಾಗಿ ವಿಚಾರಿಸುವ ಬ್ರಾಹ್ಮಣ ಭೋಜನದ ಸತ್ರದ ವಿಚಾರವಂ ವಿಚಾರಿಸಿಕೊಂಡು ಇರುವಂತೆ ನೇಮಿಸಿದ್ದಾರೆ. ನಿನ್ನ ಮನೋಗತವೇನು?

ಚಂದ್ರಗುಪ್ತ (ದಂಡಪ್ರಣಾಮಂ ಗೈದು)—ಮಹಾಸ್ವಾಮಿಯವರ ಅಪ್ಪಣೆಯ ಮೇರೆಗೆ ಮತ್ತೊಂದನ್ನಪೇಕ್ಷಿಸದೆ ಅನ್ನಸತ್ರಾಧಿಕಾರವಂ ವಿಚಾರಿಸುತ್ತ ಅನುಗ್ರಹಕ್ಕೆ ಪಾತ್ರನಾಗಿಹೆನು.

ನಂದರ ಕಪಟ, ಚಂದ್ರಗುಪ್ತನ ನಿಸ್ಸಹಾಯತೆ ಇಲ್ಲಿ ನಯವಾಗಿ ಹೇಗೆ ಪ್ರಕಟವಾಗಿವೆ!

(3) ಮಧ್ಯಾಹ್ನದ ವೇಳೆಗೆ ಬೇಟೆಯಾಡಿ ನಂದರು ಅನ್ನಸತ್ರದ ಬಳಿಗೆ ಬಂದರು. ಅಲ್ಲಿ ವಿಪ್ರರ ವೇದಘೋಷ ಕೇಳಿಸಿತು. ವೇದಘೋಷ ಕೇಳಲು ಬಲು ಇಂಪು. ಇದನ್ನು ಕೇಳಿದ ಹಾಗಾಯಿತು; ಆಯಾಸವನ್ನು ಪರಿಹರಿಸಿಕೊಂಡು, ಅನ್ನಸತ್ರದಲ್ಲಿ ಬ್ರಾಹ್ಮಣರ ಭೋಜನ ಪಂಕ್ತಿಯನ್ನು ನೋಡಿದ ಹಾಗಾಯಿತು ಎಂದುಕೊಂಡು ನಂದರು ಅನ್ನಸತ್ರದ ಬಳಿಗೆ ಬಂದರು. ಚಾಣಕ್ಯನೊಡನೆ ಸಂಚು ನಡೆಸಿದ್ದ ಚಂದ್ರಗುಪ್ತನು ನಂದರ ಬಳಿಗೆ ಬಂದು, ಅನ್ನಸತ್ರದೊಳಗೆ ಬರಬೇಕೆಂದು ಅವರನ್ನು ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತಾನೆ. ಸಂದರ್ಭ ಎಷ್ಟು ಉಚಿತವಾಗಿದೆ!

(4) ಕಮಲಾಪೀಡನು ಬರೆದ ಕಾಗದವನ್ನು ನೋಡಿಕೊಂಡು

ಚಾಣಕ್ಯನು ತನ್ನ ಕಾಗದಕ್ಕೆ ಕಾಶೀರಾಜನು ಪ್ರತಿಯಾಗಿ ಮಾಡಿದ ಕಾರ್ಯವನೆಲ್ಲ ವಿವರವಾಗಿ ಊಹಿಸಿಕೊಂಡನು. ಆಮೇಲೆ ಚಾಣಕ್ಯನ ಮನಸ್ಸಿನಲ್ಲಿ ಒಂದು ಪ್ರಶ್ನೆ ತಲೆದೋರಿತು. ಕಾಶೀರಾಜನು ಈ ಕೆಲಸವನ್ನೆಲ್ಲ ಏಕೆ ಮಾಡಿದ ? ಇದಕ್ಕೆ ಉತ್ತರ—ನಂದರ ಪ್ರಸಾದವನ್ನು ಬಯಸಿ. ಈ ಉತ್ತರ ಸನ್ನಿವೇಶಕ್ಕೆ ಹೊಸ ಬೆಳಕನ್ನು ಬೀರುವುದಲ್ಲದೆ, ಚಾಣಕ್ಯನ ಬುದ್ಧಿಶಕ್ತಿಯನ್ನು ಚೆನ್ನಾಗಿ ತೋರಿಸುತ್ತದೆ.

ಓಲೆಯ ಪ್ರತಿಯಲ್ಲಿ ಅನೇಕರ ಮಾತುಗಳು ಸ್ಥಾನಪಲ್ಲಟವಾಗಿವೆ. ಉದಾಹರಣೆಗೆ ಎರಡು ಸೇನೆಗಳು ಒಂದೇ ಸ್ಥಳದಲ್ಲಿ ನಿಂತರೆ ಉಂಟಾಗುವ ಕಷ್ಟ ನಷ್ಟಗಳನ್ನು ಶೇಖರನಿಗೆ ವಿವರಿಸುವವನು ಚಾಣಕ್ಯನಲ್ಲ; ಪರ್ವತರಾಜ.

ಓಲೆಯ ಪ್ರತಿಗೂ ಮುದ್ರಿತಗ್ರಂಥಕ್ಕೂ ಭಿನ್ನಪಾಠಗಳು ಹೇರಳವಾಗಿ ಕಂಡುಬರುತ್ತವೆ. ಇಲ್ಲಿ ಬರುವ ಕೆಲವು ಹೊಸಶಬ್ದಗಳೂ, ಅಪೂರ್ವ ಪ್ರಯೋಗಗಳೂ ಭಾಷಾಚರಿತ್ರೆಯ ದೃಷ್ಟಿಯಿಂದ ಅಭ್ಯಾಸ ಮಾಡಲು ಯೋಗ್ಯವಾಗಿವೆ. ಮುದ್ರಾಮಂಜೂಷದ ಕನ್ನಡ, ಹಿಂದಿನ ಸಂಸ್ಕೃತದ ಶೈಲಿಯನ್ನು ಬಿಡಲಾರದು; ಆದರೆ ಅದಕ್ಕೆ ಇಂಗ್ಲೀಷ್ ಭಾಷೆಯ ಪ್ರಭಾವ ಇನ್ನೂ ತಟ್ಟಿಲ್ಲ. ಅದು ಸಂಧಿಕಾಲದ ಕನ್ನಡ. ಕಳೆದ ಶತಮಾನದ ಕನ್ನಡಭಾಷೆಯ ಸ್ವರೂಪವನ್ನರಿಯುವ ಕುತೂಹಲವುಳ್ಳವರು ಈ ಓಲೆಯ ಪ್ರತಿಯನ್ನು ಪರಿಶೀಲಿಸಬಹುದು. ಓಲೆಯ ಪ್ರತಿಯನ್ನು ಪರಿಶೀಲಿಸುವಾಗ ನನ್ನ ಗಮನ ಕಥೆಯ ಮೇಲಿತ್ತು; ಭಾಷೆಯ ಮೇಲಲ್ಲ. ಆನುಷಂಗಿಕವಾಗಿ ದೊರೆತ ವಿಷಯಗಳಲ್ಲಿ ಕೆಲವನ್ನು ಇಲ್ಲಿ ತಿಳಿಸಿದ್ದೇನೆ; ವಿವರಗಳಿಗೆ ಕೈಹಾಕಿಲ್ಲ.

ಅಕ್ಷರಪ್ರಚಾರ ಸಮಿತಿಯ ಸಂಚಾಲಕರಾದ ಶ್ರೀಮಾನ್ ಎಸ್. ವಿ. ಶ್ರೀನಿವಾಸರಾವ್, ಬಿ.ಎ., ಬಿ.ಟಿ. ಅವರ ಪ್ರೋತ್ಸಾಹ ಬೆಂಬಲಗಳಿಂದ ಈ ಚಿಕ್ಕ ಪುಸ್ತಕವನ್ನು ವಯಸ್ಕರ ಶಿಕ್ಷಣ ಪುಸ್ತಕಮಾಲೆಗಾಗಿ ಮೊದಲು ಬರೆಯಲಾಯಿತು. ಆದರೆ ಆ ಮಾಲೆಯ ಪುಸ್ತಕಗಳ ಪ್ರಮಾಣವನ್ನು ಇದು ಮೀರಿದ ಕಾರಣ ಈ ರೀತಿಯಾಗಿ ಪುಸ್ತಕ ರೂಪದಲ್ಲಿ ಹೊರಬಿದ್ದಿದೆ. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಇದರ ಭಾಷೆಯನ್ನು ಅಲ್ಲಲ್ಲಿ ತಿದ್ದಲಾಗಿದೆ. ಇದರಲ್ಲಿ ಲೋಪದೋಷ

ಗಳಿವೆಯೆಂಬುದನ್ನು ಇತರರಿಗಿಂತಲೂ ನಾನು ಚೆನ್ನಾಗಿ ಬಲ್ಲೆ. ಈ ಸುಂದರವಾದ ಕಥೆ ನಮ್ಮ ಜನರ ಮೆಚ್ಚಿಗೆಯನ್ನು ಪಡೆದು, ಇನ್ನೊಮ್ಮೆ ಇದನ್ನು ಅಚ್ಚು ಮಾಡಿಸುವ ಸುಯೋಗ ದೊರೆತರೆ, ಆಗ ಈ ಪುಸ್ತಕ ವನ್ನು ಪರಿಷ್ಕರಿಸಬೇಕೆಂಬ ಬಯಕೆ ಇದೆ.

ಈ ಚಿಕ್ಕ ಪುಸ್ತಕ ನನ್ನ ಇಬ್ಬರು ವಿದ್ಯಾಗುರುಗಳ ಹರಕೆಯನ್ನು ಹೊತ್ತು ತಂದಿದೆ. ಪ್ರೊ. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರೂ, ಶ್ರೀಮಾನ್ ಟಿ. ಎನ್. ಶ್ರೀಕಂಠಯ್ಯ, ಎಂ.ಎ. ಅವರೂ ಈ ನನ್ನ ಚಿಕ್ಕ ಉದ್ಯಮಕ್ಕೆ ದಾರಿತೋರಿ, ಯಶಸ್ಸನ್ನು ಕೋರಿದ್ದಾರೆ. 'ರಾಕ್ಷಸನ ಮುದ್ರಿಕೆಯ' ಮೂರು ಪದ್ಯಗಳು ಶ್ರೀಮಾನ್ ಶ್ರೀಕಂಠಯ್ಯನವರ ಅನುಮತಿಯಿಂದಲೇ ಇಲ್ಲಿ ಮುದ್ರಿತವಾಗಿವೆ. ಈ ಇಬ್ಬರು ಗುರು ಗಳನ್ನೂ ಭಕ್ತಿಭಾವದಿಂದ ವಂದಿಸುತ್ತೇನೆ. 'ಮುದ್ರಾಮಂಜೂಷ'ದ ಪ್ರತಿಯನ್ನು ಉಪಯೋಗಿಸಿಕೊಳ್ಳಲು ಅವಕಾಶ ಕೊಟ್ಟ ಮೈಸೂರು ಓರಿಯಂಟಲ್ ಲೈಬ್ರರಿಯ ಮುಖ್ಯಾಧಿಕಾರಿಗಳಾದ ಶ್ರೀಮಾನ್ ಎಚ್. ಆರ್. ರಂಗಸ್ವಾಮಿ ಅಯಂಗಾರ್, ಎಂ.ಎ. ಅವರಿಗೂ ಈ ನನ್ನ ಅಲ್ಪ ಯತ್ನಕ್ಕೆ ಮೊದಲಿನಿಂದಲೂ ಬೆಂಬಲಕೊಟ್ಟ ನನ್ನ ಮಿತ್ರರು, ಶ್ರೀಯುತ ರಾದ ಟಿ. ಶ್ರಿನೀವಾಸಮೂರ್ತಿ ಎಂ.ಎ. ಬಿ.ಟಿ., ಟಿ ಎಸ್. ಶಾಮ ರಾವ್, ಬಿ.ಎ. (ಆನರ್ಸ್) ಇವರಿಗೂ, ಬರವಣಿಗೆಯಲ್ಲಿ ನನಗೆ ನೆರ ವಾದ ನನ್ನ ಶಿಷ್ಯ ಚಿ|| ಆರ್. ಕೃಷ್ಣಮೂರ್ತಿಗೂ ನನ್ನ ಕೃತಜ್ಞತೆ ಯನ್ನು ಸಲ್ಲಿಸುತ್ತೇನೆ.

ಎಚ್. ಎಂ. ಶಂಕರನಾರಾಯಣರಾವ್,
ಕನ್ನಡ ಅಧ್ಯಾಪಕರು
ಡಿ. ಬನುಮಯ್ಯನವರ ಹೈಸ್ಕೂಲು
ಮತ್ತು
ಶಾರದಾವಿಲಾಸ ಇಂಟರ್‌ಮಿಾಡಿಯೆಟ್ ಕಾಲೇಜು

ಬೃಹಸ್ಪತ್ಯಾಶ್ರಮ,
ಮೈಸೂರು.
ತಾ|| ೨೫ ಜನವರಿ ೪೬

# ಚಂದ್ರಗುಪ್ತ ವಿಜಯ

## ೧. ಪರಿಚಯ

ಗೌಡದೇಶದಲ್ಲಿ ಹರಿಯುತ್ತಿರುವ ಪವಿತ್ರವಾದ ಗಂಗಾನದಿಯ ತೀರ ದಲ್ಲಿ ಬಹುಕಾಲದ ಹಿಂದೆ ಪಾಟಲೀಪುರವೆಂಬ ಸುಂದರವಾದ ಪಟ್ಟಣ ವೊಂದು ಕಂಗೊಳಿಸುತ್ತಿತ್ತು. ಆ ನಗರದಲ್ಲಿ ಚಂದ್ರವಂಶದ ರಾಜನಾದ ಸರ್ವಾರ್ಥಸಿದ್ಧಿರಾಜನು ರತ್ನಸಿಂಹಾಸನಾರೂಢನಾಗಿ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಈ ಮಹಾರಾಜನಿಗೆ ವಕ್ರನಾಸನೇ ಮೊದಲಾದ ಎಂಟು ಜನ ಮಂತ್ರಿಗಳಿದ್ದರು. ಇವರಲ್ಲೊಬ್ಬನಾದ ಅಮಾತ್ಯರಾಕ್ಷಸನು ಬಹು ಬುದ್ಧಿವಂತ, ವಿವೇಕಿ; ಶೂರ ಮತ್ತು ಸ್ವಾಮಿಭಕ್ತ. ಈತನು ತನ್ನ ಶೌರ್ಯದಿಂದಲೂ, ಬುದ್ಧಿಬಲದಿಂದಲೂ ಅನೇಕ ರಾಜರನ್ನು ಗೆದ್ದು, ಅವರನ್ನು ತನ್ನ ರಾಜನ ವಶವರ್ತಿಗಳ ನ್ನಾಗಿ ಮಾಡಿ, ರಾಜ್ಯ ಕೋಶಗಳನ್ನು ಹೆಚ್ಚಿಸಿದ್ದನು. ಶೌರ್ಯಾದಿ ಗುಣಗಳಿಂದ ಕೂಡಿದ ಈ ಅಮಾತ್ಯನನ್ನು ಕಂಡರೆ ರಾಜನಿಗೆ ಬಲು ಮಮತೆ. ನಾಡನ್ನು ವಿವೇಕದಿಂದ ಆಳುತ್ತಿದ್ದ ಕಾರಣ, ಜನರಿಗೂ ಅಮಾತ್ಯನು ಅಚ್ಚುಮೆಚ್ಚು.

ಸರ್ವಾರ್ಥಸಿದ್ಧಿರಾಯನಿಗೆ ಇಬ್ಬರು ಹೆಂಡಿರು. ಸುನಂದಾದೇವಿ ಪಟ್ಟದರಾಣಿ. ರತಿಯಂತೆ ಚೆಲುವೆಯಾದ ಮುರಾದೇವಿ ರಾಯನ ಬಂಗಾರದ ಹೆಂಡತಿ. ಸಕಲ ಭೋಗಭಾಗ್ಯಗಳಿಂದ ಕೂಡಿದ ರಾಜನು, ದಕ್ಷನಾದ ಅಮಾತ್ಯರಾಕ್ಷಸನಿಗೆ ರಾಜ್ಯಭಾರವನ್ನು ವಹಿಸಿ ಸುಖವಾಗಿ ತನ್ನ ಹೆಂಡಿರೊಡನೆ ಕಾಲ ಕಳೆಯುತ್ತಿದ್ದನು. ಹೀಗಿರಲು ಕಾಲಕ್ರಮ ದಲ್ಲಿ ವೀತಿಹೋತ್ರರೆಂಬ ಮುನಿಗಳ ಅನುಗ್ರಹದಿಂದ ರಾಜನಿಗೆ ಮುರಾ ದೇವಿಯಲ್ಲಿ ಒಬ್ಬ ಮಗನೂ, ಪಟ್ಟಮಹಿಷಿಯಾದ ಸುನಂದಾದೇವಿಯಲ್ಲಿ ಒಂಬತ್ತು ಜನ ಗಂಡುಮಕ್ಕಳೂ ಹುಟ್ಟಿದರು. ಮುರಾದೇವಿಯ ಮಗನ ಹೆಸರು ಮೌರ್ಯನೆಂದು. ಸುನಂದಾದೇವಿಯ ಒಂಬತ್ತು ಜನ ಮಕ್ಕ ಳಿಗೂ ರಾಜನು ನಂದಶಬ್ದಪೂರ್ವಕವಾಗಿ ನಾಮಕರಣ ಮಾಡಿದನು. ಬಿದಿಗೆಯ ಚಂದ್ರನಂತೆ ದಿನ ದಿನಕ್ಕೆ ಬೆಳೆಯುತ್ತಿದ್ದ ಮಕ್ಕಳನ್ನು ನೋಡಿ ರಾಜನು ಸಂತೋಷದಿಂದಿದ್ದನು.

# ಮೌರ್ಯರ ಮರಣ

ಕಾಲ ಕಳೆದಂತೆಲ್ಲ ಮೌರ್ಯನು ಬೆಳೆದು ದೊಡ್ಡವನಾದನು. ರಾಜನು ತನ್ನ ಹಿರಿಯ ಮಗನಿಗೆ ಓದುಬರಹಗಳನ್ನು ಕಲಿಸಿ ನಿಪುಣನನ್ನಾಗಿ ಮಾಡಿದನು. ವಿದ್ಯಾಭ್ಯಾಸ ಮುಗಿದ ಮೇಲೆ ಅನೇಕ ಹೆಣ್ಣುಗಳನ್ನು ತಂದು ಮಗನಿಗೆ ಮದುವೆ ಮಾಡಿದನು. ಶೂರನಾದ ಮೌರ್ಯನಾದರೋ ಒಳ್ಳೆಯವನು, ವಿನಯಶಾಲಿ. ರಾಜ್ಯವಾಳುವುದರಲ್ಲಿ ತಂದೆಗೆ ನೆರವಾಗಿ ನಿಂತನು. ಹಿರಿಯರ ಮಾತೆಂದರೆ ಮೌರ್ಯನಿಗೆ ತುಂಬ ಗೌರವ. ನಾಡಿನ ಜನರಿಗಾದರೋ ಈ ಬಂಗಾರದ ರಾಜಕುಮಾರನನ್ನು ಕಂಡರೆ ಪಂಚಪ್ರಾಣ. ಮೌರ್ಯನಿಗೆ ಇವನ ಹೆಂಡಿರಲ್ಲಿ ಚಂದ್ರಗುಪ್ತನೇ ಮೊದಲಾದ ನೂರುಮಂದಿ ಮಕ್ಕಳಾದರು.

ಇತ್ತ ನವನಂದರೂ ಬೆಳೆದರು. ರಾಕ್ಷಸನು ರಾಜಕುಮಾರರಿಗೆ ಬೇಕಾದ ಎಲ್ಲ ವಿದ್ಯೆಗಳನ್ನೂ ನಂದರಿಗೆ ಕಲಿಸಿದನು. ತನ್ನ ಎಲ್ಲ ಮಕ್ಕಳೂ ನಿಪುಣರಾದುದನ್ನು ನೋಡಿ, ತಂದೆಗೆ ಸಂತೋಷವಾಯಿತು. ಈ ವೇಳೆಗೆ ರಾಜನಿಗೆ ಮುಪ್ಪು ಬಂದಿತ್ತು ; ಆದ್ದರಿಂದ ರಾಜನು ನಂದರಲ್ಲಿ ಹಿರಿಯನನ್ನು ಯುವರಾಜನನ್ನಾಗಿ ಮಾಡಿದನು. ಒಗ್ಗಟ್ಟಿನಲ್ಲಿ ಬಲವಿರುವುದನ್ನರಿತು, ಉಳಿದವರು ಅಣ್ಣನ ಮಾತಿನಂತೆ ನಡೆಯುತ್ತಿದ್ದರು. ಕಾಲಕ್ರಮದಲ್ಲಿ ಇವರೆಲ್ಲರಿಗೂ ಮದುವೆಯಾಯಿತು.

ಓದುಬರಹಗಳನ್ನು ಕಲಿಸಿ ಮಕ್ಕಳನ್ನು ಚೆನ್ನಾಗಿ ಬೆಳೆಸುವುದು ತಂದೆಯ ಕರ್ತವ್ಯ. ಮೌರ್ಯನು ತನ್ನ ಈ ಕರ್ತವ್ಯಪಾಲನೆಯಲ್ಲಿ ಹಿಂದಾಗಲಿಲ್ಲ. ತನ್ನ ನೂರುಮಂದಿ ಮಕ್ಕಳನ್ನೂ ಜಾಣರನ್ನಾಗಿ ಮಾಡಿದನು. ವಿದ್ಯೆಕಲಿತು ಕೈನೆರೆಗೆ ಬಂದ ಮಕ್ಕಳು ತಂದೆಗೊಂದು ಹೆಮ್ಮೆ. ದಾಯಾದಿಗಳ ಈ ಏಳಿಗೆಯನ್ನು ಕಂಡು ನಂದರಿಗೆ ಹೊಟ್ಟೆ ಉರಿಯಿತು. ‘ ಹುಟ್ಟುತ್ತ ಅಣ್ಣತಮ್ಮಂದಿರು, ಬೆಳೆಯುತ್ತ ದಾಯಾದಿಗಳು ’ ಎನ್ನುವುದು ಸತ್ಯವಾದ ಮಾತು. ನಂದರೆಲ್ಲ ಈಗ ಒಟ್ಟಾಗಿ ಸೇರಿ ಈ ರೀತಿ ಯೋಚಿಸಿದರು ‘ ಈ ಮೌರ್ಯರು ಎಲ್ಲ ವಿಷಯಗಳಲ್ಲೂ ನಮಗಿಂತ ಕುಶಲರು. ಈಗ ನಾವು ಕಾಲಕಳೆದರೆ ಮುಂದೆ ಇವರು ನಮ್ಮ ಅರಸುತನವನ್ನೇ ಬಯಸಬಹುದು. ದೇಹದಲ್ಲಿ ಹುಟ್ಟಿದ ರೋಗ ದೇಹ

ವನ್ನೇ ನಾಶಮಾಡುವಂತೆ, ಕಾಲಕ್ರಮದಲ್ಲಿ ಇವರು ನಮ್ಮನ್ನೇ ನಾಶ ಮಾಡಬಹುದು. ಆದ್ದರಿಂದ ಇವರನ್ನು ಕೂಡಲೇ ಕೊಲ್ಲಬೇಕು. ಇಲ್ಲದಿದ್ದರೆ ಇವರಿಂದ ನಮಗೆ ಕೇಡು ತಪ್ಪದು.'

ನಂದರು ಈ ವಿಷಯವನ್ನು ರಾಕ್ಷಸನೊಡನೆ ಗುಟ್ಟಾಗಿ ಆಲೋಚಿಸಿದರು. ರಾಜಕುಮಾರರ ಮಾತು ರಾಕ್ಷಸನಿಗೆ ಹಿತವೆನಿಸಲಿಲ್ಲ. ಅವನು ಅವರಿಗೆ ' ರಾಜಕುಮಾರರೇ! ಮೌರ್ಯರು ಬಲು ಒಳ್ಳೆಯವರು; ಜನರಿಗೆ ಬೇಕಾದವರು. ಅವರನ್ನು ನೀವು ಕೊಂದರೆ ನಿಮಗೆ ಅಪವಾದ ಬರುತ್ತದೆ. ರಾಜನಿಗೆ ಜನರ ನಂಬಿಕೆ ಅಗತ್ಯ. ಅದನ್ನು ನೀವು ಕಳೆದುಕೊಳ್ಳುತ್ತೀರಿ. ಮೌರ್ಯರು ಮುಂದೆ ನಿಮಗೆ ಹಗೆಗಳಾದಾರೆಂದು ಹೆದರುವಿರಿ ತಾನೆ? ಇದಕ್ಕೆ ಒಂದು ಉಪಾಯ ಹೇಳುತ್ತೇನೆ. ' ಕಳ್ಳ! ಕಳ್ಳ! ಹುಲಿ ಇರಿ ' ಎಂಬ ಗಾದೆಯಂತೆ ಇವರನ್ನು ಹಗೆಗಳ ಮೇಲೆ ಕಳುಹಿಸಿ ಕೊಡಿ. ಹೀಗೆ ಮಾಡುವುದರಿಂದ ಮೂರು ಪ್ರಯೋಜನಗಳುಂಟು—ನಿಮಗೆ ಅಪವಾದ ತಪ್ಪುತ್ತದೆ, ನಿಮ್ಮ ಹಗೆಗಳು ನಾಶವಾಗುತ್ತಾರೆ, ಮೌರ್ಯರೂ ಮರಣ ಹೊಂದುತ್ತಾರೆ ' ಎಂದನು.

ರಾಕ್ಷಸನ ಮಾತು ನಂದರಿಗೆ ರುಚಿಸಲಿಲ್ಲ. ಅದಕ್ಕೆ ಅವರು ರಾಕ್ಷಸನಿಗೆ ' ಮೌರ್ಯರು ಹಗೆಗಳಿಂದ ಹತರಾದರೆ ಒಳ್ಳೆಯದೇ ಆಯಿತು. ಹಾಗಲ್ಲದೆ ಹಗೆಗಳನ್ನೇ ಇವರು ಕೊಂದರೆ ಇವರಿಗೆ ಕೀರ್ತಿ ಬರುತ್ತದೆ. ಆದ್ದರಿಂದ ಬೇರೆ ಉಪಾಯದಿಂದಲೇ ಇವರನ್ನು ಕೊಲ್ಲಬೇಕು. ಆದರೆ ಅಮಾತ್ಯರೇ! ಒಂದು ಮಾತು. ಈ ನಮ್ಮ ಆಲೋಚನೆ ತಮ್ಮಲ್ಲಿಯೇ ಇರಲಿ. ಗುಟ್ಟು ರಟ್ಟಾದರೆ ಪ್ರಮಾದವಾದೀತು ' ಎಂದು ಅವನನ್ನು ಬೀಳ್ಕೊಟ್ಟರು.

ಮೌರ್ಯರನ್ನು ಹೇಗೆ ಕೊಲ್ಲಬೇಕೆಂದು ನಂದರು ತಮ್ಮಲ್ಲಿಯೇ ಯೋಚಿಸಿಕೊಂಡರು. ಮರುದಿವಸ ದಾರುವರ್ಮನೆಂಬ ಶಿಲ್ಪಿಯನ್ನು ಕರೆದು ' ಊರ ಹೊರಗಡೆ ಉದ್ಯಾನದಲ್ಲಿ ವಿಸ್ತಾರವಾದ ಒಂದು ಅರಮನೆಯನ್ನು ಕಟ್ಟು. ಅದರ ಕೆಳಗಡೆ ಒಂದು ನೆಲಮಾಳಿಗೆ ನಿರ್ಮಿತವಾಗಲಿ. ಆ ಅರಮನೆಯ ಮುಂದೆ ಒಂದು ಸರೋವರ, ಅದರ ಸುತ್ತಲೂ ಲತಾಮಂಟಪಗಳು ರಚಿತವಾಗಲಿ. ಇದೆಲ್ಲ ಸಿದ್ಧವಾದ ಮೇಲೆ ನೀನು ಮಾತ್ರ ಅಲ್ಲಿಯೇ ಕಾದಿರು ' ಎಂದು ಅವನಿಗೆ ಅಪ್ಪಣೆ ಮಾಡಿದರು.

ಕೆಲವು ದಿನಗಳಲ್ಲೇ ನೆಲಮಾಳಿಗೆ ಸಿದ್ಧವಾಯಿತು.

ಹೀಗಿರಲು ಮಾಘಮಾಸ ಬಂತು. ಪ್ರಯಾಗಕ್ಕೆ ಹೋಗಿ ತ್ರಿವೇಣೀ ಸಂಗಮದಲ್ಲಿ ಸ್ನಾನಮಾಡಿ ಬರಲು ರಾಜನಿಗೆ ಮನಸ್ಸಾಯಿತು. ಮೌರ್ಯ ರನ್ನು ಕೊಲ್ಲುವ ನಂದರ ಕೆಟ್ಟಯೋಚನೆ ರಾಕ್ಷಸನಿಗೆ ತಿಳಿದಿದ್ದಿತಷ್ಟೆ. ಪಟ್ಟಣದಲ್ಲಿದ್ದರೆ ತನಗೂ ಅಪವಾದ ತಟ್ಟುವುದೆಂದು ಯೋಚಿಸಿ, ರಾಕ್ಷಸನೂ ರಾಜನೊಡನೆ ಪ್ರಯಾಗಕ್ಕೆ ಹೊರಟನು. ರಾಜನ ಪ್ರಯಾಣದ ಸಮಾಚಾರ ಕೇಳಿ ನಂದರಿಗೆ ಬಲು ಸಂತೋಷವಾಯಿತು. ಏಕೆಂದರೆ ಮೌರ್ಯರನ್ನು ಕೊಲ್ಲಲು ಇದೇ ತಕ್ಕಕಾಲ. ಹೆಚ್ಚು ಉತ್ಸಾಹದಿಂದ ಅವರು ತಂದೆಯ ಪ್ರಯಾಣಕ್ಕೆ ಬೇಕಾದ ಅನುಕೂಲಗಳನ್ನು ಮಾಡಿಕೊಟ್ಟರು.

ರಾಜನು ಪ್ರಯಾಗಕ್ಕೆ ತೆರಳಿದನು. ಹೆಚ್ಚು ಕಾಲಕಳೆಯಲು ಇಷ್ಟಪಡದೆ, ನಂದರು ತಾವು ಮಾರನೆಯ ದಿನ ಬೇಟೆಗೆ ಹೋಗುವ ಸಮಾಚಾರವನ್ನು ಊರಿನಲ್ಲಿ ಹಬ್ಬಿಸಿದರು. ಬೇಟೆಗಾರರು ಬಲೆ ಮುಂತಾದ ಸಾಮಾನುಗಳೊಡನೆ ಮುಂಚೆಯೇ ಕಾಡಿಗೆ ಹೋಗಿದ್ದರು. ಬೇಟೆಯಾದ ಮೇಲೆ ಉದ್ಯಾನದ ಅರಮನೆಯಲ್ಲಿ ಭೋಜನಕ್ಕೆ ಏರ್ಪಾಟಾಗಿತ್ತು. ಇಷ್ಟೆಲ್ಲ ಏರ್ಪಾಟು ಮುಗಿದ ಮೇಲೆ ನಂದರು ಮೌರ್ಯನ ಮಕ್ಕಳನ್ನೂ ಮೌರ್ಯನನ್ನೂ ಕರೆಕಳುಹಿಸಿ ಅವರಿಗೆ "ಅಣ್ಣಂದಿರಾ! ಬೇಟೆಯಲ್ಲಿ ಸೋಜಿಗವುಂಟೆಂದು ಕೇಳಿರುವೆವು. ಈ ದಿನ ನಾವೆಲ್ಲ ಬೇಟೆಯಾಡಲು ಹೋಗೋಣ. ಬೇಟೆ ಆದಮೇಲೆ ಇಷ್ಟಮಿತ್ರರೊಡನೆ ಊರ ಹೊರಗಣ ಉದ್ಯಾನದಲ್ಲಿ ವನಭೋಜನ ಮಾಡಿ ನಾಳೆ ಪಟ್ಟಣಕ್ಕೆ ಹಿಂದಿರುಗೋಣ. ತಂದೆ ಬಂದ ಮೇಲೆ ಇದಕ್ಕೆ ಒಪ್ಪುವರೋ ಇಲ್ಲವೋ ತಿಳಿಯದು. ಆದ್ದರಿಂದ ಈಗಲೇ ಹೊರಡಬೇಕು" ಎಂದು ಬಲವಂತಪಡಿಸಿದರು. ನಂದರ ಮೋಸವನ್ನರಿಯದೆ ಮೌರ್ಯನು ಆ ಮಾತಿಗೆ ಒಪ್ಪಿ, ಮಕ್ಕಳೊಡನೆ ಬೇಟೆಗೆ ಹೊರಟನು.

ಬೇಟೆ ಮುಗಿಯಿತು. ಬೇಟೆಯ ಆಯಾಸವನ್ನು ಕಳೆದುಕೊಳ್ಳಲು, ರಾಜಕುಮಾರರು ಉದ್ಯಾನದ ಮರಗಳ ನೆರಳಿನಲ್ಲಿ ಕುಳಿತು ವಿಶ್ರಮಿಸಿಕೊಂಡರು. ಕೊಂಚ ಕಾಲವಾದಮೇಲೆ ನೀರಾಟವಾಡಿ,

ಬಟ್ಟೆಬರೆಗಳಿಂದ ದೇಹವನ್ನು ಅಲಂಕರಿಸಿಕೊಂಡರು. ಈ ವೇಳೆಗೆ ಭೋಜನ ಸಿದ್ಧವಾಗಿತ್ತು. ನಂದರು ತಮ್ಮ ಇಷ್ಟಮಿತ್ರರಿಗೆ ಉದ್ಯಾನದ ಅರಮನೆಯಲ್ಲಿ ಭೋಜನಕ್ಕೆ ಏರ್ಪಡಿಸಿದ್ದರು. 'ನಾವೆಲ್ಲ ನೆಲ ಮಾಳಿಗೆಯಲ್ಲಿ ಊಟಕ್ಕೆ ಕೂಡೋಣ. ಅದೇ ನಮಗೆ ತಕ್ಕ ಸ್ಥಳ' ಎಂದು ಹೇಳಿ ಮೌರ್ಯನನ್ನು ಮಕ್ಕಳು ಸಮೇತ ಅಲ್ಲಿ ಕುಳ್ಳಿರಿಸಿದರು. ತಾವೂ ಅಲ್ಲಿಯೇ ಕುಳಿತುಕೊಳ್ಳುವರಂತೆ ನಟಿಸುತ್ತ, ಮೇಲಕ್ಕೆ ಹೋಗುತ್ತ ಕೆಳಕ್ಕೆ ಬರುತ್ತ ಇದ್ದರು. ಎಲ್ಲ ಪದಾರ್ಥಗಳನ್ನು ಬಡಿಸಿದ ಮೇಲೆ 'ಇಗೋ, ನಾವು ಬಂದೆವು. ನೀವು ಊಟ ಮಾಡಿ' ಎಂದು ಹೇಳಿ, ಹೊರಕ್ಕೆ ಬಂದು, ನೆಲಮಾಳಿಗೆಯ ಬಾಗಿಲಿಗೆ ಬೀಗ ಹಾಕಿಸಿದರು. ನಂದರು ಜನರ ಅಪವಾದವನ್ನು ಗಣಿಸಲಿಲ್ಲ; ದೇವರಿಗೆ ಹೆದರಲಿಲ್ಲ. ಹಿರಿದ ಕತ್ತಿಯುಳ್ಳ ಜನರನ್ನು ಬಾಗಿಲಲ್ಲಿ ಕಾವಲಿಟ್ಟು 'ಮೌರ್ಯರಿಗೆ ಅನ್ನ ನೀರುಗಳನ್ನು ತಂದು ಕೊಡುವಂತೆ ನಟಿಸಿ. ಆದರೆ ಜನರಿಗೆ ಈ ಗುಟ್ಟು ತಿಳಿಯಬಾರದು. ಇವರು ಸತ್ತ ಸುದ್ದಿಯನ್ನು ಗುಟ್ಟಾಗಿ ಬಂದು ನಮಗೆ ತಿಳಿಸಿ' ಎಂದು ಅಪ್ಪಣೆ ಮಾಡಿ ಪಟ್ಟಣಕ್ಕೆ ಹಿಂದಿರುಗಿ ಬಂದರು.

ನೆಲಮಾಳಿಗೆಯಲ್ಲಿ ಅನ್ನ ನೀರಿಲ್ಲದೆ, ಹಸಿವು ಬಾಯಾರಿಕೆಯಿಂದ ದಿನಕ್ಕೆ ಏಳೆಂಟು ಜನರಂತೆ, ಮೌರ್ಯರು ಹತ್ತಾರು ದಿನಗಳಲ್ಲಿ ಚಂದ್ರಗುಪ್ತನ ಹೊರತಾಗಿ ಎಲ್ಲರೂ ಜೀವ ಬಿಟ್ಟರು. ಆಗ ಚಂದ್ರಗುಪ್ತನು ನೆಲಮಾಳಿಗೆಯ ಬೆಳಕಂಡಿಯಿಂದ ದೂತರನ್ನು ಕುರಿತು 'ಅಯ್ಯಾ, ದೂತರಿರಾ! ಸೆರೆಸಿಕ್ಕವರಲ್ಲಿ ಎಲ್ಲರೂ ಸತ್ತು ಹೋದರು. ನಾನೊಬ್ಬನು ಮಾತ್ರ ಉಳಿದಿದ್ದೇನೆ. ಇನ್ನು ಎರಡು ದಿನಗಳಲ್ಲಿ ನನಗೂ ಸಾವು ಸಮಾಪಿಸುವಂತೆ ಕಾಣುತ್ತದೆ. ಇಲ್ಲಿಯಾದರೋ ಹೆಣಗಳ ವಾಸನೆ ಹೆಚ್ಚಾಗಿದೆ. ನನ್ನನ್ನು ಇಲ್ಲಿಂದ ತೆಗೆದು ಬೇರೆ ಕಡೆ ಇಟ್ಟರೆ ನೆಮ್ಮದಿಯಿಂದ ಪ್ರಾಣ ಬಿಡುವೆನು. ಇದನ್ನು ರಾಜರಿಗೆ ತಿಳಿಸಿ' ಎಂದನು.

ದೂತರು ನಂದರಿಗೆ ಈ ಸಮಾಚಾರವನ್ನು ತಿಳಿಸಿದರು. ಇದನ್ನು ಕೇಳಿ ನಂದರಿಗೆ ಆನಂದವಾಯಿತು. 'ಚಂದ್ರಗುಪ್ತನನ್ನು ಬೇರೆ ಕಡೆ ಸೆರೆಯಿಡಿ. ಅವನು ಸತ್ತ ಸುದ್ದಿಯನ್ನು ನಮಗೆ ತಿಳಿಸಿ. ನೆಲಮಾಳಿಗೆಗೆ ಬೆಂಕಿಯಿಡಿ.' ಎಂದು ಹೇಳಿ ಕಳುಹಿಸಿದರು. ನಂದರ ಆಜ್ಞೆ! ನೆರವೇ

ರಿತು. ಅವರ ಹಗೆಗಳು ಸುಟ್ಟು ಬೂದಿಯಾದರು. ಆದರೆ ಈ ಬೂದಿ ಯಲ್ಲಿ ಸಣ್ಣ ಕಿಡಿಯೊಂದು ಮಾತ್ರ ಉಳಿಯಿತು.

ಇತ್ತ ಪ್ರಯಾಗದಲ್ಲಿ ಒಂದು ದಿನ ರಾಜನ ಪ್ರಿಯಪತ್ನಿಯಾದ ಮುರಾದೇವಿ ಗಂಗೆಯನ್ನು ಸೇರಿದಳು. ರಾಜನು ತನ್ನ ಪ್ರಿಯೆಗಾಗಿ ಬಹುವಾಗಿ ಶೋಕಪಟ್ಟನು. ಈಗ ಕುರುವಿನ ಮೇಲೆ ಬೊಕ್ಕೆ ಎದ್ದಂತಾ ಯಿತು. ಮೌರ್ಯರನ್ನು ಕೊಂದ ನಂದರಿಗೆ ಮನಸ್ಸಿನಲ್ಲಿ ನೆಮ್ಮದಿಯೇ ಇರಲಿಲ್ಲ. ತಂದೆ ಏನೆನ್ನುವರೋ ಎಂಬ ಭೀತಿ ಅವರನ್ನು ಕಾಡುತ್ತಲೇ ಇತ್ತು. ಈ ತಪ್ಪಿನಿಂದ ಜಾರಿಕೊಳ್ಳಲು ಅವರು ತಂದೆಗೆ 'ನೀವಿಲ್ಲದ ಕಾಲದಲ್ಲಿ ಇಲ್ಲಿ ಕಷ್ಟದ ಮೇಲೆ ಕಷ್ಟ ಬಂದೊದಗಿದೆ. ಒಂದು ದಿನ ಮೌರ್ಯರು ಬೇಟೆಯಾಡಿ ಬಂದು ಉದ್ಯಾನದ ಅರಮನೆಯ ನೆಲ ಮಾಳಿಗೆಯಲ್ಲಿ ಕುಳಿತು ಅತಿಯಾಗಿ ಮದ್ಯಪಾನ ಮಾಡಿದರು. ಆಮೇಲೆ ಅವರು ತಮ್ಮಲ್ಲಿಯೇ ಹೋರಾಡುತ್ತಿರಲು ನೆಲಮಾಳಿಗೆ ಕುಸಿದು ಬಿದ್ದು ಮೌರ್ಯರೆಲ್ಲ ಸತ್ತರು. ಚಂದ್ರಗುಪ್ತನೊಬ್ಬನು ಮಾತ್ರ ಬದುಕಿದ್ದಾನೆ. ಈಗ ಅವನೂ ಉಳಿಯುವ ಆಸೆ ಇಲ್ಲ. ನಮಗಂತೂ ಬಹಳ ಭಯ ವಾಗಿದೆ. ನೀವು ಬೇಗ ಬನ್ನಿ' ಎಂದು ಪತ್ರ ಬರೆದು ಕಳುಹಿಸಿದರು. ಪತ್ರವನ್ನು ನೋಡಿದೊಡನೆಯೇ ನಂದರು ಮೌರ್ಯರನ್ನು ಕೊಂದಿರ ಬಹುದೆಂದು ರಾಕ್ಷಸನು ಊಹಿಸಿದನು. ಈ ಸುದ್ದಿ ಕೇಳಿ ರಾಜನಿಗೆ ಬಲು ಸಂಕಟವಾಯಿತು. 'ಪುತ್ರಶೋಕಂ ನಿರಂತರಂ' ಎನ್ನುವುದು ಆರ್ಯೋಕ್ತಿಯಲ್ಲವೇ ? ಕೆಲಸ ಮಿಂಚಿಹೋಯಿತು, ಮಾಡುವುದೇನು ? ರಾಜನು ಮಕ್ಕಳನ್ನು ಶಪಿಸಿದನು. ಈ ಸಂಸಾರದಲ್ಲಿ ಯಾರಿಗೆ ತಾನೆ ಎಲ್ಲ ಕಾಲದಲ್ಲೂ ಸುಖವುಂಟು ? ಹೆಂಡತಿಮಕ್ಕಳು ಸತ್ತ ದುಃಖ ಮುಪ್ಪಿನಲ್ಲಿ ರಾಜನಿಗೆ ಜೊತೆಯಾಗಿ ಬಂದೊದಗಿತು. ಇದ್ದದ್ದರಲ್ಲಿ ಸಮಾಧಾನಮಾಡಿಕೊಂಡು ಮಕ್ಕಳಿಗೆ ತಿಲೋದಕವನ್ನು ಬಿಟ್ಟು ಅರಸನು ಪಟ್ಟಣಕ್ಕೆ ಹಿಂದಿರುಗಿದನು.

ಮೌರ್ಯರು ಸತ್ತ ಸುದ್ದಿ ದೇಶಗಳಲ್ಲಿ ಬಹು ಬೇಗ ಹರಡಿತು.

## ೩. ಸಿಂಹ ಪರೀಕ್ಷೆ

‘ ಬಲವಿಲ್ಲದ ಕಾಲದಲ್ಲಿ ನೆಲ ಎದ್ದು ಬಡಿಯಿತು.’ ಎನ್ನುವುದು ಅನುಭವದ ಮಾತು. ನಂದರಿಗೆ ತಿಳಿಯದಂತೆ ಈಗ ಅವರ ಬಲ ಕುಗ್ಗಿತು. ಅವರ ಸಂಸಾರದ ಕಟ್ಟಿನಲ್ಲಿ ನೂರುಹತ್ತು ಬಲವಾದ ಮರದ ತುಂಡುಗಳು ಒಟ್ಟಾಗಿದ್ದುವು. ಇತರರು ಅವುಗಳನ್ನು ಕತ್ತರಿಸ ಲಾರದವರಾಗಿದ್ದರು. ಈಗ ನಂದರೇ ಆ ಕಟ್ಟನ್ನು ಬಿಚ್ಚಿ ಅದರಲ್ಲಿ ನೂರು ತುಂಡುಗಳನ್ನು ಕೊಚ್ಚಿಹಾಕಿದರು. ಹೇಳಹೆಸರಿಲ್ಲದಂತೆ ಮಾಡಿದರು. ಇದರಿಂದ ಅವರ ಹಗೆಗಳಿಗೆ ಉಳಿದ ಒಂಬತ್ತು ತುಂಡು ಗಳನ್ನು ನಾಶಮಾಡುವುದು ಸುಲಭವಾಯಿತು. ‘ ಒಗ್ಗಟ್ಟಿನಲ್ಲಿ ಬಲ ವಿದೆ ’ ಎನ್ನುವುದು ಮುತ್ತಿನಂಥ ಮಾತು. ವೇದ ಸುಳ್ಳಾದರೂ ಗಾದೆ ಸುಳ್ಳಾದೀತೇ ?

ನಂದರಿಗೆ ಬಹುಮಂದಿ ಹಗೆಗಳಿದ್ದರು. ಮೌರ್ಯರು ಬದುಕಿ ರುವವರೆಗೂ, ಅವರಿಗೆ ಹೆದರಿ ಹಗೆಗಳು ತಲೆಯೆತ್ತಿರಲಿಲ್ಲ. ಈಗ ಅವರಿಗೆಲ್ಲ ಅನುಕೂಲವಾದ ಸಮಯ ದೊರಕಿತು. ಇವರ ಹಗೆಗಳಲ್ಲಿ ಹಸುವಿನ ಮುಖದ ಹುಲಿಯಂತಿದ್ದ ಪರ್ವತರಾಜನೆಂಬುವವನೂ ಒಬ್ಬನು. ನಂದಗಿಗೆ ಬೇಕಾದವನಂತೆ ಇವನು ನಟಿಸುತ್ತಿದ್ದರೂ, ಅವರ ಮೇಲೆ ಬೀಳಲು ಸಮಯಕಾಯುತ್ತಿದ್ದನು. ಪಾಟಲೀಪುರದ ವಿಶೇಷ ಸಮಾಚಾರವನ್ನು ತಿಳಿಯಲು ಹೋಗಿದ್ದ ಅವನ ಗೂಢಚಾ ರರು ಬಂದು ಅವನಿಗೆ ಮೌರ್ಯರು ಸತ್ತ ಸುದ್ದಿಯನ್ನು ತಿಳಿಸಿದರು. ಚಾರರ ಮಾತನ್ನು ಕೇಳಿ ಪರ್ವತರಾಜನು ಕ್ಷಣಕಾಲ ಸುಮ್ಮನಿದ್ದು ತಲೆದೂಗಿ, ಬಳಿಕ ಮಂತ್ರಿಯಾದ ಶಬರವರ್ಮನನ್ನು ಕುರಿತು ಈ ರೀತಿ ಹೇಳಿದನು :—

‘ ಅಯ್ಯಾ, ಮಂತ್ರಿ ! ಪಾಟಲೀಪುರದ ಸುದ್ದಿಯನ್ನು ಕೇಳಿ ದೆಯಾ ? ನಂದರ ನಾಶ ಹತ್ತಿರವಾದಂತೆ ಕಾಣುತ್ತದೆ. ತಮ್ಮವರಾಗಿ ಸೇವಕರಂತೆ ಕೆಲಸ ಮಾಡುತ್ತಿದ್ದ ಮೌರ್ಯರನ್ನು ಕೊಂದುಹಾಕಿ, ನಂದರು ಬುದ್ಧಿಯಿಲ್ಲದ ಕೆಲಸವನ್ನು ಮಾಡಿದರು. ಇದನ್ನು ನೋಡಿ ದರೆ ಕದನಕ್ಕೆ ಹೋಗುವ ಮನುಷ್ಯನು ತನ್ನ ಕೈಖಡ್ಗವನ್ನು ತಾನೇ

ಮುರಿದು ಬಿಸುಟಂತಾಯಿತು. ನಂದರು ಶೂರರೆಂಬ ಭಯ ಹಗೆಗಳಿಗೆ ತಪ್ಪಿತು. ಹಣಕ್ಕಾಗಿ ಜೀತವಾಡುವ ಜನ ಬಂಧುಗಳಾದಾರೇ? ನಂದರ ಈ ಕೆಲಸಕ್ಕೆ ರಾಕ್ಷಸನು ಒಪ್ಪಿರಲಾರನು. ಈಗ ಬದುಕಿರುವ ಚಂದ್ರಗುಪ್ತನೇ ಮುಂದೆ ಇವರಿಗೆ ಹಗೆಯಾದಾನು. ಒಟ್ಟಿನಲ್ಲಿ ನಂದರು ಜನರ ಪ್ರೀತಿಯನ್ನು ಕಳೆದುಕೊಂಡರು.'

ರಾಯನ ಮಾತಿಗೆ ಶಬರವರ್ಮನು 'ಜೀಯಾ, ತಾವು ಹೇಳಿದು ದೆಲ್ಲ ಸತ್ಯ. ನಂದರು ತಮ್ಮ ಬಲಗೈಯನ್ನು ತಾವೇ ಕತ್ತರಿಸಿಕೊಂಡರು. ಈಗ ಬದುಕಿರುವ ಚಂದ್ರಗುಪ್ತನು ಸೆರೆಮನೆಯಿಂದ ಬಿಡುಗಡೆ ಹೊಂದಿ ದರೆ ಸಾಕು. ಮೌರ್ಯನಿಂದ ಏಳಿಗೆ ಹೊಂದಿದ ಭಾಗುರಾಯಣನೇ ಮೊದಲಾದ ಸೇನಾಪತಿಗಳು ಅವನಿಗೆ ಸಹಾಯಕರಾಗಬಹುದು. ಇದು ಹಗೆಗಳಿಗೆ ತುಂಬ ಅನುಕೂಲವಾದ ಕಾಲ. ಅಂಗೈ ಅಗಲದ ಮೋಡ ಯಾವಾಗ ಆಕಾಶವನ್ನು ತುಂಬುವುದೆಂದು ಹೇಳುವವರಾರು? ಈಗ ನಾವು ಸುಮ್ಮನಿರಬಾರದು. ನಂದರು ಬಹುವಾಗಿ ಹೆಚ್ಚಿ ಹೋಗಿದ್ದಾರೆ. ಅವರನ್ನು ಉಪಾಯದಿಂದ ನಿಗ್ರಹಿಸಬೇಕು. ಆದ್ದರಿಂದ ಪಾಟಲೀ ಪುರದ ಸಮಾಚಾರವನ್ನು ಚೆನ್ನಾಗಿ ತಿಳಿಯಲು ಒಂದು ಕಪಟಶಿಲ್ಪ ವನ್ನು ಮಾಡಿ ಕಳುಹುವೆನು' ಎಂದನು. ಮಂತ್ರಿಯ ಮಾತು ರಾಜನಿಗೆ ಒಪ್ಪಿತು.

ಅನಂತರ ಶಬರವರ್ಮನು ಚತುರರಾದ ಶಿಲ್ಪಿಗಳನ್ನು ಕರೆಸಿ, ಅವರಿಂದ ಒಂದು ಉಕ್ಕಿನ ಪಂಜರವನ್ನೂ, ಅದರಲ್ಲಿ ಒಂದು ಕಪಟ ಸಿಂಹವನ್ನೂ ಮಾಡಿಸಿದನು. ಆ ಪಂಜರಕ್ಕೆ ರಕ್ಷಕರನ್ನು ನೇಮಿಸಿ, ಅದರ ಉಪಾಯವನ್ನೂ, ಇನ್ನೂ ಕೆಲವು ಮಾತುಗಳನ್ನೂ ಅವರಿಗೆ ತಿಳಿಸಿದನು. ಇಷ್ಟೆಲ್ಲ ಆದಮೇಲೆ ಅವರಿಗೆ 'ಈ ಪಂಜರವನ್ನು ಪಾಟಲೀ ಪುರದ ಆಸ್ಥಾನದ ಬಳಿ ಇಳುಹಿ. ನಾನು ಹೇಳಿದ ರೀತಿಯಲ್ಲಿ ಹೇಳಿ ಕೊಂಡು ಬೀದಿಯಲ್ಲಿ ಸಾರುತ್ತ ಬನ್ನಿ. ಇದರ ಪರೀಕ್ಷಕರನ್ನೂ ಅಲ್ಲಿ ನಡೆಯುವ ಹೆಚ್ಚಿನ ವರ್ತಮಾನವನ್ನೂ ನಮಗೆ ಬಂದು ತಿಳಿಸಿ' ಎಂದು ಹೇಳಿ ಕಳುಹಿಸಿಕೊಟ್ಟನು. ಈ ವೇಳೆಗೆ ಪರ್ವತರಾಜನ ಸಾಮಂತನಾದ ಲಂಪಾಕಾಧಿಪತಿ ದಂಡೆತ್ತಿ ಬರುತ್ತಿರುವ ಸುದ್ದಿ ಬಂತು.

ಇತ್ತ ಕಡೆ ಪಂಜರರಕ್ಷಕರು ಪರ್ವತರಾಜನ ಪಟ್ಟಣದಿಂದ ಹೊರಟು

ಕೆಲವು ದಿವಸಗಳಾದ ಮೇಲೆ ಪಾಟಲೀಪುರಕ್ಕೆ ಬಂದರು. ಪಂಜರವನ್ನು ಆಸ್ಥಾನದ ಬಳಿ ಇಳಿಸಿ, ವಾದ್ಯದೊಡನೆ 'ಈ ಸಿಂಹ ಅಮಾನುಷಕೃತವಾದುದು. ಈ ನಗರದಲ್ಲಿ ಯಾರಾದರೂ ನಿಪುಣರಿದ್ದರೆ ಈ ಪಂಜರವನ್ನು ಖಂಡಿಸದೆ, ಇದರಲ್ಲಿರುವ ಸಿಂಹವನ್ನು ಜೀವಸಹಿತವಾಗಿ ಹೊರಕ್ಕೆ ತೆಗೆಯಿರಿ. ಇಲ್ಲದಿದ್ದರೆ ಉಳಿದದೇಶದ ಜನರಂತೆ ನಮಗೆ ಮರ್ಯಾದೆ ಮಾಡಿ ಮುಂದಕ್ಕೆ ಹೊರಡಲು ಅಪ್ಪಣೆಕೊಡಿ' ಎಂದು ತೋಳೆತ್ತಿಕೊಂಡು ಸಾರುತ್ತಿದ್ದರು. ಈ ಮಾತನ್ನು ಕೇಳಿ ಊರಿನ ಜನರೆಲ್ಲ ಅಲ್ಲಿಗೆ ಬಂದು ನೋಡಿ, ಅದರ ಗುಟ್ಟನ್ನು ತಿಳಿಯಲಾರದೆ ಹಿಂದಿರುಗುತ್ತಿದ್ದರು.

ಈ ಸಮಾಚಾರ ನಂದರಿಗೆ ತಿಳಿಯಿತು. ರಾಕ್ಷಸನೊಬ್ಬನನ್ನು ಬಿಟ್ಟು ಉಳಿದ ಮಂತ್ರಿಗಳೆಲ್ಲ ಪಂಜರವನ್ನು ಪರೀಕ್ಷಿಸಿದರು. ಆದರೆ ಅದರ ಗುಟ್ಟು ಅವರಿಗೂ ಬಗೆಹರಿಯಲಿಲ್ಲ. ಆಗ ರಾಕ್ಷಸನು 'ಇದು ನಮ್ಮ ಜಾಣತನವನ್ನು ತಿಳಿಯಲು ಪರರಾಜರು ಕಳುಹಿಸಿರುವ ಕಪಟಶಿಲ್ಪವೆಂದು ಕಾಣುತ್ತದೆ. ನಮ್ಮ ಪಟ್ಟಣದಲ್ಲಿ ಇದನ್ನು ನೋಡದಿರುವ ಜನ ಇನ್ನೂ ಇರಬಹುದು. ಇದರ ಗುಟ್ಟನ್ನು ಯಾರಾದರೂ ತಿಳಿದು ಹೇಳಿದರೆ, ಅವರಿಗೆ ವಿಶೇಷವಾದ ರಾಜಮರ್ಯಾದೆಯಾಗುವುದೆಂದು ಸಾರುತ್ತ ಬನ್ನಿ' ಎಂದು ಅಪ್ಪಣೆ ಮಾಡಿದನು.

ರಾಕ್ಷಸನ ಅಪ್ಪಣೆಯಂತೆ ದೂತರು ಈ ವಿಷಯವನ್ನು ಊರಿನಲ್ಲಿ ಸಾರಿದರು. ಆದರೆ ಪಂಜರವನ್ನು ಪರೀಕ್ಷೆಮಾಡಲು ಯಾರೂ ಮುಂದೆ ಬರಲಿಲ್ಲ. ಸೆರೆಮನೆಯ ಬಾಗಿಲಲ್ಲಿ ನಿಂತಿದ್ದ ಚಂದ್ರಗುಪ್ತನು 'ಎಲೈ ದೂತರಿರಾ, ಈ ಪಟ್ಟಣದಲ್ಲಿ ಈ ಪಂಜರದ ಪರೀಕ್ಷಕರು ಯಾರೂ ದೊರಕಲಿಲ್ಲವೇ ?' ಎಂದು ಕೇಳಿದನು. ದೂತರು ಅವನ ಮಾತಿಗೆ ಉತ್ತರ ಕೊಡದೆ, ನಂದರ ಬಳಿ ಬಂದು 'ನಿಮ್ಮ ಮಾತಿನಂತೆ ಊರಿನಲ್ಲೆಲ್ಲ ಸಾರಿದೆವು. ಆದರೆ ಇದರ ಪರೀಕ್ಷಕರು ಮಾತ್ರ ಯಾರೊಬ್ಬರೂ ದೊರಕಲಿಲ್ಲ. ಸೆರೆಮನೆಯ ಬಾಗಿಲಲ್ಲಿ ನಿಂತಿದ್ದ ಯಾರೋ ಒಬ್ಬ ನಮ್ಮನ್ನು ಕುರಿತು 'ಈ ಊರಿನಲ್ಲಿ ಪಂಜರಪರೀಕ್ಷಕರು ಯಾರೂ ದೊರಕಲಿಲ್ಲವೆ?' ಎಂದು ಕೇಳಿದನು' ಎಂದರು. ಅವರ ಮಾತಿಗೆ ನಂದರು 'ಅವನು ಅದರ ಗುಟ್ಟನ್ನು ಬಲ್ಲವನಾಗಿರಬೇಕು. ಅವನು ಪಂಜರ ಪರೀಕ್ಷೆಯನ್ನು

ಮಾಡಿದರೆ, ಅವನಿಗೆ ಸೆರೆಮನೆಯಿಂದ ಬಿಡುಗಡೆ, ರಾಜಮರ್ಯಾದೆ ಉಂಟಾಗುವುದು. ಅವನನ್ನು ಕರೆತಂದು ಪರೀಕ್ಷೆ ನಡೆಸಿ' ಎಂದು ಅಪ್ಪಣೆಮಾಡಿ ಹೊರಟುಹೋದರು.

ಈಗ ರಾಕ್ಷಸನು ತನ್ನಲ್ಲಿಯೇ ಹೀಗೆ ಯೋಚಿಸಿದನು. 'ನಾನು ಈಗಲೇ ಹೋಗಿ ಪಂಜರವನ್ನು ಪರೀಕ್ಷಿಸಕೂಡದು. ಏಕೆಂದರೆ ಇದರ ಪರೀಕ್ಷೆ ನನ್ನಿಂದ ಆಗದೆ ಹೋಗಿ ಆಮೇಲೆ ಮತ್ತೊಬ್ಬನು ಬಂದು ತಿಳಿದು ಹೇಳಿದರೆ ಆಗ ನನಗೆ ಬಹಳ ಅವಮಾನ ಉಂಟಾಗುವುದು. ಆದಕಾರಣ ಈಗ ಹೋಗಿ ಪಂಜರವನ್ನು ನೋಡುವುದು ಯುಕ್ತವಲ್ಲ. ಸೆರೆಯಾಳು ಬಂದು ನೋಡಿ ಅದರ ಪರೀಕ್ಷೆಯನ್ನು ಮಾಡಿ ಸನ್ಮಾನಿತನಾಗಿ ಹೋದರೆ ಹೋಗಲಿ. ಅದು ಅವನಿಂದ ಆಗದಿದ್ದರೆ, ಆಗ ನಾನು ಹೋಗಿ ನೋಡುವೆನು. ನನ್ನಿಂದ ಪರೀಕ್ಷೆ ಆದರೆ ನನಗೆ ವಿಶೇಷ ಬಹುಮಾನವುಂಟಾಗುವುದು. ಅದರ ಪರೀಕ್ಷೆ ತಿಳಿಯದ ಪಕ್ಷದಲ್ಲಿ ಎಲ್ಲರಂತೆ ನಾನೂ ಒಬ್ಬನಾಗುವೆನು. ಇದೇನೂ ಅವಮಾನವಲ್ಲ' ಹೀಗೆಂದು ರಾಕ್ಷಸನು ಸುಮ್ಮನಿದ್ದುಬಿಟ್ಟನು.

ಚಂದ್ರಗುಪ್ತನು ಸಿಂಹವಿದ್ದ ಸ್ಥಳಕ್ಕೆ ಬಂದು ಅದನ್ನು ಚೆನ್ನಾಗಿ ಪರೀಕ್ಷಿಸಿದನು. ಅವನು ತನ್ನಲ್ಲಿಯೇ 'ಈ ಪಂಜರವನ್ನು ಅಖಂಡವಾದ ಎರಕದಿಂದ ಮಾಡಿದೆ. ಇದರಲ್ಲಿರುವ ಸಿಂಹ ಪೋಷಕನು ಕೊಟ್ಟ ಮಾಂಸಕ್ಕೆ ಎರಗುತ್ತ, ಹೊರಗಡೆಯಲ್ಲಿ ಅವನು ಪಂಜರವನ್ನು ಬಳಸಿ ಬಂದರೆ ತಾನೂ ಬಳಸಿ ಬರುತ್ತದೆ. ಆದ್ದರಿಂದಲೇ ಇದನ್ನು ಅಮಾನುಷ ಕೃತವೆನ್ನುತ್ತಾರೆ. ಇರಲಿ, ಇದನ್ನು ಪರೀಕ್ಷಿಸುತ್ತೇನೆ' ಎಂದುಕೊಂಡು ರಾಜಭಟರಿಂದ ಮಾಂಸವನ್ನು ತರಿಸಿ ತಾನೇ ಸಿಂಹಕ್ಕೆ ಕೊಟ್ಟನು. ಆದರೆ ಅದು ಮಾಂಸವನ್ನು ಗ್ರಹಿಸಲಿಲ್ಲ.

ಚಂದ್ರಗುಪ್ತ (ಪಂಜರದವನನ್ನು ನೋಡಿ)—ಏನಯ್ಯಾ, ನಾನು ಕೊಟ್ಟ ಮಾಂಸವನ್ನು ಈ ಸಿಂಹ ಏಕೆ ಗ್ರಹಿಸಲಿಲ್ಲ?

ಚಾರರು(ಮನಸ್ಸಿನಲ್ಲಿಯೇ ಆತಂಕಪಡುತ್ತ)–ಅಯ್ಯಾ, ಈ ಸಿಂಹ ಅಮಾನುಷಕೃತ. ಚಿಕ್ಕಂದಿನಿಂದಲೂ ಇದು ಸಾಕಿದವರಿಂದ ಮಾತ್ರ ಆಹಾರವನ್ನು ಗ್ರಹಿಸುತ್ತದೆ. ಬೇರೆಯವರನ್ನು ಲಕ್ಷಿಸುವುದೇ ಇಲ್ಲ.

ಪಂಜರರಕ್ಷಕರ ಮಾತು ಕಪಟವೆಂದು ಚಂದ್ರಗುಪ್ತನು ಅರಿತು,

ಮತ್ತೆ ಮನಸ್ಸಿನಲ್ಲಿ ಈರೀತಿ ಯೋಚಿಸಿದನು. 'ಈ ಪಂಜರ ಅಖಂಡ ವಾದ ಕಾರಣ ಜೀವಸಿಂಹ ಇದರಲ್ಲಿ ಹೋಗುವುದು ಹೇಗೆ ಸಾಧ್ಯ? ಇದು ಪಂಜರವನ್ನು ಬಳಸಿ ಬರುತ್ತದೆ. ಮಾಂಸದ ಆಶೆಯಿಂದ ಬಾಲ ವನ್ನು ಕುಣಿಸುತ್ತದೆ. ಮಾಂಸವನ್ನು ಕಚ್ಚುತ್ತದೆ. ಪಂಜರದವನು ದೂರವಾದರೆ ಆಯಾಸದಿಂದ ನಿಟ್ಟುಸಿರು ಬಿಡುವಂತೆ ಕಾಣುತ್ತದೆ. ಆದ್ದರಿಂದ ಇದು ಜೀವಸಿಂಹವೇ ಸರಿಯೆಂದು ತೋರುತ್ತದೆ. ಹೀಗಿದ್ದರೂ ಇದು ಜೀವಸಿಂಹವಾಗಿರಲಾರದೆ, ಅರಗು ಮೇಣಗಳಿಂದ ಮಾಡಿ, ಮೇಲೆ ಬಣ್ಣ ಬಳಿದ ಕಪಟಸಿಂಹವಾಗಿರಬೇಕು. ಇರಲಿ. ಇನ್ನೊಂದು ಪರೀಕ್ಷೆಯನ್ನು ಮಾಡುವೆನು.' ಹೀಗೆಂದುಕೊಂಡು ಲಾಯದಿಂದ ಒಂದು ಆನೆಯ ಮರಿಯನ್ನು ತರಿಸಿ, ಅದರ ಕಣ್ಣನ್ನು ಬಿಗಿದು, ಪಂಜರದ ಸುತ್ತಲೂ ಅದು ಬಳಸಿಬರುವಂತೆ ಮಾಡಿದನು. ಅದನ್ನು ನೋಡಿ ಸಿಂಹ ಗರ್ಜಿಸಲಿಲ್ಲ. ಆಗ ಇದು ಕಪಟಸಿಂಹವೆಂದು ಚಂದ್ರಗುಪ್ತನಿಗೆ ಮನದಟ್ಟಾಯಿತು. ಸೂಜಿಗಲ್ಲಿನಿಂದಾದ ಸಲಾಕೆಯ ಸತ್ವವೇ ಸಿಂಹ ತಿರುಗುವುದಕ್ಕೆ ಕಾರಣವೆಂದರಿತು.

ಚಂದ್ರಗುಪ್ತ (ಪಂಜರರಕ್ಷಕರಿಗೆ)—ಎಲೈ ಪಂಜರರಕ್ಷಕನೆ, ನಿನ್ನ ಕೈಯಲ್ಲಿರುವ ಸಲಾಕಿಯನ್ನು ಬಿಟ್ಟು ಪಂಜರವನ್ನು ಬಳಸಿ ಬಾ.

ಪಂಜರದವನು (ಮನಸ್ಸಿನಲ್ಲಿ) ಯಾರಿಗೂ ತಿಳಿಯದ ಸಲಾಕಿಯ ಪರೀಕ್ಷೆ ಈತನಿಗೆ ತಿಳಿಯಿತು! ಇರಲಿ. ಹೀಗೆ ಹೇಳುವೆನು. (ಚಂದ್ರ ಗುಪ್ತನಿಗೆ) ಅಯ್ಯಾ, ಹುಟ್ಟಿದಂದಿನಿಂದ ಈ ಸಲಾಕಿಯ ತುದಿಯ ಮಾಂಸದಿಂದಲೇ ಈ ಸಿಂಹ ಜೀವಿಸುತ್ತಿದೆ. ಅದನ್ನು ತೊರೆದರೆ ಸಿಂಹ ಮಾಂಸವನ್ನೇ ಮುಟ್ಟುವುದಿಲ್ಲ. ಆದ್ದರಿಂದ ಈ ಸಲಾಕಿಯನ್ನು ಬಿಡಕೂಡದು.

ಚಂದ್ರಗುಪ್ತ—ಇನ್ನು ಮುಚ್ಚು ಮರೆಯೇಕೆ? ಉಕ್ಕು, ಕಬ್ಬಿಣ, ಸಲಾಕಿ ಇವುಗಳ ಸಮೂಹದಿಂದ ಮಾಡಿದ ಈ ಕಪಟಸಿಂಹ ಚಲಿಸು ವುದರಲ್ಲಿ ಸೋಜಿಗವೇನು? ಇನ್ನು ನಿಮ್ಮ ಕಪಟವನ್ನು ಸಾಕುಮಾಡಿ.

ಪಂಜರದವನು (ನಾಚಿಕೆಯಿಂದ)—ಸ್ವಾಮಿ, ನಾವು ಜಿತರಾದೆವು.

ಚಂದ್ರಗುಪ್ತ (ಮನಸ್ಸಿನಲ್ಲಿ)—ಇದು ಪರರಾಜರ ಕಪಟವೆಂದು ಕಾಣುತ್ತದೆ. ನಂದರ ಅವಹೇಳನಕ್ಕಾಗಿ ಕಳುಹಿಸಿರುವ ಶಿಲ್ಪ ಇದು.

ಇವರಿಂದ ನನಗೆ ಬಿಡುಗಡೆಯಾಗುತ್ತದೆ. ರಾಕ್ಷಸನು ಇವರನ್ನು ದಂಡಿಸದೆ ಬಿಡನು. ಈ ದೂತರ ದೇಶವನ್ನು ತಿಳಿದು ಇವರನ್ನು ಇಲ್ಲಿಂದ ಚದುರಿಸಬೇಕು. (ಪ್ರಕಾಶವಾಗಿ) ಎಲೈ ದೂತರೇ, ನಿಮ್ಮ ದೇಶ ಯಾವುದು ?

ಪಂಜರದವರು—ಸ್ವಾಮಿ, ಬೆಟ್ಟಗುಡ್ಡಗಳಲ್ಲಿ ಜೋಗಿಗಳಂತೆ ಜೀವಿಸುವವರು ನಾವು. ನಮ್ಮದು ಯಾವ ದೇಶವೆಂದು ಹೇಳೋಣ ?

ಚಂದ್ರಗುಪ್ತನಿಗೆ ಅವರು ಪರ್ವತರಾಜನ ಕಡೆಯುವರೆಂದು ತಿಳಿದು, ಅವರ ಮುಖವನ್ನು ಚೆನ್ನಾಗಿ ನೋಡಿ 'ಈಗಲೇ ಇಲ್ಲಿಂದ ಹೊರಟು ಹೋಗಿ' ಎಂದು ಕಣ್ಣುಸನ್ನೆಯಿಂದ ಸೂಚಿಸಿದನು. ಈ ಸೂಚನೆಯನ್ನು ಗ್ರಹಿಸಿ, ಪಂಜರದವರು ಸಾಮಾನುಗಳನ್ನು ಅಲ್ಲಿಯೇ ಬಿಟ್ಟು ಬೈರಾಗಿಗಳ ವೇಷದಿಂದ ಮರೆಯಾಗಿ ಬಿಟ್ಟರು.

ಚಂದ್ರಗುಪ್ತನಿಂದ ಸಿಂಹಪರೀಕ್ಷೆ ಆಯಿತೆಂದು ನಂದರು ತಿಳಿದು, ಸಿಂಹವಿದ್ದ ಸ್ಥಳಕ್ಕೆ ಬಂದು 'ಇದರ ಗುಟ್ಟನ್ನು ಹೇಗೆ ತಿಳಿದೆ?' ಎಂದು ಚಂದ್ರಗುಪ್ತನನ್ನು ಕೇಳಿದರು. ಕೂಡಲೇ ಚಂದ್ರಗುಪ್ತನು ಬೆಂಕಿಯನ್ನು ತರಿಸಿ ಸಿಂಹಕ್ಕೆ ತೋರಿಸಿದನು. ಅರಗು, ಮೇಣಗಳು ಕರಗಿ, ಸಿಂಹದ ಒಳಗಿದ್ದ ಕಬ್ಬಿಣ ಮಾತ್ರ ಉಳಿಯಿತು. ತಮ್ಮ ನಗರದಲ್ಲಿ ಪಂಜರ ಪರೀಕ್ಷೆಯಾದ ಸಂತೋಷ, ಚಂದ್ರಗುಪ್ತನಂಥ ಬುದ್ಧಿಶಾಲಿಯಾದ ಹಗೆ ಉಳಿದುದಕ್ಕೆ ಸಂಕಟ, ಇವು ಏಕಕಾಲದಲ್ಲಿ ನಂದರಿಗೆ ಉಂಟಾದುವು.

ನಂದರ ಮನಸ್ಸನ್ನು ಹತ್ತಿರದಲ್ಲಿದ್ದ ವೃದ್ಧಮಂತ್ರಿ ವಕ್ರನಾಸನು ಗ್ರಹಿಸಿ ನಂದರಿಗೆ 'ಜೀಯಾ, ತಮ್ಮನ್ನೇ ನಂಬಿರುವ ಈ ಚಂದ್ರಗುಪ್ತನನ್ನು ಸೆರೆಯಿಂದ ಬಿಡಿಸಿ ಈತನಿಗೆ ಉಚಿತವಾದ ಅಧಿಕಾರವನ್ನು ಕೊಡಿ. ಮುಂದೆ ಈತನು ತಮ್ಮ ಕೆಲಸಕ್ಕೆ ಬಂದಾನು. ತಾವು ಸಭೆಯಲ್ಲಿ ನುಡಿದ ಮಾತೂ ಸತ್ಯವಾಗುವುದು' ಎಂದನು. ನಂದರಿಗೆ ಈಗ ಏನು ಮಾಡುವುದಕ್ಕೂ ತೋಚಲಿಲ್ಲ. ಮಂತ್ರಿಯ ಮಾತಿನಂತೆ ನಡೆದರೆ ಶತ್ರು ಶೇಷ ಉಳಿಯುತ್ತದೆ. ನಡೆಯದಿದ್ದರೆ ನಂದರು ಆಡಿದ ಮಾತಿಗೆ ತಪ್ಪುವರೆಂಬ ಜನಾಪವಾದ ಬೇರೆ. ಏನು ಮಾಡುವುದೆಂದು ಅವರು ಯೋಚಿಸುತ್ತಿದ್ದರು.

ಆಗ ಸುಮತಿಯೆಂಬ ಇನ್ನೊಬ್ಬ ಮಂತ್ರಿ 'ಸ್ವಾಮಿ, ಚಂದ್ರ

ಗುಪ್ತನನ್ನು ಸೆರೆಯಿಂದ ಬಿಡಿಸಿ, ಆತನಿಗೆ ಬೇರಾವ ಅಧಿಕಾರವನ್ನೂ ಕೊಡದೆ ಅನ್ನ ಸತ್ರದ ಅಧಿಕಾರವನ್ನು ಕೊಡಿ' ಎಂದನು.

ನಂದರು (ರಾಕ್ಷಸನನ್ನು ನೋಡಿ) ಇವನೇಕೆ ಹೀಗೆ ಹೇಳುತ್ತಾನೆ?

ರಾಕ್ಷಸ (ಮಂತ್ರಿಯ ಭಾವವನ್ನು ಗ್ರಹಿಸಿ, ನಂದರಿಗೆ ಗುಟ್ಟಾಗಿ) ರಾಜಕುಮಾರರಿರಾ, ಮಂತ್ರಿ ಆಡಿದ ಮಾತು ಸತ್ಯ. ಚಂದ್ರಗುಪ್ತ ಚಕ್ರವರ್ತಿಯ ಮೊಮ್ಮಗ. ಆದ್ದರಿಂದ ಈ ಸಣ್ಣ ಅಧಿಕಾರದಲ್ಲಿ ಉದಾಸೀನನಾಗಿ, ಬ್ರಾಹ್ಮಣರ ಶಾಪಕ್ಕೆ ಗುರಿಯಾಗಿ ನಾಶವಾಗುತ್ತಾನೆ.

ರಾಕ್ಷಸನ ಮಾತು ನಂದರಿಗೆ ಒಪ್ಪಿತು. ಚಂದ್ರಗುಪ್ತನನ್ನು ಸೆರೆಯಿಂದ ಬಿಡಿಸಿ, ಅವನನ್ನು ಆ ಕೆಲಸಕ್ಕೆ ಒಪ್ಪಿಸಿ ಅನ್ನಸತ್ರಾಧಿಕಾರದಲ್ಲಿ ನಿಯಮಿಸಿದರು. ಚಂದ್ರಗುಪ್ತನು ಗಂಗೆಯಲ್ಲಿ ಸ್ನಾನಮಾಡಿ ತಂದೆ ತಮ್ಮಂದಿರಿಗೆಲ್ಲ ತಿಲೋದಕವನ್ನು ಕೊಟ್ಟು 'ಪಾಲಿಗೆ ಬಂದದ್ದು ಪಂಚಾಮೃತ' ಎನ್ನುವಂತೆ ಅನ್ನಸತ್ರದ ಅಧಿಕಾರವನ್ನು ಚೆನ್ನಾಗಿ ನೋಡಿಕೊಳ್ಳುತ್ತ ಕಾಲ ಕಳೆಯುತ್ತಿದ್ದನು.

ಇತ್ತ ರಾಕ್ಷಸನು ಪರ್ವತರಾಜನ ದೂತರನ್ನು ಹುಡುಕಿಸಿದನು. ಆದರೆ ಅವರು ಸಿಕ್ಕಲಿಲ್ಲ.

## ೪. ಚಾಣಕ್ಯ ಪ್ರತಿಜ್ಞೆ

ಒಂದು ದಿನ ಮಧ್ಯಾಹ್ನದ ಉರಿಬಿಸಿಲು. ಸೂರ್ಯನು ಆಕಾಶದಲ್ಲಿ ಕೆಂಡದಂತೆ ಹೊಳೆಯುತ್ತಿದ್ದಾನೆ. ಬಿಸಿಲ ಬೇಗೆಗೆ ಬೇಸತ್ತು ಜನರು ನೆರಳನ್ನು ಆಶ್ರಯಿಸಿದ್ದಾರೆ. ಹೊರಗಡೆ ಸದ್ದೆಲ್ಲ ಅಡಗಿದೆ. ಆ ಸಮಯದಲ್ಲಿ ಚಂದ್ರಗುಪ್ತನು ಅನ್ನಸತ್ರದ ಬಾಗಿಲಲ್ಲಿ ಅತಿಥಿಗಳಿಗಾಗಿ ಕಾದು ನಿಂತಿದ್ದನು. ಆಗ ಆ ಅನ್ನಸತ್ರದ ದಾರಿಯಲ್ಲಿ ಕೃಷ್ಣಾಜಿನವನ್ನು ಧರಿಸಿ, ಕೈಯಲ್ಲಿ ದಂಡವನ್ನು ಹಿಡಿದು ಉರಿಯುವ ಬೆಂಕಿಯೋ ಎನ್ನುವಂತೆ ಪ್ರಕಾಶಿಸುತ್ತಿದ್ದ ಚಾಣಕ್ಯನೆಂಬ ಬ್ರಾಹ್ಮಣನು ನೈಮಿಶಾರಣ್ಯಮಾರ್ಗವಾಗಿ ಹೋಗುತ್ತಿದ್ದನು. ಹಾಗೆ ಹೋಗುತ್ತಿರುವಾಗ ಅವನ ಕಾಲಿಗೆ ಗರಿಕೆಯ ಬಳ್ಳಿ ಸುತ್ತಿಕೊಂಡು ಅವನನ್ನು ಮುಗ್ಗರಿಸುವಂತೆ ಮಾಡಿತು. ಯಾವುದೋ ಕೆಲಸಕ್ಕಾಗಿ ಹೊರಟಿದ್ದ ಚಾಣಕ್ಯನು ಕೋಪದಿಂದ ಆ ಕಾರ್ಯಕ್ಕಾಗಿ ಹೋಗುವುದನ್ನು ಬಿಟ್ಟು, ತನ್ನ

ಮಾರ್ಗಕ್ಕೆ ಅಡ್ಡಲಾಗಿ ಬಂದ ಗರಿಕೆಯನ್ನು ಬೇರು ಸಹಿತ ಕಿತ್ತುಹಾಕಿ ಮುಂದಕ್ಕೆ ಹೊರಟನು.

ಚಂದ್ರಗುಪ್ತನು ದೂರದಿಂದಲೇ ಇದೆಲ್ಲವನ್ನೂ ನೋಡಿ, ಮನಸ್ಸಿನಲ್ಲಿ ' ಈತನಾರೋ ಮಹಾತೇಜಸ್ವಿ, ಕೋಪಿಷ್ಠ ಬೇರೆ. ಈ ತೆರನಾದ ಕೋಪವಿದ್ದವರಲ್ಲೇ ಆಶ್ರಿತಾಭಿಮಾನ ದೃಢವಾಗಿರುವುದು. ನನ್ನ ಪುಣ್ಯದಿಂದ ಈತನು ಅನುಕೂಲನಾದರೆ ಕೇಳುವುದೇನು! ಆದ್ದರಿಂದ ಈತನನ್ನು ಕರೆತಂದು ಸತ್ಕರಿಸಬೇಕು ' ಎಂದು ಯೋಚಿಸಿ ಚಾಣಕ್ಯನ ಸಮೀಪಕ್ಕೆ ಬಂದನು. ದಾರಿಯಲ್ಲಿ ಹೋಗುತ್ತಿದ್ದ ಚಾಣಕ್ಯನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ' ಸ್ವಾಮಿ, ಮಧ್ಯಾಹ್ನ ಮೀರಿತು. ನನ್ನ ಮನೆಯಲ್ಲಿ ಸ್ವಲ್ಪ ತಂಗಿದ್ದು ನನ್ನ ಉಪಚಾರವನ್ನು ಕೈಕೊಂಡು ಮುಂದಕ್ಕೆ ತೆರಳಬೇಕು ' ಎಂದು ಬೇಡಿಕೊಂಡನು. ಚಂದ್ರಗುಪ್ತನು ಬೇಡಿಕೆಯನ್ನು ಮನ್ನಿಸಿ, ಚಾಣಕ್ಯನು ಎರಡು ಮೂರು ದಿನ ಅವನ ಮನೆಯಲ್ಲಿ ತಂಗಿ ಅವನು ಮಾಡಿದ ಸತ್ಕಾರವನ್ನು ಸ್ವೀಕರಿಸಿದನು. ಇದರಿಂದ ಚಂದ್ರಗುಪ್ತನಿಗೆ ಬಲು ಸಂತೋಷವಾಯಿತು.

ಚಂದ್ರಗುಪ್ತನ ಉಪಚಾರದಿಂದ ಸಂತೋಷಗೊಂಡ ಚಾಣಕ್ಯನು ಅವನನ್ನು ಕುರಿತು ' ಅಯ್ಯಾ, ನೀನು ಯಾರ ಮಗ? ನಿನ್ನ ಹೆಸರೇನು ? ಇಲ್ಲಿ ನಿನ್ನ ಜೀವನವೇನು ? ' ಎಂದು ಪ್ರಶ್ನೆ ಮಾಡಿದನು. ಚಾಣಕ್ಯನ ಮಾತಿಗೆ ಉತ್ತರವಾಗಿ ಚಂದ್ರಗುಪ್ತನು ಅವನಿಗೆ ತನ್ನ ಹಿಂದಣ ಕಥೆಯನ್ನು ವಿಸ್ತಾರವಾಗಿ ತಿಳಿಸಿ, ಆ ಮೇಲೆ ' ಸ್ವಾಮಿ, ನನಗೆ ಎಂಥ ಗತಿ ಬಂತು! ನಾನಾದರೋ ಚಕ್ರವರ್ತಿಯ ಮೊಮ್ಮಗ. ನನಗೆ ಉಂಟಾಗಿರುವ ಪದವಿಯಾದರೋ ಈ ಅನ್ನಸತ್ರದ ಯಾಜಮಾನ್ಯ. ನಮ್ಮ ತಂದೆ ಸಿಂಹದಂತೆ ಶೂರ. ಆದರೆ ಆತನಿಗೆ ಬಂದ ಸಾವನ್ನು ನೆನೆಯುವುದು ಬಲುಘೋರ. ಕಾಶಿಯಲ್ಲಿ ಆತನು ಕಟ್ಟಿಸಿದ ವಿರೂಪಾಕ್ಷ ದೇವಾಲಯದಲ್ಲಿ ಪೂಜೆ ಕೂಡ ನಿಂತು ಹೋಗಿದೆ. ಅದನ್ನು ನಡೆಸಲು ಹಣವಿಲ್ಲದಷ್ಟು ಬಡತನ ನನಗೆ ಬಂದಡಸಿದೆ. ವೈರಿಗಳ ನಡುವೆ ಹೀಗೆ ಜೀವಿಸುವುದಕ್ಕಿಂತ ಕಾಡಿನಲ್ಲಿ ತಮ್ಮೊಡನೆ ಗೆಡ್ಡೆ ಗೆಣಸುಗಳನ್ನು ತಿಂದು ತಮ್ಮ ಸೇವೆ ಮಾಡಿಕೊಂಡಿರುವುದೇ ಮೇಲು. ಅಪ್ಪಣೆಯಾದರೆ ನಾನು ತಮ್ಮೊಡನೆ ಬರುವೆನು' ಎಂದು ಕಣ್ಣೀರು ತುಂಬಿದನು.

ಚಂದ್ರಗುಪ್ತನಿಗೆ ಬಂದಿರುವ ಗತಿಯನ್ನು ಕಂಡು, ಚಾಣಕ್ಯನ ಮನಕರಗಿತು. ಅವನ ವಿನಯ, ಸೌಜನ್ಯ ಇವೇ ಮೊದಲಾದ ಗುಣಗಳು ಚಾಣಕ್ಯನ ಮನಸ್ಸನ್ನು ಸೆರೆಹಿಡಿದುವು. ಅವನು ಪ್ರಭು ವಾಗಲು ತಕ್ಕವನೆಂದರಿತು—

ಚಾಣಕ್ಯ—ಚಂದ್ರಗುಪ್ತನೇ, ಕ್ಷತ್ರಿಯನಿಗೆ ವನವಾಸ ತಕ್ಕುದಲ್ಲ. ಅದು ಬ್ರಾಹ್ಮಣನ ಜೀವನ. ಈಗ ನಿನ್ನಲ್ಲಿ ಧನವಿಲ್ಲ, ಕಷ್ಟಬಂದಿದೆ,ನಿಜ. ಆದರೆ ಈಗ ನೀನು ಅಧೀರನಾಗಬಾರದು. ನಿನಗೂ ಅಭ್ಯುದಯಕಾಲ ಬರುವುದು. ಆಗ ನಿನ್ನ ಬುದ್ಧಿ ಪೌರುಷಗಳಿಂದ ನಿನ್ನ ವೈರಿಗಳನ್ನು ಜಯಿಸಿ ಸುಖಿಯಾಗುವೆ. ಹಾಗಲ್ಲದೆ ಹೀನ ಜನರಂತೆ ನೀನು ಮಾತನಾಡುವುದು ಸರಿಯೆ?

ಚಂದ್ರಗುಪ್ತ—ಸ್ವಾಮಿ ಮಹಾನುಭಾವರೇ, ಸಾಸಿವೆಯ ಕಾಳಿ ನಷ್ಟು ಕಿಡಿ ಗಾಳಿಯ ಸಹಾಯದಿಂದ ವನವನ್ನು ಸುಡುವಂತೆ ನಿಮ್ಮ ಕೃಪೆಯಿಂದ ನನ್ನ ವೈರಿಗಳು ನಾಶವಾಗಬೇಕು. ನಿಮ್ಮನ್ನು ಮರೆ ಹೊಕ್ಕಿದ್ದೇನೆ. ನಿಮ್ಮ ತೇಜೋಬಲದಿಂದ ನನ್ನ ಹಗೆಗಳನ್ನು ನಿಗ್ರಹಿಸಿ ನನ್ನನ್ನು ಉದ್ಧರಿಸಬೇಕು.

ಹೀಗೆಂದು ಕಂಬನಿದುಂಬಿ ಚಾಣಕ್ಯನ ಪಾದಗಳನ್ನು ಹಿಡಿದು ಕೊಂಡಿದ್ದ ಚಂದ್ರಗುಪ್ತನ ಹೀನಸ್ಥಿತಿಯನ್ನು ಕಂಡು ಚಾಣಕ್ಯನಿಗೆ ಮನಕರಗಿ ‘ ಅಯ್ಯಾ ಚಂದ್ರಗುಪ್ತನೆ, ನಿನ್ನ ಹಗೆಗಳನ್ನು ನಿಗ್ರಹಿಸಿ, ನಿನಗೆ ರಾಜ್ಯಾಧಿಕಾರವನ್ನುಂಟುಮಾಡುವ ಶಕ್ತಿ ನನಗುಂಟು. ಆದರೆ ನನ್ನ ವಿಷಯದಲ್ಲಿ ನಂದರು ನಿರಪರಾಧಿಗಳು. ಅವರನ್ನು ಕೊಂದರೆ ನನಗೆ ಅಪಕೀರ್ತಿ ಬರುವುದು. ಈ ನಂದರಿಗೆ ನನ್ನಲ್ಲಿ ಕೋಪ ಬರು ವಂತೆ, ಧರ್ಮಕ್ಕೆ ವಿರುದ್ಧವಲ್ಲದ ಒಂದು ಕುಚೇಷ್ಟೆಯನ್ನು ಆಚರಿಸುತ್ತೇನೆ. ಇದಕ್ಕೆ ನಂದರು ಕ್ಷಮಿಸದೆ, ನನಗೆ ಕೋಪ ಬರುವಂತೆ ಮಾಡಿದರೆ ಆಗ ನಿನಗೆ ಅಭಯ ಕೊಡುತ್ತೇನೆ.’

ಹೀಗೆಂದು ಹೇಳಿ ಸ್ನಾನಕ್ಕಾಗಿ ಚಾಣಕ್ಯನು ಗಂಗಾನದಿಗೆ ಹೊರಟನು. ಆ ಮಧ್ಯಾಹ್ನ ಸಮಯದಲ್ಲಿ ನಂದರು ದೈವಯೋಗದಿಂದ ಹೊಸದಾಗಿ ಕಟ್ಟಿದ ಉದ್ಯಾನವನಕ್ಕೆ ಬಂದರು. ಹತ್ತಿರದಲ್ಲಿದ್ದ ಅನ್ನ ಸತ್ರದಲ್ಲಿ ವೇದಘೋಷ ಕೇಳಿಸಿತು. ಬ್ರಾಹ್ಮಣರ ಭೋಜನ ಪಂಕ್ತಿ

ಯನ್ನು ನೋಡುವ ಬಯಕೆ ಅವರಿಗುಂಟಾಯಿತು. ಇಂಪಾದ ವೇದ ಘೋಷವನ್ನು ಕೇಳಿ ಆಯಾಸ ಪರಿಹಾರ ಮಾಡಿಕೊಳ್ಳಲು, ನಂದರು ಕುದುರೆಗಳನ್ನಿಳಿದು ಅನ್ನಸತ್ರವನ್ನು ಹೊಕ್ಕರು. ಚಂದ್ರಗುಪ್ತನು ಅವರ ಬಳಿಗೆ ಬಂದು ವಿನಯದಿಂದ ಅವರನ್ನು ಒಳಗೆ ಕರೆದೊಯ್ದನು. ಚಾಣಕ್ಯನು ಇದೇ ಸಮಯವನ್ನು ನೋಡಿ, ಹರಕು ಪಂಚೆಯನ್ನುಟ್ಟು ಕೊಂಡು ರಾಜಯೋಗ್ಯವಾದ ಬಂಗಾರದ ಪೀಠದ ಮೇಲೆ ಅಗ್ರಭಾಗ ದಲ್ಲಿ ಕುಳಿತುಕೊಂಡನು.

ನಂದರು ಬ್ರಾಹ್ಮಣರ ಭೋಜನಪಂಕ್ತಿಯನ್ನು ನೋಡುತ್ತ ಬಂದರು. ಚಾಣಕ್ಯನ ಮುಖ ನೋಡುತ್ತಲೇ ಅವರ ತಲೆ ತಿರುಗಿತು. ಬೆಂಕಿಯಲ್ಲಿ ಬೀಳುವ ಹುಳುಗಳಂತೆ, ಅಣ್ಣತಮ್ಮಂದಿರು ಒಬ್ಬರ ಮುಖವನ್ನು ಒಬ್ಬರು ನೋಡಿ ಕೋಪದಿಂದ ದೂತರನ್ನು ಕುರಿತು, 'ಇವನಾರು ಈ ಬ್ರಾಹ್ಮಣಾಧಮನು? ತುಚ್ಛನು! ಅಗ್ರಸ್ಥಾನದಲ್ಲಿ ಕಾಲನ್ನು ಹಾಕಿಕೊಂಡು ಎಲ್ಲರಿಗಿಂತಲೂ ತಾನೇ ಅಧಿಕನೆಂಬಂತೆ ಕುಳಿತಿದ್ದಾನೆ! ನೀವೆಲ್ಲರೂ ಏಕೆ ಸುಮ್ಮನಿರುವಿರಿ?' ಎಂದು ಗರ್ಜಿಸಿ ದರು. ನಂದರ ಮಾತನ್ನು ಕೇಳಿ ರಾಜಭಟರು ಚಾಣಕ್ಯನನ್ನು 'ಏಳು, ಏಳು' ಎಂದು ಗದರಿಸಿದರು. ಅವನು ಅವರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ಮೊದಲಿನಂತೆಯೇ ಕುಳಿತುಬಿಟ್ಟಿದ್ದನು. ಇದರಿಂದ ಕೋಪಗೊಂಡ ರಾಜಭಟರು ಚಾಣಕ್ಯನ ಕೈಯನ್ನು ಹಿಡಿದು ಈಚೆಗೆ ಎಳೆದರು. ಅವರು ಎಳೆದ ರಭಸಕ್ಕೆ ಅವನ ಜುಟ್ಟು ಬಿಚ್ಚಿ ಹೋಗಲು ಚಂದ್ರಗುಪ್ತನ ಅದೃಷ್ಟ ಒದಗಿಬಂದಿತೆಂದು ತಿಳಿದು, ಮಹಾಕೋಪದಿಂದೆದ್ದು, ಕಣ್ಣುಗಳನ್ನು ಕೆರಳಿಸಿ, ಹುಬ್ಬನ್ನು ಗಂಟಿಕ್ಕಿ ಪೀಠವನ್ನು ಕಾಲಿನಿಂದೊದೆದು ನಂದರನ್ನು ದುರದುರನೆ ನೋಡಿ—

'ಎಲೈ ನಂದನಾಧಮರುಗಳಿರಾ, ನಾನು ನಿಮ್ಮ ಅತಿಥಿ, ಬ್ರಾಹ್ಮಣ. ಮೇಲಾಗಿ ನಿರಪರಾಧಿ. ಭೋಜನಪಂಕ್ತಿಯಲ್ಲಿ ಕುಳಿತಿದ್ದ ನನ್ನನ್ನು ಬ್ರಾಹ್ಮಣಾಧಮನೆಂದೂ, ತುಚ್ಛನೆಂದೂ ಎಳೆಸಿ ಅವಮಾನ ಮಾಡಿ ದರಲ್ಲವೆ? ಮುಂದೆ ನಿಮ್ಮ ಕಾಲುಗಳಿಗೆ ಹಗ್ಗವನ್ನು ಬಿಗಿದು, ಪ್ರಾಣ ವನ್ನು ತೆಗೆದು ನಿಮ್ಮ ಶರೀರಗಳನ್ನು ಹದ್ದು ನಾಯಿ ನರಿಗಳಿಗೆ ಆಹಾರ ವನ್ನಾಗಿ ಮಾಡಿ ಎಳೆಸಿ ಹಾಕುತ್ತೇನೆ. ಇಂದು ನನ್ನ ಅವಮಾನವನ್ನು

ನೋಡಿಯಾರು. ದುಷ್ಟ ಕ್ಷತ್ರಿಯರನ್ನು ಕೊಂದು ಪರಶುರಾಮನು ವಿಶ್ರಮಿಸಿಕೊಂಡಂತೆ ನಂದರನ್ನು ಸಂಹರಿಸಿಯೇ ಈ ನನ್ನ ಜುಟ್ಟನ್ನು ಕಟ್ಟುವೆನು. ಈ ಪ್ರತಿಜ್ಞೆಯನ್ನು ನಾನು ನೆರವೇರಿಸಿಕೊಳ್ಳದಿದ್ದರೆ ಸ್ವಧರ್ಮವನ್ನು ಬಿಟ್ಟು ಅನ್ಯಧರ್ಮವನ್ನು ಆಚರಿಸುವವನ ಗತಿ ನನಗಾಗಲಿ'' ಎಂದು ಕ್ರೂರಪ್ರತಿಜ್ಞೆಯನ್ನು ಮಾಡಿ, ಎಲ್ಲರೂ ನೋಡುತ್ತಿರುವಂತೆಯೇ ಅಲ್ಲಿಂದ ಹೊರಟು ಹೋದನು.

ಈ ಸಮಯದಲ್ಲಿ ರಾಕ್ಷಸನು ಅಲ್ಲಿರಲಿಲ್ಲ. ಹತ್ತಿರ ಇದ್ದ ಮಂತ್ರಿಗಳು, ಪ್ರತಿಜ್ಞೆ ಮಾಡಿಹೋದ ಬ್ರಾಹ್ಮಣನು ಮೂರ್ಖನೆಂದೂ, ಅವನ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳಕೂಡದೆಂದೂ ನಂದರನ್ನು ಸಮಾಧಾನ ಪಡಿಸಿ ಅವರನ್ನು ಕರೆದುಕೊಂಡು ಹೋದರು. ಆಗ ಆಕಾಶದಲ್ಲಿ ಧೂಮಕೇತುಗಳು ಮೂಡಿದುವು; ಭೂಕಂಪವಾಯಿತು. ಎಲ್ಲೆಡೆಯಲ್ಲಿಯೂ ಅಪಶಕುನಗಳು ತಲೆದೋರಿದುವು. ಅನ್ನಸತ್ರದಲ್ಲಿ ನೆರೆದಿದ್ದ ಜನರು ನಾನಾ ರೀತಿಯಲ್ಲಿ ಮಾತನಾಡಿಕೊಳ್ಳುತ್ತ ಮನೆಗಳಿಗೆ ಹೋದರು.

ಈ ಘಟನೆ ನಡೆದ ಮೇಲೆ ಚಂದ್ರಗುಪ್ತನು ಚಾಣಕ್ಯನನ್ನು ಹಿಂಬಾಲಿಸಿದನು. ಚಾಣಕ್ಯನು ತನ್ನ ಮನಸ್ಸಿನಲ್ಲಿ 'ಈಗ ನಂದರನ್ನು ಸಂಹರಿಸಿದರೆ ಕ್ಷತ್ರಿಯರ ಸಂತತಿ ನಿಂತು ಹೋಗುವುದು. ಈ ಕೆಲಸವನ್ನು ಉಪೇಕ್ಷಿಸಿದರೆ ನನ್ನ ಪ್ರತಿಜ್ಞೆಗೆ ಭಂಗಬರುವುದು. ದುಷ್ಟನಾದ ವೇಣುರಾಯನಂತೆ ಈ ನಂದರಿಂದ ಲೋಕಕ್ಕೆ ಮಂಗಳವಾಗದು. ಹಿಂದೆ ವಿದುರನು ಶೂದ್ರಸ್ತ್ರೀಯ ಮಗನಾದರೂ, ಧೃತರಾಷ್ಟ್ರನ ರಾಜ್ಯಭಾರವನ್ನು ನಿರ್ವಹಿಸಿ ಕೀರ್ತಿ ಪಡೆಯಲಿಲ್ಲವೆ? ಹಾಗೆಯೇ ಚಂದ್ರಗುಪ್ತನಿಂದ ಲೋಕಕಲ್ಯಾಣವಾಗಬಹುದು' ಎಂದು ಬಹುವಾಗಿ ಚಿಂತಿಸಿದನು. ಕಟ್ಟಕಡೆಗೆ ನಂದರನ್ನು ಸಂಹರಿಸಲೇಬೇಕೆಂದು ನಿರ್ಧರಿಸಿ ಚಂದ್ರಗುಪ್ತನನ್ನು ನೋಡಿ 'ಅಯ್ಯಾ, ಚಂದ್ರಗುಪ್ತನೇ ಇನ್ನು ನೀನು ನಿನ್ನ ವೈರಿಗಳ ಭಯವನ್ನು ಬಿಡು. ಇನ್ನು ಸ್ವಲ್ಪ ಕಾಲದಲ್ಲೇ ಈ ನಂದರನ್ನು ನಿಗ್ರಹಿಸಿ ನಿನ್ನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿಸುವೆನು. ಈ ವೈಭವವನ್ನು ಕಣ್ಣಾರ ಕಂಡು ಧನ್ಯನಾಗಿ ತಪೋವನಕ್ಕೆ ತೆರಳುವೆನು. ಈ ನನ್ನ ಮಾತನ್ನು ನಂಬು. ಇದಕ್ಕೆ ನನ್ನ

ಪುಣ್ಯವೇ ಸಾಕ್ಷಿ' ಎಂದು ಅಭಯಪ್ರದಾನ ಮಾಡಿದನು. ಇದರಿಂದ ಸಂತೋಷವಾಗಿ ಚಂದ್ರಗುಪ್ತನ ಮುಖ ಅರಳಿತು.

ಈ ಘಟನೆಯಾದ ಮೇಲೆ ನಂದರು ಚಂದ್ರಗುಪ್ತನನ್ನು ಬಹುವಾಗಿ ಹುಡುಕಿಸಿದರು. ಆದರೆ ಅವನು ಸಿಕ್ಕಲಿಲ್ಲ.

## ೫. ಕಾರ್ಯೋದ್ಯೋಗ

ಪಾಟಲೀಪುತ್ರನಗರಕ್ಕೆ ಸಮೀಪವಾದ ಕಾಡೊಂದರಲ್ಲಿ, ಚಾಣಕ್ಯನು ಚಂದ್ರಗುಪ್ತನೊಡನೆ ಮರದ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದನು. ನಂದರ ನಿಗ್ರಹಕ್ಕೆ ಮುಂದೇನು ಮಾಡಬೇಕೆಂಬ ಯೋಚನೆಯೇ ಅವನ ಮನಸ್ಸನ್ನೆಲ್ಲಾ ಆವರಿಸಿತ್ತು. ತನ್ನ ಕಾಲನ್ನೊತ್ತುತ್ತಿದ್ದ ಚಂದ್ರಗುಪ್ತನನ್ನು ನೋಡಿ ಅವನು—'ಕುಮಾರ, ರಾಜರಲ್ಲಿ ನಂದರಿಗೆ ಮಿತ್ರರು ಯಾರು? ಶತ್ರುಗಳು ಯಾರು?' ಎಂದನು.

ಚಂದ್ರಗುಪ್ತ—ಪೂಜ್ಯರೇ, ನಂದರನ್ನು ಕಂಡರೆ ಪರರಾಜರಿಗೆ ದ್ವೇಷವಿದ್ದರೂ, ರಾಕ್ಷಸನು ಮಾಡುವ ಉಪಾಯಗಳಿಗೆ ಅವರು ಹೆದರುತ್ತಾರೆ. ರಾಕ್ಷಸನು ಸಾಮಾನ್ಯನಲ್ಲ. ಮದಿಸಿದ ಅರಸರನ್ನು ದಂಡಿಸುತ್ತಾನೆ. ಅನುರಕ್ತರಾದವರನ್ನು ಆದರಿಸುತ್ತಾನೆ. ಕಾಲಕಾಲಕ್ಕೆ ತಪ್ಪದೆ ಧನಸಂಗ್ರಹ ಮಾಡುತ್ತಾನೆ. ಅವನ ಬಳಿ ಇತರ ಅಧಿಕಾರಿಗಳ ಆಟ ಸಾಗದು. ಅವರು ರಾಜರಲ್ಲಿ ಮರ್ಯಾದೆ ಮೀರದಂತೆ ನಡೆದುಕೊಳ್ಳುತ್ತಾರೆ. ಒಟ್ಟಿನಲ್ಲಿ ರಾಕ್ಷಸನು ಅನ್ಯರ ಶ್ರೇಯಸ್ಸನ್ನು ಸಹಿಸನು.

ಚಾಣಕ್ಯ—ಕುಮಾರ, ರಾಕ್ಷಸನಲ್ಲಿ ಇದನ್ನು ದೋಷವೆಂದು ಭಾವಿಸಬೇಡ. ಅದು ಮಂತ್ರಿಯಲ್ಲಿರಬೇಕಾದ ಒಂದು ಮುಖ್ಯ ಗುಣ. ಜನರಲ್ಲಿ ಹೆಚ್ಚಾಗಿ ಹಣ ಸೇರಿದರೆ ಅವರಿಗೆ ನಿಗ್ರಹಾನುಗ್ರಹ ಶಕ್ತಿಯುಂಟಾಗುವುದು. ಕಾಲಕ್ರಮದಲ್ಲಿ ಅವರು ಅರಸುತನವನ್ನೇ ಬಯಸಬಹುದು. ಇದರಿಂದ ಸ್ವಾಮಿಭೃತ್ಯನ್ಯಾಯ ತಪ್ಪಿ ರಾಜತಂತ್ರಕೆಡುವುದು. ಜನರು ತನ್ನ ಕೈ ಮೀರಿ ಹೋಗದಂತೆ ರಾಜತಂತ್ರವನ್ನು ಮಾಡುವುದರಿಂದ ರಾಕ್ಷಸನು ಮಂತ್ರಿ ಪದವಿಗೆ ಯೋಗ್ಯ. ಅದಿರಲಿ. ನಂದರಿಗೆ ಆಪ್ತಮಿತ್ರರಾರು? ಉದಾಸೀನ ಪಕ್ಷದ ಅರಸುಗಳಾರು?

ಚಂದ್ರಗುಪ್ತ—ಸ್ವಾಮಿ, ಕಾಶೀರಾಜನೂ, ಮತ್ಸ್ಯರಾಜನೂ

ನಂದರಿಗೆ ಆಪ್ತರು. ಪರ್ವತರಾಜನು ಉದಾಸೀನ ಪಕ್ಷದವನು. ಆದರೂ ಇವನು ರಾಕ್ಷಸನನ್ನು ಮಿತ್ರನನ್ನಾಗಿ ಭಾವಿಸುವನು. ಆದರೆ ಅದೇನು ಕಾರಣದಿಂದಲೋ ನಂದರನ್ನು ಅವಮಾನಪಡಿಸಲು ಒಂದು ಕಪಟ ಶಿಲ್ಪವನ್ನು ರಚಿಸಿ, ಪಾಟಲೀಪುರಕ್ಕೆ ಕಳುಹಿಸಿದ್ದನು. ಅದರ ಪರೀಕ್ಷೆ ಯಿಂದಲೇ ನನಗೆ ಬಿಡುಗಡೆಯಾಯಿತು.

ಚಾಣಕ್ಯ—ಕುಮಾರ, ಸ್ವಜನರು ಮಾಡುವ ಅವಹೇಳನ ವಿನೋದಕ್ಕಾಗಿ. ಅದನ್ನೇ ಇತರರು ಮಾಡಿದರೆ ವೈರವುಂಟಾಗುತ್ತದೆ. ಅದಿರಲಿ. ಈ ಪಟ್ಟಣದಲ್ಲಿ ನಿಮ್ಮ ತಂದೆಗೆ ಆಪ್ತರಾಗಿದ್ದ ಅಧಿಕಾರಿಗಳಿರುವರೇ?

ಚಂದ್ರಗುಪ್ತ—ಸ್ವಾಮಿ, ನಮ್ಮ ತಂದೆ ಮಾಡಿದ ಆದರದಿಂದ ಭಾಗುರಾಯಣನೇ ಮೊದಲಾದ ಸೇನಾಪತಿಗಳು ಪ್ರಸಿದ್ಧಿಗೆ ಬಂದರು. ಈಗ ಆ ಕೃತಜ್ಞತೆ ಅವರ ಮನಸ್ಸಿನಲ್ಲಿ ಉಂಟೋ ಇಲ್ಲವೋ ಹೇಗೆ ಹೇಳುವುದು? ಅಲ್ಲದೆ ಬುದ್ಧಿಪರಾಕ್ರಮಗಳಲ್ಲಿ ನಮ್ಮ ತಂದೆ ರಾಕ್ಷಸನಿಗೆ ಸಮಾನನಾದರೂ, ಆತನು ಮಾಡುವ ರಾಜ್ಯ ವಿಚಾರವನ್ನು ನೋಡಿ ರಾಕ್ಷಸನು ಯಾವಾಗಲೂ ತಟಸ್ಥನಾಗಿಯೇ ಇರುತ್ತಿದ್ದ.

ಚಾಣಕ್ಯ—ವತ್ಸ, ರಾಕ್ಷಸನಲ್ಲಿ ಶೌರ್ಯವುಂಟೇ?

ಚಂದ್ರಗುಪ್ತ—ಆರ್ಯರೆ, ಈ ಎಲ್ಲ ಸೇನಾಪತಿಗಳಿಗಿಂತ ಆತ ಶೂರ. ಯುದ್ಧದಲ್ಲಿ ಅವನನ್ನು ಯಾರೂ ಎದುರಿಸರು.

ಚಾಣಕ್ಯ—(ರಾಕ್ಷಸನ ಗುಣಗಳನ್ನು ಮನಸ್ಸಿನಲ್ಲೇ ಹೊಗಳುತ್ತ) ನಮ್ಮ ತಂತ್ರ ಕೈಗೂಡಿ ಯುದ್ಧ ಮೊದಲಾದಾಗ, ನಂದರನ್ನು ಹೊರಗು ಮಾಡಿ, ಸಂಹರಿಸಿ ರಾಕ್ಷಸನನ್ನು ಸಂಗ್ರಹಿಸಬೇಕು. (ಪ್ರಕಾಶವಾಗಿ) ಕುಮಾರ, ಈಗ ನೀನು ಮಾಡಬೇಕಾದ ಒಂದು ಗುಟ್ಟಾದ ರಾಜಕಾರ್ಯವುಂಟು. ಅದಕ್ಕೆ ಮೌರ್ಯನಲ್ಲಿ ಅನುರಕ್ತರಾಗಿದ್ದ ಭಾಗುರಾಯಣಾದಿ ಸೇನಾಪತಿಗಳ ಸ್ವಹಸ್ತಾಕ್ಷರದ ಒಪ್ಪಿಗೆಯ ಕಾಗದವೊಂದು ಬೇಕಾಗಿದೆ. ಈಗ ನಾನು ನಿನಗೆ ಒಂದು ಕಾಗದವನ್ನು ಬರೆದು ಕೊಡುವೆನು. ಅದನ್ನು ಆ ಸೇನಾಪತಿಗಳಿಗೆ ತೋರಿಸಿ ಅವರನ್ನು ಒಡಂಬಡಿಸಿ, ನೀನು ಬರೆಯುವ ಕಾಗದಕ್ಕೆ ನಿನ್ನ ಒಪ್ಪಿಗೆಯ ಕೆಳಗೆ ಅವರ ಒಪ್ಪಿಗೆಯನ್ನು ಬರೆಸಿಕೊಂಡು ಬಾ. ನಾನು ನೈಮಿಶಾರಣ್ಯದಲ್ಲಿ ಗಂಗಾತೀರದ ಸೋಮೇಶ್ವ

ರಾಲಯದ ಬಳಿಯಿರುವ ನನ್ನ ಸ್ನೇಹಿತನಾದ ಇಂದುಶರ್ಮನ ಮನೆಯಲ್ಲಿರುವೆನು. ನೀನು ಅಲ್ಲಿ ನನ್ನನ್ನು ಕಾಣು' ಎಂದು ಹೇಳಿ, ಚಾಣಕ್ಯನು ತನ್ನ ಅಕ್ಷರದಿಂದ ಸಂದರ್ಭೋಚಿತವಾದ ಕಾಗದವನ್ನು ಬರೆದು, ಅದನ್ನು ಚಂದ್ರಗುಪ್ತನ ಕೈಯಲ್ಲಿ ಕೊಟ್ಟು ಹೊರಟು ಹೋದನು.

ಇತ್ತ ಚಂದ್ರಗುಪ್ತನು ಗುಟ್ಟಾಗಿ ಭಾಗುರಾಯಣಾದಿ ಸೇನಾಪತಿಗಳನ್ನು ಕಾಣಿಸಿಕೊಂಡನು. ಅವರು ಚಂದ್ರಗುಪ್ತನಿಗೆ ಬಂದಿರುವ ದುರ್ಗತಿಯನ್ನು ಕಂಡು, ಶೋಕಿಸಿ, ಅವನನ್ನು ಆದರಿಸಿ ನಾಲ್ಕು ಒಳ್ಳೆಯ ಮಾತುಗಳನ್ನಾಡಿದರು. ಇದರಿಂದ ಧೈರ್ಯಗೊಂಡ ಚಂದ್ರಗುಪ್ತನು ಅವರಿಗೆ ' ನಮ್ಮ ತಂದೆ ಕಾಶಿಯ ಗಂಗಾತೀರದಲ್ಲಿ ಒಂದು ಶಿವದೇವಾಲಯವನ್ನು ಕಟ್ಟಿಸಿದನು. ಅಲ್ಲಿ ಈಶ್ವರನನ್ನು ಪ್ರತಿಷ್ಠಿಸಿ, ದೇವರ ಸೇವೆಗೆ ತಗಲುವ ಹಣವನ್ನು ಕೇಶವದಾಸನೆಂಬ ವರ್ತಕನ ಬಳಿ ಬಿಟ್ಟಿದ್ದನು. ಈ ಕಾರ್ಯ ಕೈಗೂಡುವುದಕ್ಕೆ ಮುಂಚೆ ನಂದರು ಆತನನ್ನು ಮೋಸದಿಂದ ಕೊಂದರು. ಸಾಯುವಾಗಲೂ ನಮ್ಮ ತಂದೆಗೆ ಇದೇ ಚಿಂತೆ. ಈ ವಿಷಯವನ್ನರಿತ ನಾನು ಕೇಶವದಾಸನಿಗೆ ಒಂದು ಪತ್ರ ಬರೆದೆನು. ಅದಕ್ಕೆ ಉತ್ತರವಾಗಿ ಆತನು ' ನೀನಿನ್ನೂ ಹುಡುಗ. ಯಾರಾದರೂ ಹಿರಿಯರ ಒಪ್ಪಿಗೆಯುಳ್ಳ ಕಾಗದವನ್ನು ತಂದರೆ ಈ ಕೆಲಸ ಆಗಬಹುದು' ಎಂದು ಬರೆದಿದ್ದಾನೆ. ನೀವು ನನಗೆ ಹಿರಿಯರ ಸಮಾನರು. ಮೇಲಾಗಿ ನಮ್ಮ ತಂದೆಗೆ ಆಪ್ತರು. ಆದಕಾರಣ ನೀವು ನನ್ನಲ್ಲಿ ಮಮತೆಯಿಟ್ಟು, ಈ ಧರ್ಮ ಶಾಶ್ವತವಾಗಿ ನಡೆದು ಬರುವಂತೆ ಒಪ್ಪಬೇಕು' ಎಂದು ತಾನು ತಂದಿದ್ದ ಕಾಗದವನ್ನು ಅವರಿಗೆ ತೋರಿಸಿದನು. ಅದನ್ನು ಓದಿಕೊಂಡು, ಆ ಧರ್ಮಕಾರ್ಯಕ್ಕೆ ಸೇನಾಪತಿಗಳು ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ಆಗಲೇ ಚಂದ್ರಗುಪ್ತನು ಸಂದರ್ಭೋಚಿತವಾಗಿ ಕೇಶವದಾಸನಿಗೆ ಒಂದು ಅಖಂಡವಾದ ಕಾಗದವನ್ನು ಬರೆದು, ಅದಕ್ಕೆ ಮೇಲ್ಗಡೆ ತನ್ನ ಒಪ್ಪಿಗೆಯನ್ನು ಹಾಕಿ, ಅದನ್ನು ಸೇನಾಪತಿಗಳಿಗೆ ಕೊಟ್ಟನು. ಚಂದ್ರಗುಪ್ತನ ಒಪ್ಪಿಗೆಯ ಕೆಳಗೆ ಉಳಿದೆಂಟು ಜನ ಸೇನಾಪತಿಗಳೂ ತಮ್ಮ ಒಪ್ಪಿಗೆಯನ್ನು ಸೂಚಿಸಿ ಗಂಧತಾಂಬೂಲಾದಿಗಳಿಂದ ಚಂದ್ರಗುಪ್ತನನ್ನು ಆದರಿಸಿ ಬೀಳ್ಕೊಟ್ಟರು.

ಈ ಕಾರ್ಯ ಮುಗಿದಮೇಲೆ, ಚಂದ್ರಗುಪ್ತನು ತನ್ನ ತಾಯಿಯ

ಹರಕೆಯನ್ನು ಪಡೆದು, ಆಕೆಯನ್ನೂ ಮತ್ತು ತನ್ನ ಹೆಂಡತಿಯನ್ನೂ ಗೋಪ್ಯವಾಗಿರಿಸಿ, ಚಾಣಕ್ಯನನ್ನು ಇಂದುಶರ್ಮನ ಮನೆಯಲ್ಲಿ ಬಂದು ಕಂಡನು. ಚಾಣಕ್ಯನಿಗೆ ನಮಸ್ಕರಿಸಿ, ತಾನು ತಂದಿದ್ದ ಕಾಗದವನ್ನು ಅವನಿಗೆ ತೋರಿಸಿದನು. ಅದನ್ನು ನೋಡಿ ಚಾಣಕ್ಯನು 'ಚಂದ್ರಗುಪ್ತನಿಗೆ ಅಭಿಮತವಾದ ಕಾರ್ಯ ನಮಗೂ ಅಭಿಮತ' ಎಂಬ ಪಂಕ್ತಿಯನ್ನೂ ಮತ್ತು ಎಂಟು ಜನ ಸೇನಾಪತಿಗಳ ಸಮ್ಮತಿಯನ್ನೂ ಉಳಿಸಿಕೊಂಡು ಉಳಿದ ಭಾಗವನ್ನು ಕತ್ತರಿಸಿ ಹಾಕಿದನು. ಈ ಕಾಗದ ಮುಂದೆ ರಾಜಕಾರ್ಯಕ್ಕೆ ಸಹಾಯವಾಗಬಹುದಲ್ಲವೆ?

ಆಮೇಲೆ ಚಾಣಕ್ಯನು ತನ್ನ ಗೆಳೆಯನಾದ ಇಂದುಶರ್ಮನನ್ನು ನೋಡಿ 'ಮಿತ್ರನೆ, ನಾನು ನಿನ್ನಲ್ಲಿ ವಂಚನೆ ಮಾಡಕೂಡದು. ಪಾಟಲೀಪುರದಲ್ಲಿರುವ ನಂದರು ತಮ್ಮ ದಾಯಾದಿಯಾದ ಮೌರ್ಯನನ್ನೂ, ಅವನ ಮಕ್ಕಳನ್ನೂ ನಿಷ್ಕಾರಣವಾಗಿ ಮೋಸದಿಂದ ಕೊಂದುಹಾಕಿದರು. ದೈವಯೋಗದಿಂದ ಬದುಕಿದ ಈ ಚಂದ್ರಗುಪ್ತನನ್ನು ಅನ್ನಸತ್ರಾಧಿಕಾರಕ್ಕೆ ನೇಮಿಸಿದ್ದರು. ಅಲ್ಲದೆ ಅನ್ನಸತ್ರದಲ್ಲಿ ಭೋಜನಾರ್ಥಿಯೂ, ನಿರಪರಾಧಿಯೂ ಆದ ನನ್ನ ಜುಟ್ಟನ್ನು ಹಿಡಿದೆಳೆಸಿದರು. ಆದ್ದರಿಂದ ಮರೆಹೊಕ್ಕಿರುವ ಈ ಚಂದ್ರಗುಪ್ತನನ್ನು ಕಾಪಾಡುವೆನೆಂದು ಅಭಯವನ್ನು ಕೊಟ್ಟಿರುವೆನಲ್ಲದೆ, ನಂದರನ್ನು ಸಂಹರಿಸಿ ಜುಟ್ಟನ್ನು ಕಟ್ಟುವೆನೆಂದು ಪ್ರತಿಜ್ಞೆಮಾಡಿರುವೆನು. ಈ ಕಾರ್ಯದಲ್ಲಿ ನಿನ್ನ ನೆರವು ನನಗೆ ಆವಶ್ಯಕ. ನೀನು ಬೌದ್ಧ ಸಂನ್ಯಾಸಿಯ ವೇಷವನ್ನು ಧರಿಸಿ, ಜೀವಸಿದ್ಧಿ ಎಂಬ ಹೆಸರಿನಿಂದ, ರಾಕ್ಷಸನ ಬಳಿ ಆಪ್ತನಂತಿದ್ದು ಅವನ ಹೃದಯವನ್ನು ಆಕ್ರಮಿಸು. ನಿನಗೆ ಆಪ್ತರಾದ ನಿನ್ನ ಶಿಷ್ಯರು ಸಮಯೋಚಿತವಾದ ವೇಷಗಳನ್ನು ಧರಿಸಿ, ಪಾಟಲೀಪುರದ ಅಧಿಕಾರಿಗಳ ಬಳಿಯಿದ್ದು ಜ್ಯೋತಿಷವೇ ಮೊದಲಾದ ವಿದ್ಯಾಕೌಶಲಗಳನ್ನು ಅವರಲ್ಲಿ ಮೆರೆಯಲಿ. ನೀನು ರಾಜಧಾನಿಯ ರಾಜಕಾರ್ಯಗಳನ್ನೂ ಅಲ್ಲಿನ ವಿಶೇಷ ವರ್ತಮಾನಗಳನ್ನೂ ನಿನ್ನ ಶಿಷ್ಯರ ಮುಖದಿಂದಲೇ ನನಗೆ ತಿಳಿಸು. ನಾನು ಈಗ ಚಂದ್ರಗುಪ್ತನೊಡನೆ ಪರ್ವತರಾಜನ ಬಳಿಗೆ ಹೋಗುವೆನು. ನೀನು ಪಾಟಲೀಪುರಕ್ಕೆ ತೆರಳು' ಎಂದು ಹೇಳಿ ನಂದನಿಗ್ರಹದಿಂದ ರಾಕ್ಷಸನ ಸಂಗ್ರಹದವರೆಗೆ ಮಾಡಬೇಕಾದ ಉಪಾಯಗಳನ್ನು ಇಂದು

ಶರ್ಮನಿಗೆ ತಿಳಿಸಿ "ಈ ಉಪಾಯಗಳನ್ನು ಆಯಾ ಕಾಲದಲ್ಲಿ ಮಾತ್ರ ನಿನ್ನ ಶಿಷ್ಯರಿಗೆ ತಿಳಿಸಿ, ಅವರಿಂದ ಕೆಲಸ ಮಾಡಿಸು" ಎಂದು ಅವನನ್ನು ಬೀಳ್ಕೊಟ್ಟು, ಚಂದ್ರಗುಪ್ತನೊಡನೆ ಪರ್ವತರಾಜ್ಯಕ್ಕೆ ಹೊರಟನು.

ಇತ್ತ ಇಂದುಶರ್ಮನು ಚಾಣಕ್ಯನ ಕಾರ್ಯಸಾಧನೆಗಾಗಿ, ಕ್ಷಪಣಕವೇಷವನ್ನು ಧರಿಸಿ ಅಮಾತ್ಯರಾಕ್ಷಸನನ್ನು ಆಶ್ರಯಿಸಿದನು. ಅವನ ಶಿಷ್ಯರು ಮಾಸೋಪವಾಸಿ, ಸಿದ್ಧಾರ್ಥಕ, ವೇಗಶರ್ಮ, ಸಮಿದ್ಧಾರ್ಥಕ, ಪಶುಲೋಮ ಎಂಬ ಹೆಸರನ್ನಿಟ್ಟುಕೊಂಡು, ವೈದ್ಯ ಮಂತ್ರಜ್ಞ ಮೊದಲಾದವರ ವೇಷವನ್ನು ಧರಿಸಿ ಭಾಗುರಾಯಣಾದಿಗಳಲ್ಲಿ ಆಪ್ತರಂತೆ ಆಶ್ರಯ ಪಡೆದರು. ಇವರೆಲ್ಲ ಪಾಟಲೀಪುರಕ್ಕೆ ಚಾಣಕ್ಯನು ಬರುವುದನ್ನೇ ಕಾದುಕೊಂಡಿದ್ದರು.

## ೬. ಸ್ನೇಹ ಸಂಪಾದನೆ

ಪಾಟಲೀಪುರಕ್ಕೆ ಹೋಗಿದ್ದ ಪರ್ವತರಾಜನ ಗೂಢಚಾರರು ರಾಜಧಾನಿಗೆ ಹಿಂದಿರುಗಿ ಬಂದರು. ಪಾಟಲೀಪುರದಲ್ಲಿ ಚಂದ್ರಗುಪ್ತನಿಂದ ನಡೆದ ಸಿಂಹ ಪರೀಕ್ಷೆ, ನಂದರು ಮಾಡಿದ ಬ್ರಾಹ್ಮಣಾಪಮಾನ—ಈ ಕಥೆಯೆಲ್ಲವನ್ನೂ ದೂತರಿಂದ ಕೇಳಿ, ಪರ್ವತರಾಜನು ಸೋಜಿಗದಿಂದ ತಲೆದೂಗಿದನು. ಆ ಬಳಿಕ ಮಂತ್ರಿಯಾದ ಶಬರವರ್ಮನನ್ನು ಕುರಿತು 'ಮಂತ್ರಿ, ಪಾಟಲೀಪುರದ ಸಮಾಚಾರವನ್ನು ಕೇಳಿದೆಯಾ? ಆ ಬ್ರಾಹ್ಮಣನು ಸಾಧಾರಣನಂತೆ ತೋರುವುದಿಲ್ಲ. ಅವನಿಂದ ನಂದರಿಗೆ ವಿಪತ್ತು ಸಂಭವಿಸಬಹುದು. ಅಲ್ಲದೆ ನಂದರ ವೈರಿಯಾದ ಚಂದ್ರಗುಪ್ತನು ಅಲ್ಲಿಂದ ಹೊರಟು ಹೋದನಂತೆ. ದೂತರಿಂದ ಚಂದ್ರಗುಪ್ತನನ್ನು ಹುಡುಕಿಸಿದರೂ ಸಿಕ್ಕಲಿಲ್ಲವಂತೆ!' ಎಂದನು.

ರಾಜನ ಮಾತಿಗೆ ಶಬರವರ್ಮನು ಈರೀತಿ ಹೇಳಿದನು 'ಸ್ವಾಮಿ, ಪಾಟಲೀಪುರದ ಸಮಾಚಾರವನ್ನು ಚೆನ್ನಾಗಿ ವಿಚಾರ ಮಾಡಿದರೆ ಇದರಲ್ಲಿ ದೈವಯತ್ನ ಮಾತ್ರ ಇದೆ ಎಂದು ತೋರುವುದಿಲ್ಲ. ಸ್ವಲ್ಪ ಪುರುಷಯತ್ನವೂ ಉಂಟೆಂದು ತೋರುತ್ತದೆ. ಪೂರ್ವಸಂಕೇತವಿಲ್ಲದೆ ಬ್ರಾಹ್ಮಣನಾದವನು ಅಗ್ರಸ್ಥಾನದಲ್ಲಿ ಬಂಗಾರದ ಪೀಠದ ಮೇಲೆ ಪ್ರಭುಗಳನ್ನು ಲಕ್ಷಿಸದೆ ಕಾಲಮೇಲೆ ಕಾಲನ್ನು ಹಾಕಿಕೊಂಡು ಕುಳಿತುಕೊಂಡಿರಲು

ಕಾರಣವೇನು? ಆತನು ತೇಜಸ್ವಿಯಾಗಿದ್ದರೆ ನಂದರಿಗೆ ವಿಪತ್ತು ತಪ್ಪದು. ಸಾಧುಸಜ್ಜನರ ನಿಟ್ಟುಸಿರು ಕುಲವನ್ನು ನಾಶಮಾಡುವುದರಲ್ಲಿ ಸಂದೇಹವೇನು? ಚಂದ್ರಗುಪ್ತನು ಬ್ರಾಹ್ಮಣನನ್ನು ಮರೆಹೊಕ್ಕು ಅವನೊಡನೆ ಹೋಗಿರಬೇಕು. ಈ ಕೆಲಸ ರಾಕ್ಷಸನಿಲ್ಲದ ಕಾಲದಲ್ಲಿ ತಿಳಿಗೇಡಿಗಳಾದ ನಂದರಿಂದ ನಡೆದಿರಬೇಕು.'

ಶಬರವರ್ಮನ ಮಾತಿಗೆ ಪರ್ವತರಾಜನು 'ಎಲೈ ಮಂತ್ರಿ, ನೀನು ಹೇಳಿದುದೆಲ್ಲ ಸರಿ. ಆದರೆ ಆ ಬ್ರಾಹ್ಮಣನು ತೇಜಸ್ವಿಯಾಗಿದ್ದರೆ ಅವನೇಕೆ ನಂದರಿಗೆ ಶಾಪಕೊಡಲಿಲ್ಲ.? ಆ ಬ್ರಾಹ್ಮಣನು ದರಿದ್ರ. ಚಂದ್ರಗುಪ್ತ ಬಲಹೀನ. ಇವರಿಬ್ಬರೂ ಸೇರಿ ಬಹುಸೇನೆಯಿಂದ ಕೂಡಿರುವ ನಂದರನ್ನು ಗೆಲ್ಲಲು ಹೇಗೆ ಸಾಧ್ಯ?' ಎಂದು ತಿರುಗಿ ಕೇಳಿದನು. ಅದಕ್ಕೆ ಮಂತ್ರಿಯು 'ಲೋಭಿಗೆ ಹಣದಲ್ಲಿ ಆಸೆಯಿರುವಂತೆ ಮಹಾತ್ಮರಿಗೆ ತಪಸ್ಸಿನಲ್ಲಿ ಆಸೆಯಿರುವುದರಿಂದ ಅದನ್ನು ನಷ್ಟಪಡಿಸಿಕೊಳ್ಳಲು ಅವರು ಒಪ್ಪರು. ವಿಶ್ವಾಮಿತ್ರನು ಶ್ರೀರಾಮಚಂದ್ರನಿಂದ ಸುಬಾಹುಮಾರೀಚರನ್ನು ಕೊಲ್ಲಿಸಿದಂತೆ ಆತನು ಚಂದ್ರಗುಪ್ತನಿಂದ ನಂದರನ್ನು ಕೊಲ್ಲಿಸಬಹುದು. ಚಂದ್ರಗುಪ್ತನಿಗೆ ದೈವಬಲವುಂಟಾಗಿದೆ. ಜೊತೆಗೆ ತೇಜಸ್ವಿಯಾದ ಬ್ರಾಹ್ಮಣನ ಸಹಾಯ ದೊರಕಿದೆ. ಹೀಗಿರುವಲ್ಲಿ ಹೇಳತಕ್ಕದ್ದೇನು? ಗಾಳಿಬೆಂಕಿಗಳು ಒಟ್ಟುಕೂಡಿದರೆ ಕಾಡು ಸುಟ್ಟು ಬೂದಿಯಾಗದೆ?' ಎಂದನು. ಮಂತ್ರಿಯ ಮಾತಿಗೆ ತನ್ನ ಒಪ್ಪಿಗೆಯನ್ನಿತ್ತು ರಾಜನು ಅಂತಃಪುರಕ್ಕೆ ತೆರಳಿದನು. ಮಾರನೆಯ ದಿನ ಲಂಪಾಕಾಧಿಪತಿ ರಾಜಧಾನಿಗೆ ಹತ್ತಿರವಾಗುತ್ತಿದ್ದಾನೆ ಎಂಬ ಸುದ್ದಿ ತಿಳಿದುಬರಲು, ಪರ್ವತೇಶ್ವರನು ಯುದ್ಧಕ್ಕೆ ಸಿದ್ಧನಾದನು.

ಇತ್ತ ಪರ್ವತರಾಜನ ರಾಜಧಾನಿಗೆ ಪ್ರಯಾಣ ಹೊರಟಿದ್ದ ಚಾಣಕ್ಯನು ಕೆಲವು ದಿನಗಳಾದ ಮೇಲೆ ಚಂದ್ರಗುಪ್ತನೊಡನೆ ಆ ರಾಜ್ಯವನ್ನು ಹೊಕ್ಕನು. ನಾಡಿಗೆ ನಾಡೇ ಹಸುರುಟ್ಟು ನಲಿಯುತ್ತಿದ್ದುದನ್ನು ಕಂಡು ಚಾಣಕ್ಯನಿಗೆ ತುಂಬ ಸಂತೋಷವಾಯಿತು. ಆದರೆ ತನ್ನೊಡನೆ ಚಿಂತಿಸುತ್ತಾ ಬರುತ್ತಿದ್ದ ಚಂದ್ರಗುಪ್ತನನ್ನು ನೋಡಿ 'ಕುಮಾರ, ಏಕೆ ಬಾಡಿದ ಮುಖವುಳ್ಳವನಾಗಿರುವೆ? ನಿನ್ನ ಚಿಂತೆಗೆ ಕಾರಣವೇನು? ಚಿಂತೆಗೆ ಮನಸ್ಸಿನಲ್ಲಿ ಸ್ಥಳಕೊಡುವುದೂ, ಹಾವಿಗೆ ಮುತ್ತಿಡುವುದೂ

ಎರಡೂ ಒಂದೇ. ಚಿಂತೆಗೂ ಚಿತೆಗೂ ಇರುವ ವ್ಯತ್ಯಾಸ ಒಂದು ಬಿಂದು. ಚಿತೆ ಜೀವವಿಲ್ಲದ ದೇಹವನ್ನು ಸುಡುವುದು. ಚಿಂತೆ ಜೀವಂತ ಮನುಷ್ಯನನ್ನೇ ಸುಡುವುದು' ಎಂದನು. ಆಚಾರ್ಯರ ಮಾತನ್ನು ಕೇಳಿ ಚಂದ್ರಗುಪ್ತನು 'ತಾವು ಹೇಳಿದ ಮಾತು ಸತ್ಯ. ನನ್ನ ಮಾತನ್ನು ಸ್ವಲ್ಪ ಲಾಲಿಸಬೇಕು. ಈ ಪಟ್ಟಣದ ಈಶಾನ್ಯ ದಿಕ್ಕಿನಲ್ಲಿ ಶತ್ರು ನಾಶ ಸೂಚಕವಾಗಿ ಹುಟ್ಟಿರುವ ಧೂಮಕೇತುವಿನಂತೆ ಬಾವುಟ ಹಾರಾಡುತ್ತಿದೆ. ಅದರ ಸುತ್ತಲೂ ಸೇನೆ ನೆರೆದಿದೆ. ಇದನ್ನು ನೋಡಿದರೆ ರಾಜನಿಗೆ ದಂಡಯಾತ್ರೆಯ ಸಮಯವೆಂದು ಕಾಣುತ್ತದೆ. ಆದ್ದರಿಂದ ಈ ರಾಜನು ತನ್ನ ಕೆಲಸವನ್ನು ಬಿಟ್ಟು ನಮ್ಮ ಕೆಲಸ ಮಾಡಿಕೊಡುವನೇ ಎಂದು ಮನಸ್ಸು ಚಿಂತಿಸುತ್ತದೆ.' ಎಂದು ನುಡಿದನು.

ಚಂದ್ರಗುಪ್ತನ ಮನೋಭಾವವನ್ನು ಗ್ರಹಿಸಿ ಚಾಣಕ್ಯನು 'ಕುಮಾರ, ಇದಕ್ಕೆ ಏಕಿಷ್ಟು ಚಿಂತೆ? ಈ ಲೋಕದಲ್ಲಿ ಪರೋಪಕಾರಕ್ಕೆ ಮಿಂಚಿದ ಧರ್ಮ ಮತ್ತೊಂದಿಲ್ಲ. ಶ್ರೀಗಂಧದ ಮರ ತಾನು ಒಣಗಿ ಪರರಿಗೆ ಆನಂದವನ್ನುಂಟುಮಾಡುವಂತೆ, ಉತ್ತಮರು ತಮಗೆ ಕಷ್ಟ ಬಂದರೂ ಮರೆಹೊಕ್ಕವರನ್ನು ಕಾಪಾಡುತ್ತಾರೆ. ಈ ಪರ್ವತೇಶ್ವರನು ಪರಮಗುಣಾಢ್ಯ. ತನ್ನ ಕೆಲಸವೆಷ್ಟಿದ್ದರೂ ಅದನ್ನು ಬಿಟ್ಟು ನಮ್ಮ ಕಾರ್ಯಕ್ಕೆ ಸಹಾಯ ಮಾಡುವನು. ಇದರ ಮೇಲೆ ಎಲ್ಲಕ್ಕೂ ಅದೃಷ್ಟ ದೊಡ್ಡದು. ಇದಕ್ಕೆ ಒಂದು ಕಥೆಯುಂಟು. ಹೇಳುವೆನು ಕೇಳು. ಒಂದು ಕಾಡಿನಲ್ಲಿ ಒಂದು ಮರದ ಮೇಲೆ ಎರಡು ಪಾರಿವಾಳದ ಹಕ್ಕಿಗಳು ಪ್ರೀತಿಯಿಂದ ಮನೆ ಮಾಡಿಕೊಂಡಿದ್ದುವು. ಒಮ್ಮೆ ಬೇಡನೊಬ್ಬನು ಹಕ್ಕಿಗಳನ್ನು ಕೊಲ್ಲಲು ಬಿಲ್ಲಿನಲ್ಲಿ ಬಾಣ ಹೂಡಿ ಬಿಡಲು ಸಿದ್ಧನಾಗಿ ಮರದಡಿ ಬಂದು ನಿಂತನು. ಹಕ್ಕಿಗಳು ಮೇಲೆ ಹಾರಿ ಹೋಗುವಂತಿಲ್ಲ. ಏಕೆಂದರೆ ಗಿಡುಗವೊಂದು ಹಕ್ಕಿಗಳನ್ನು ತಿನ್ನಲು ಆಕಾಶದಲ್ಲಿ ಸುತ್ತುತ್ತಿದೆ. ಹಕ್ಕಿಗಳಿಗೆ ಎಂಥ ಕಷ್ಟ ಬಂತು! ಅವು ಈಗೇನು ಮಾಡಬೇಕು? ಆ ಸಮಯದಲ್ಲಿ ಬೇಡನು ಹಾವು ಕಚ್ಚಿ ಸತ್ತು ಹೋದನು. ಅವನ ಬಿಲ್ಲಿನಲ್ಲಿ ಹೂಡಿದ್ದ ಬಾಣ ಗಿಡುಗನನ್ನು ಕೊಂದಿತು. ದೈವಯೋಗದಿಂದ ಪಾರಿವಾಳಗಳು ಬದುಕಿಕೊಂಡುವು. ಹಾಗೆಯೇ ನಮಗೆ ದೈವಬಲ ಒದಗಿದ್ದರೆ ನಮ್ಮ ಉಪಾಯದಿಂದ ಈ

ರಾಜನಿಗೆ ಶತ್ರುಗಳ ಆತಂಕ ತಪ್ಪಿ ಇದೇ ಸೇನೆಯೊಡನೆ ನಾವು ಪಾಟಲೀ ಪುರದ ಮುತ್ತಿಗೆಗೆ ತೆರಳಬಹುದು' ಎಂದನು. ಈ ಮಾತಿನಿಂದ ಚಂದ್ರಗುಪ್ತನಿಗೆ ಸ್ವಲ್ಪ ಸಮಾಧಾನವಾಯಿತು. ಇಬ್ಬರೂ ಪರ್ವತೇಶ್ವರನ ರಾಜಧಾನಿಯನ್ನು ಸೇರಿದನು.

ಮಾರನೆಯ ದಿನ ಚಾಣಕ್ಯನು ಚಂದ್ರಗುಪ್ತನೊಡನೆ ಪರ್ವತ ರಾಜನನ್ನು ಕಂಡನು. ರಾಜನು ಇಬ್ಬರನ್ನೂ ಆದರದಿಂದ ಕಂಡು ಬಂದ ಕಾರ್ಯವೇನೆಂದು ಅವರನ್ನು ಕೇಳಿದನು. ರಾಜನ ಮಾತಿಗೆ ಚಾಣಕ್ಯನು ಏಕಾಂತ ಯೋಗ್ಯವಾದ ರಾಜಕಾರ್ಯವುಂಟೆಂದು ಹೇಳಲು, ದೊರೆಯ ಇಂಗಿತವನ್ನು ಅರಿತು ಸಭೆಯಲ್ಲಿದ್ದವರೆಲ್ಲ ದೂರಸರಿದರು. ಆಗ ಚಾಣಕ್ಯನು ರಾಜನಿಗೆ ತಾನು ಬಂದ ಕೆಲಸವನ್ನು ತಿಳಿಸಿ, ಭಾಗು ರಾಯಣಾದಿಗಳ ಒಪ್ಪಿಗೆಯ ಕಾಗದವನ್ನು ಆತನ ಕೈಗೆ ಕೊಟ್ಟನು. ಅದನ್ನು ನೋಡಿಕೊಂಡು ರಾಜನು ಮನಸ್ಸಿನಲ್ಲಿ 'ನಾನು ಮೊದಲು ಆಲೋಚಿಸಿದಂತೆಯೇ ಕೆಲಸ ನಡೆದಿದೆ. ಮೌರ್ಯರ ಮರಣದಿಂದ ಅಲ್ಲಿಯ ಅಧಿಕಾರಿಗಳಿಗೆ ಅಸಮಾಧಾನವಾಗಿರಬೇಕು. ಈ ಕಾಗದವೇ ಅದನ್ನು ಸೂಚಿಸುತ್ತದೆ. ಚಂದ್ರಗುಪ್ತನನ್ನು ನೋಡಿದರೆ ಪ್ರಭುಪದಕ್ಕೆ ಯೋಗ್ಯನಂತೆ ಕಾಣುತ್ತಾನೆ. ಇವನಿಂದಲೇ ಪಂಜರ ಪರೀಕ್ಷೆ ನಡೆದಿರಬೇಕು. ಆದರೆ ಈಗ ಲಂಪಾಕಾಧಿಪತಿ ನಮ್ಮ ಮೇಲೆ ದಂಡೆತ್ತಿ ಬಂದಿರುವಾಗ ಇವರಿಗೆ ಹೇಗೆ ಅಭಯಕೊಡುವುದು ? ಇರಲಿ, ಮಂತ್ರಿ ಗಳೊಡನೆ ಆಲೋಚಿಸಿ ಇವರಿಗೆ ಉತ್ತರ ಹೇಳುತ್ತೇನೆ.' ಎಂದು ಕೊಂಡು ಚಾಣಕ್ಯನಿಗೆ 'ಸ್ವಾಮಿ, ಮಧ್ಯಾಹ್ನಕಾಲ ಮೀರಿತು, ತಾವು ಬಳಲಿದ್ದೀರಿ. ವಿಶ್ರಮಿಸಿಕೊಳ್ಳಿ. ಈ ಕಾರ್ಯವನ್ನು ಮತ್ತೊಮ್ಮೆ ಆಲೋಚಿಸೋಣ' ಎಂದು ಅವರನ್ನು ಬೀಳ್ಕೊಟ್ಟನು. ಶಬರವರ್ಮನು ಅವರಿಬ್ಬರಿಗೂ ಉಚಿತವಾದೆಡೆಯಲ್ಲಿ ಬೀಡಾರ ಮಾಡಿಸಿದನು.

ಆ ಮಾರನೆಯ ದಿನ ಪರ್ವತರಾಜನು, ತನ್ನ ಮಂತ್ರಿಗಳಾದ ಉಲೂಕ, ಶಬರವರ್ಮರನ್ನು ಏಕಾಂತದಲ್ಲಿ ಕುಳ್ಳಿರಿಸಿಕೊಂಡು 'ಮಂತ್ರಿ ಗಳೇ, ಈಗ ಚಂದ್ರಗುಪ್ತನು ನಂದರಲ್ಲಿ ಹಗೆತನವನ್ನು ಸಾಧಿಸಲು ನಮ್ಮ ಸಹಾಯವನ್ನು ಬಯಸಿ ಬಂದಿರುವನೇ ? ಇಲ್ಲವೆ ಶತ್ರುರಹಿತ ವಾದ ರಾಜ್ಯವನ್ನು ಸಂಪಾದಿಸಲು ಬಂದಿರುವನೇ ? ಚಾಣಕ್ಯರು ಹೇಳಿದ

ಭಾವವನ್ನು ನೋಡಿದರೆ ಎರಡು ವಿಧವಾಗಿಯೂ ತೋರುತ್ತದೆ. ಅಲ್ಲದೆ ಈಗ ಲಂಪಾಕಾಧಿಪತಿ ಬೇರೆ ದಂಡೆತ್ತಿ ಬಂದಿದ್ದಾನೆ. ಈಗ ನಾವು ಮಾಡಬೇಕಾದ ಕರ್ತವ್ಯವನ್ನು ತಿಳಿದು ಹೇಳಿ ' ಎಂದನು.

ರಾಜನ ಮಾತಿಗೆ ರಾಕ್ಷಸನ ಮಿತ್ರನಾದ ಉಲೂಕನೆಂಬ ಮಂತ್ರಿ ಈ ರೀತಿ ಹೇಳಿದನು: ' ಸ್ವಾಮಿ, ಪಾಟಲೀಪುರದ ಅರಸರಿಗೂ ನಮಗೂ ಎಂದಿಗೂ ವೈರವಿಲ್ಲ. ಈಗ ಚಂದ್ರಗುಪ್ತನಿಂದ ಅದನ್ನು ಸಂಪಾದಿಸಿಕೊಳ್ಳಬೇಕಾಗುತ್ತದೆ. ನಂದರು ಧನದಲ್ಲಿ, ಬಲದಲ್ಲಿ ಎಲ್ಲರನ್ನೂ ಮೀರಿಸಿರುವ ಅಂಶ ತಮಗೆ ತಿಳಿದೇ ಇದೆ. ಅವರು ಶೂರರೂ ಶೂರಪರಿವಾರವುಳ್ಳವರೂ ಆದಕಾರಣ ದಂಡೋಪಾಯ ಅವರಲ್ಲಿ ಸಾಗದು. ಸಾಮ, ದಾನ ಭೇದಗಳಿಗೆ ಅವರಲ್ಲಿ ಅವಕಾಶವುಂಟೇ? ಚಂದ್ರಗುಪ್ತ ಶೂದ್ರ ಸ್ತ್ರೀಯ ಮೊಮ್ಮಗ. ಆದಕಾರಣ ಅವನು ಪ್ರಭು ಪದಕ್ಕೆ ಯೋಗ್ಯನಲ್ಲ. ಈಗ ನಂದರಲ್ಲಿ ಯುದ್ಧ ಪ್ರಯತ್ನವನ್ನು ಕೈಕೊಂಡರೆ ಜಯಲಕ್ಷ್ಮಿ ಯಾರಿಗೆ ಒಲಿಯುವಳೋ ಹೇಳಬಲ್ಲವರಾರು? ಇಲಿಯನ್ನು ಹಿಡಿಯಲು ಬೆಟ್ಟವನ್ನು ಅಗೆದಂತಾಗಬಹುದು ಈ ಕಾರ್ಯಸಾಧನೆ. ಈಗ ಚಂದ್ರುಗುಪ್ತನಲ್ಲಿ ಸ್ನೇಹವನ್ನು ಬೆಳೆಸಿ ರಾಕ್ಷಸನ ಮೂಲಕ ಚಂದ್ರಗುಪ್ತ ನಂದರ ವೈರವನ್ನು ಪರಿಹರಿಸುವುದು ಮೇಲು. ಆಗ ಅವರು ಚಂದ್ರಗುಪ್ತನಿಗೆ ಉಚಿತವಾದ ಜೀವನೋಪಾಯವನ್ನು ಕಲ್ಪಿಸಬಹುದು. ಅದಕ್ಕಿಂತ ಮೊದಲು ಈಗ ನಮ್ಮ ಮೇಲೆ ದಂಡೆತ್ತಿ ಬಂದಿರುವ ಲಂಪಾಕಪತಿಯ ಗರ್ವವನ್ನು ಮುರಿಯಬೇಕು.'

ಉಲೂಕನ ಮಾತಿಗೆ ಶಬರವರ್ಮನು ಈ ರೀತಿ ನುಡಿದನು—

' ಸ್ವಾಮಿ, ಮನುಷ್ಯನಿಗೆ ಗುಣ ಮುಖ್ಯವೇ ಹೊರತು ಕುಲವಲ್ಲ. ಜನರು ಶೂರನೂ, ನ್ಯಾಯಪರನೂ ಆದ ಅರಸನನ್ನು ಪ್ರೀತಿಸುತ್ತಾರೆ. ನಂದರಾದರೋ ಮದಿಸಿ, ಪರದೇಶಗಳನ್ನೊತ್ತಿಕೊಳ್ಳುತ್ತ ಹೆಚ್ಚಿ ಹೋಗಿದ್ದಾರೆ. ನಂದರಲ್ಲಿ ಈಗ ಒಡಕು ಉಂಟಾಗಿದೆ. ಇದೇ ಸಮಯವನ್ನು ಉಪಯೋಗಿಸಿಕೊಂಡು ನಾವು ಅವರನ್ನು ನಾಶಮಾಡಬೇಕು. ಈಗ ಉದಾಸೀನ ಮಾಡಿದರೆ ಮುಂದೆ ಅನರ್ಥವಾದೀತು! ಲಂಪಾಕಾಧಿಪತಿಯನ್ನು ಜಯಿಸಲು ಈಗ ನಾವು ಎಷ್ಟು ಕಷ್ಟಪಡಬೇಕಾಗಿದೆ! ಮೊದಲು

ಈಗ ಮೇಲೆ ಬಂದಿರುವ ವೈರಿಯನ್ನು ನಿಗ್ರಹಿಸಿ, ಆಮೇಲೆ ಗೌಡದೇಶಕ್ಕೆ ತೆರಳೋಣ. ಚಂದ್ರಗುಪ್ತನು ಪರಮಗುಣಾಢ್ಯ. ಅವನಿಗೆ ಸಹಾಯ ಮಾಡಿದರೆ ತಮಗೆ ಯಶಸ್ಸೂ, ಲಾಭವೂ ಉಂಟಾಗುವುದು.'

ಶಬರವರ್ಮನ ಮಾತಿನಿಂದ ಪರ್ವತರಾಜನಿಗೆ ನಂದರ ಮೇಲೆ ಕೋಪ ಹುಟ್ಟಿ 'ಅಯ್ಯಾ ಮಂತ್ರಿ, ನೀನು ಹೇಳಿದ ಮಾತು ಸತ್ಯ. ಮುಂದಕ್ಕೆ ನಾವು ಮಾಡಬೇಕಾದ ಕರ್ತವ್ಯವೇ ಇದು. ಮೊದಲು ಲಂಪಾಕಪತಿಯನ್ನು ಎದುರಿಸಲು ನಮ್ಮ ಸೈನ್ಯ ಸಿದ್ಧವಾಗಿ ತೆರಳಲಿ.' ಎಂದು ಮಂತ್ರಿಗೆ ಅಪ್ಪಣೆಮಾಡಿ ರಾಜನು ಅಂತಃಪುರಕ್ಕೆ ಹೋದನು.

ಮರುದಿವಸ ಪರ್ವತರಾಜನು ಚಾಣಕ್ಯ ಚಂದ್ರಗುಪ್ತರನ್ನು ಆಸ್ಥಾನಕ್ಕೆ ಕರೆಸಿಕೊಂಡು, ಚಾಣಕ್ಯನಿಗೆ ನಂದರ ಮೇಲೆ ಕೋಪ ವುಂಟಾಗುವುದಕ್ಕೂ, ಚಂದ್ರಗುಪ್ತನ ಮೇಲೆ ಅನುಗ್ರಹವುಂಟಾಗುವು ದಕ್ಕೂ ಕಾರಣವನ್ನು ಕೇಳಿದನು. ಚಾಣಕ್ಯನು ಹಿಂದಿನ ಕಥೆಯೆಲ್ಲ ವನ್ನೂ ರಾಜನಿಗೆ ವಿವರಿಸುತ್ತ ಹೀಗೆ ಹೇಳಿದನು: 'ನಂದರು ವಿಮರ್ಶೆ ಮಾಡದೆ ನಿರಪರಾಧಿಯಾದ ನನ್ನ ಮೇಲೆ ಕೋಪಗೊಂಡು ಅವಮಾನ ಪಡಿಸಿದರು. ಇದರಿಂದ ಚಂದ್ರಗುಪ್ತನಿಗಿಂತಲೂ ನಂದರ ನಿಗ್ರಹ ನನಗೆ ಅತ್ಯವಶ್ಯ. ನನಗೆ ತಪೋಹಾನಿಯಾಗದಂತೆ ನಂದರನ್ನು ನಿಗ್ರಹಿಸಬೇಕಾಗಿರುವಕಾರಣ, ನಿನ್ನ ಸಹಾಯವನ್ನು ಬಯಸಬೇಕಾ ಯಿತು. ನನ್ನ ಪ್ರತಿಜ್ಞೆ ಸಫಲವಾಗುವಂತೆ, ಚಂದ್ರಗುಪ್ತನಿಗೆ ರಾಜ್ಯ ದೊರಕುವಂತೆ ಆಗಬೇಕಾದರೆ ಮೊದಲು ನಿನ್ನ ಸೈನ್ಯ ಗೌಡದೇಶದಲ್ಲಿ ನಿಲ್ಲಬೇಕು. ನೆಪಮಾತ್ರಕ್ಕೆ ನಿನ್ನ ಸೈನ್ಯ ನಮ್ಮೊಡನೆ ಬರಲಿ. ನನ್ನ ಬುದ್ಧಿಶಕ್ತಿಯಿಂದಲೇ ನಂದರನ್ನು ಕೊಲ್ಲುವೆನು. ಆ ಬಳಿಕ ಎಲ್ಲವೂ ನೀನು ಹೇಳಿದಂತಾಗುವುದು.'

ಪರ್ವತರಾಜ—ಸ್ವಾಮಿ ಬ್ರಾಹ್ಮಣೋತ್ತಮರೇ, ತಾವು ಹೇಳಿ ದುದೆಲ್ಲ ವಿಹಿತ. ಮರೆಹೊಕ್ಕವರನ್ನು ಕಾಪಾಡುವುದೂ, ದುಷ್ಟರನ್ನು ಶಿಕ್ಷಿಸುವುದೂ ಶಿಷ್ಟಾಚಾರ. ಆದರೆ ಈಗಲೇ ನಿಮಗೆ ಇಷ್ಟವಾದ ಕಾರ್ಯ ವನ್ನು ಮಾಡಿಕೊಡಲು ನಮಗೆ ಇದು ಸಮಯವಲ್ಲ. ಈಗ ನಮ್ಮ ಮೇಲೆ ದಂಡೆತ್ತಿ ಬಂದಿರುವ ಲಂಪಾಕಾಧಿಪತಿಯನ್ನು ನಾವು ಮೊದಲು ನಿಗ್ರಹಿಸಬೇಕಾಗಿದೆ. ಅಲ್ಲಿಯವರೆಗೆ ನಮ್ಮಲ್ಲಿ ಕೃಪೆಮಾಡಿ ತಾವು

ಇಲ್ಲಿಯೇ ಇರಬೇಕು.

ಚಾಣಕ್ಯ—ಅಯ್ಯಾ ರಾಜಾಧಿರಾಜನೆ, ನೀನು ಹೇಳಿದುದು ಯುಕ್ತ. ಆದರೂ ಯಾವ ಮಹಾಕಾರ್ಯಗೌರವಕ್ಕೆಂದು ಯುದ್ಧೋದ್ಯೋಗವನ್ನು ಮಾಡುವೆ? ಇದೊಂದು ನಿನಗೆ ಮಹಾವಿಷಯವಲ್ಲ.

ಪರ್ವತರಾಜ—ಹಾಗಾದರೆ ಈ ವಿಷಯದಲ್ಲಿ ನಿಮ್ಮ ಸಲಹೆಯೇನು?

ಚಾಣಕ್ಯ—ರಾಜನೇ, ಲೋಕದಲ್ಲಿ ವೈರಿಗಳನ್ನು ಜಯಿಸಲು ನಾಲ್ಕು ತೆರನಾದ ಉಪಾಯಗಳುಂಟು. ಅವುಗಳಲ್ಲಿ ಅರಸರು ಸಾಮ, ದಾನ, ಭೇದಗಳನ್ನೇ ಅನುಸರಿಸಬೇಕು. ದಂಡೋಪಾಯ ಹಿಂಸೆಗೆ ಮೂಲ. ಇದನ್ನು ಅನುಸರಿಸುವ ರಾಜನಿಗೆ ಜಯಶೀಲನೆಂಬ ಕೀರ್ತಿ ಮಾತ್ರ ಬರುವುದು. ಉಳಿದ ಉಪಾಯಗಳನ್ನು ಅನುಸರಿಸುವ ಅರಸನು ತನ್ನ ವೈರಿಗಳನ್ನು ನಾಶಪಡಿಸಿ ಸುಖಿಯಾಗುವನು; ಅವನಿಗೆ ದಯಾಶೀಲನೆಂದು ಕೀರ್ತಿ ಉಂಟಾಗುವುದಲ್ಲವೆ?

ಪರ್ವತರಾಜ—ಪೂಜ್ಯರೇ, ನೀವು ಹೇಳಿದ ಉಪಾಯಗಳನ್ನು ನಂದರಲ್ಲಿ ಏಕೆ ಪ್ರಯೋಗಿಸಕೂಡದು?

ಚಾಣಕ್ಯ–ದೂರಾಲೋಚನೆಯುಳ್ಳ ರಾಜನೇ, ನಿನ್ನ ಅಭಿಪ್ರಾಯ ತಿಳಿಯಿತು. ನಂದರನ್ನು ಸಂಹರಿಸಿದ ಹೊರತು ನಾನು ಜುಟ್ಟನ್ನು ಕಟ್ಟುವುದಿಲ್ಲವೆಂದು ಶಪಥಮಾಡಿದ್ದೇನೆ. ಅಲ್ಲದೆ ಶತ್ರುಗಳಿಂದ ಕೂಡಿದ ರಾಜ್ಯಕ್ಕೆ ಅರಸಾಗಲು ಚಂದ್ರಗುಪ್ತನು ಒಡಂಬಡನು. ಆದ್ದರಿಂದ ನಂದರಲ್ಲಿ ದಂಡೋಪಾಯ ನನಗೆ ಮುಖ್ಯ ಕರ್ತವ್ಯ.

ಚಂದ್ರಗುಪ್ತ–ನೀಚರಾದ ನಂದರ ನಿಗ್ರಹವಿಲ್ಲದೆ ದೊರಕುವ ರಾಜ್ಯಕ್ಕಿಂತ ವನವಾಸ ಎಷ್ಟೋ ಮೇಲು. ಇದನ್ನು ಆಚಾರ್ಯರಲ್ಲಿ ಬಿನ್ನೈಸಿಕೊಳ್ಳಲು, ಅವರು ಶತ್ರುರಹಿತವಾದ ಪ್ರಭುತ್ವವನ್ನುಂಟು ಮಾಡುವೆವೆಂದು ಅಭಯಕೊಟ್ಟಿದ್ದಾರೆ.

ಪರ್ವತರಾಜ—(ನಸುನಗುತ್ತ) ಕುಮಾರ, ಶತ್ರುರಹಿತವಾದ ರಾಜ್ಯಲಾಭಕ್ಕೆ ಕಾರ್ಯದಕ್ಷರಾದ ಮಾನಧನರ ಸಹಾಯವನ್ನು ಬಯಸದೆ, ತಪೋಧನರ ಆಶ್ರಯವನ್ನು ಸಂಪಾದಿಸಿದರೆಂಬ ಭಾವವನ್ನು ಇತರರಿಗೆ ತೋರಿಸಕ್ಕುದಲ್ಲ.

ಚಂದ್ರಗುಪ್ತ—ಬೇರುಗಳನ್ನು ಅಗೆಯುವಾಗ ನಿಧಿಯೇ ಸಿಕ್ಕುವಂತೆ, ನಮ್ಮ ಆಚಾರ್ಯರ ಕರುಣೆಯಿಂದ, ರಾಜಾಧಿರಾಜನಾದ ನಿನ್ನ ಆಶ್ರಯ ದೊರೆತಿರುವಾಗ ಇನ್ನು ನನಗೆ ಕ್ಲೇಶವೆಂದರೇನು?

ಪರ್ವತರಾಜ—(ಚಂದ್ರಗುಪ್ತನ ಮೃದುಮಾತಿಗೆ ಮನಸೋತು) ಈ ಮೃದುವಾದ ಮಾತು, ಈ ವಿನಯ ಮಹಾರಾಜನಿಗಲ್ಲದೆ ಇತರರಿಗೆ ಬರಲಾರವು. ಈ ಚಂದ್ರಗುಪ್ತನ ಮಾತು ನಮ್ಮನ್ನು ಸಂತೋಷಗೊಳಿಸಿದೆ. (ಪ್ರಕಾಶವಾಗಿ) ಆರ್ಯರೇ, ಈಗ ನಮ್ಮ ಮೇಲೆ ದಂಡೆತ್ತಿ ಬಂದಿರುವ ಲಂಪಾಕಾಧಿಪತಿಯನ್ನು ಜಯಿಸುವ ಕಾರ್ಯದಲ್ಲಿ ನಿಮ್ಮ ಅಭಿಪ್ರಾಯವೇನು?

ಚಾಣಕ್ಯ—ರಾಜನೇ, ನಮ್ಮ ಅಭಿಪ್ರಾಯ ಕಾರ್ಯಾಂತದಲ್ಲಿ ತಿಳಿದುಬರುವುದು. ನಿನಗೆ ಆಪ್ತನಾಗಿರುವ ಬುದ್ಧಿಶಾಲಿಯಾದ ಒಬ್ಬ ನಿಯೋಗಿಯನ್ನು ನಮ್ಮ ಬಳಿ ಕಳುಹು. ನಾವು ಹೇಳಿದಂತೆ ಆತನು ನಡೆದುಕೊಳ್ಳಲಿ.

ಪರ್ವತರಾಜನು ಚಾಣಕ್ಯನ ಮಾತಿಗೆ ಒಪ್ಪಿಗೆಯಿತ್ತನು. ಆಲೋಚನೆ ಮುಗಿಯಿತು. ಎಲ್ಲರೂ ತಮ್ಮ ಮನೆಗಳಿಗೆ ತೆರಳಿದರು.

## ೭. ಲಂಪಾಕಾಧಿಪತಿಯ ಪರಾಜಯ

ಬೆಳ್ಳಗೆ ಬೆಳಗಾಯಿತು. ಪರ್ವತರಾಜನ ಆಪ್ತರಾಯಭಾರಿಯಾದ ಕಮಲಾಪೀಡನು ತನ್ನ ಒಡೆಯನ ಅಪ್ಪಣೆಯಂತೆ ಚಾಣಕ್ಯನನ್ನು ಬಂದು ಕಂಡನು. ಆಗ ಚಾಣಕ್ಯನು ಸಂದರ್ಭೋಚಿತವಾದ ಎರಡು ಕಾಗದಗಳನ್ನು ಬರೆದು ಅವಕ್ಕೆ ರಾಜಮುದ್ರೆಯನ್ನೊತ್ತಿ ಕಾಗದಗಳನ್ನು ನಿಯೋಗಿಯ ವಶಕ್ಕೆ ಕೊಟ್ಟನು. ಆ ಬಳಿಕ 'ಕಾಮರೂಪ ದೇಶಾಧಿಪತಿಯ ರಾಜಧಾನಿಗೆ ಹೋಗಿ ಈ ಕಾರ್ಯವನ್ನು ಮಾಡಿಕೊಂಡು ಬಾ' ಎಂದು ಅವನು ಮಾಡತಕ್ಕ ಕಾರ್ಯಕೌಶಲವನ್ನು ವಿವರವಾಗಿ ಹೇಳಿ ಕಳುಹಿಸಿಕೊಟ್ಟನು.

ಚಾಣಕ್ಯನ ಅಪ್ಪಣೆಯಂತೆ ನಿಯೋಗಿಯು ಕೆಲವು ದಿನಗಳಾದ ಮೇಲೆ ಕಾಮರೂಪದೇಶದ ರಾಜಧಾನಿಯನ್ನು ಬಂದು ಸೇರಿದನು. ತನ್ನ ಹೆಸರಿನಲ್ಲಿದ್ದ ರಾಜನ ಕಾಗದವನ್ನು ತನ್ನ ಆಪ್ತದೂತನಿಗೆ

ಕೊಟ್ಟು ' ಈ ರೀತಿ ಮಾಡು ' ಎಂದು ಮಾಡಬೇಕಾದ ಕೆಲಸವನ್ನು ಅವನಿಗೆ ತಿಳಿಸಿ, ತಾನು ರಾಜಧಾನಿಯ ಉದ್ಯಾನವನದಲ್ಲಿ ಬೀಡಾರ ಮಾಡಿದನು.

ದೂತನು ಕಮಲಾಪೀಡನು ಹೇಳಿದಂತೆ, ಅವನನ್ನು ಅಲ್ಲಲ್ಲಿ ಹುಡುಕುತ್ತ ಜನರನ್ನು ಕೇಳುತ್ತ, ಆ ನಗರದ ಗೂಢಚಾರರು ಬಂದು ಇಳಿಯುವ ಚಾವಡಿಯ ಬಳಿಯಲ್ಲಿ ನಿಂತು, ಎಲ್ಲರನ್ನೂ ಕೇಳುವಂತೆ ಅವರನ್ನೂ ಈ ರೀತಿ ಕೇಳಿದನು : ' ಎಲೈ ಜನಗಳಿರಾ, ಪರ್ವತರಾಜನ ನಿಯೋಗಿ ಎಲ್ಲಿ ಇಳಿದಿರುವನು ? ಅವನಲ್ಲಿ ರಾಜಕಾರ್ಯವುಂಟು. ನೀವು ತಿಳಿದಿದ್ದರೆ ನನಗೆ ದಯಮಾಡಿ ಹೇಳಬೇಕು. ನಿಮಗೆ ಬಹಳ ಪುಣ್ಯ ಬರುವುದು.'

ರಾಜಕಾರ್ಯಕ್ಕಾಗಿ ಪರದೇಶದಿಂದ ಬಂದ ಇವನಲ್ಲಿ ಏನೋ ಮೋಸವಿರಬೇಕೆಂದು ತಿಳಿದು, ಗೂಢಚಾರರು ಅವನನ್ನು ಬಂಧಿಸಿ ಕಾಗದದೊಡನೆ ಅವನನ್ನು ತಮ್ಮ ರಾಜನ ಬಳಿಗೆ ಕರೆದುಕೊಂಡು ಹೋದರು. ರಾಜನು ರಾಜಮುದ್ರೆಯ ಕಾಗದವನ್ನು ನೋಡಿ, ಇದರಲ್ಲಿ ಏನೋ ವಿಶೇಷವಿದೆಯೆಂದುಕೊಂಡು ದೂತರಿಗೆ ' ಈ ಕಾಗದ ನಮ್ಮ ಬಳಿ ಇರಲಿ. ಪರ್ವತರಾಜನ ನಿಯೋಗಿಯನ್ನು ಹುಡುಕಿ ತನ್ನಿ. ಅವನು ರಾಜಸಭೆಯನ್ನು ಹೊಕ್ಕಮೇಲೆ ಈ ದೂತನನ್ನು ಬಿಡಿ. ಅಲ್ಲಿಯವರೆಗೆ ಇವನು ಕಾವಲಿನಲ್ಲಿರಲಿ ' ಎಂದು ಅಪ್ಪಣೆ ಮಾಡಿದನು.

ರಾಜಭಟರು ನಗರದ ಒಳಗೂ ಹೊರಗೂ ಚೆನ್ನಾಗಿ ಹುಡುಕಿ, ಉದ್ಯಾನವನದಲ್ಲಿ ಇಳಿದಿದ್ದ ನಿಯೋಗಿಯನ್ನು ಕಂಡು ' ರಾಜರ ಅಪ್ಪಣೆಯಾಗಿದೆ. ನೀವು ಆಸ್ಥಾನಕ್ಕೆ ಬರಬೇಕು ' ಎಂದು ಬಿನ್ನೈಸಿದರು.

ಕಮಲಾಪೀಡನು ಅಟ್ಟಹಾಸದಿಂದ ಆಸ್ಥಾನಕ್ಕೆ ಬರುತ್ತಿರಲು ಪರ್ವತರಾಜನ ಐಶ್ವರ್ಯಕ್ಕೆ ಪಾರವಿಲ್ಲವೆಂದು ರಾಜಬೀದಿಯ ಇಕ್ಕೆಲಗಳಲ್ಲಿಯೂ ನಿಂತಿದ್ದ ಜನ ಹೊಗಳಿತು. ನಿಯೋಗಿಯು ರಾಜನಲ್ಲಿಗೆ ಹೋಗಿ ಕೈಮುಗಿದು ತಾನು ತಂದ ಉಡುಗೊರೆಯನ್ನು ಆತನಿಗೊಪ್ಪಿಸಿ ' ರಾಜೋತ್ತಮರೇ, ರಾಜಾಧಿರಾಜ ಪರ್ವತೇಶ್ವರರು ನಿಮ್ಮ ಕುಶಲವನ್ನು ಕೇಳಿದರು ' ಎಂದು ಬಿನ್ನೈಸಿದನು.

ಅದಕ್ಕೆ ಪ್ರತಿಯಾಗಿ ರಾಜನು ' ನಿಯೋಗಿಯೇ, ನಾವೆಲ್ಲರೂ

ಕ್ಷೇಮವಾಗಿರುವೆವು. ನಿಮ್ಮ ಅರಸರಿಗೆ ಕುಶಲವೇ? ಏನು ಕಾರ್ಯ ಕ್ಕಾಗಿ ನಿಮ್ಮನ್ನು ಕಳುಹಿಸಿದರು?' ಎಂದು ಕೇಳಿದನು.

ಆ ಮಾತಿಗೆ ಕಮಲಾಪೀಡನು 'ದೇವರೇ, ಕುಲೀನರಾದ ನಿಮ್ಮ ಸಂಬಂಧವನ್ನು ನಮ್ಮ ದೊರೆ ಬಯಸಿ ನನ್ನನ್ನು ಕಳುಹಿಸಿದರು. ಸಮಾನ ಕುಲದವರಾದ ನಿಮ್ಮಿಬ್ಬರಿಗೂ ಸಂಬಂಧವುಂಟಾದರೆ ಹಾಲ್ಗಡಲಿನೊಡನೆ ಇಕ್ಷುಸಾಗರ ಬೆರೆತಂತಾಗುವುದು. ಇದರಿಂದ ಲೋಕಕ್ಕೆ ಮಂಗಳವುಂಟು. ಈ ವಿಷಯವನ್ನು ತಿಳಿಸುವ ನಿರೂಪವಿದು' ಎಂದು ಕಾಗದವನ್ನು ರಾಜನಿಗೆ ಒಪ್ಪಿಸಿದನು.

ರಾಜನು ಅದನ್ನು ಬಿಚ್ಚಿ ನೋಡಲು, ಅದರಲ್ಲಿ ಈ ರೀತಿ ಬರೆದಿತ್ತು: 'ಸ್ವಸ್ತಿಶ್ರೀ, ನಮಗೆ ಪರಮಪ್ರಿಯರಾಗಿರುವ ಕಾಮರೂಪ ದೇಶಾಧಿಪತಿಗಳಾದ ಸೂರ್ಯವರ್ಮರಿಗೆ ಪರ್ವತೇಶ್ವರರು ಮಾಡುವ ವಿಜ್ಞಾಪನೆ ಏನೆಂದರೆ–ನಿಮ್ಮ ಸೀಮಂತಪುತ್ರಿಯನ್ನು ನಮ್ಮ ಕುಮಾರ ಮಲಯಕೇತುವಿಗೆ ತಂದು ಮದುವೆ ಮಾಡಬೇಕೆಂಬ ಬಯಕೆಯಿಂದ ನಮ್ಮ ನಿಯೋಗಿಯನ್ನು ನಿಮ್ಮ ಬಳಿ ಕಳುಹಿಸಿರುವೆವು. ಇದಕ್ಕೆ ನೀವು ನಿಮ್ಮ ಒಪ್ಪಿಗೆಯನ್ನು ಸೂಚಿಸಿ ನಿಮ್ಮ ನಿಯೋಗಿಯೊಡನೆ ಕನ್ಯಾರತ್ನದ ಜಾತಕವನ್ನು ನಿಮ್ಮ ಪುರೋಹಿತನ ಸಂಗಡ ಕಳುಹಬೇಕು. ಈ ಶುಭಕಾರ್ಯ ಬೇಗ ನೆರವೇರುವುದರಿಂದ ನಮ್ಮ ಅಭ್ಯುದಯ ನಿಮ್ಮದಾಗುವುದು. ನಿಮ್ಮ ಯೋಗಕ್ಷೇಮವೇ ನಮ್ಮದಾಗುವುದು.'

ಓಲೆಯ ವಿಷಯವನ್ನು ನೋಡಿ ಮಹಾರಾಜನಿಗೆ ಬಲು ಸಂತೋಷವಾಯಿತು. ತನ್ನ ಬಳಿ ಇರುವ ಕಾಗದ ಇದೇ ಅಭಿಪ್ರಾಯವನ್ನು ಸೂಚಿಸಬಹುದೆಂದು, ನಿಯೋಗಿಗೆ ನಾಲ್ಕು ಉಪಚಾರದ ಮಾತುಗಳನ್ನಾಡಿ 'ನೀವು ಬಂದಮೇಲೆ ತಡವಾದುದರಿಂದಲೋ ಏನೋ ನಿಮ್ಮ ರಾಜರು ಬರೆದು ಕಳುಹಿಸಿರುವ ನಿರೂಪ ನಮ್ಮೆಡೆಗೆ ಬಂದಿದೆ' ಎಂದು ಆ ನಿರೂಪವನ್ನು ಅವನ ಕೈಗೆ ಕೊಟ್ಟನು. ಕಮಲಾಪೀಡನು ಅದನ್ನು ಓದಿಕೊಂಡು ಎಲ್ಲವನ್ನೂ ಕಳೆದುಕೊಂಡವನಂತೆ ತಲೆಬಾಗಿ ಯೋಚಿಸುತ್ತ ನಿಂತುಕೊಂಡುಬಿಟ್ಟನು. ಅವನ ಭಾವವನ್ನು ನೋಡಿ ರಾಜನು 'ಅಯ್ಯಾ ನಿಯೋಗಿಯೇ, ಕಾಗದವನ್ನು ನೋಡಿಕೊಂಡು ಏಕೆ ಉತ್ಸಾಹರಹಿತನಾಗಿ ಯೋಚಿಸುತ್ತಿರುವೆ?' ಎನ್ನಲು, ಕಮಲಾಪೀಡನು

'ಸ್ವಾಮಿ, ಮತ್ತೇನೂ ಇಲ್ಲ' ಎಂದು ವಿವರವನ್ನು ಹೇಳದೆ ನಾಚಿ ಸುಮ್ಮನಾದನು. ರಾಜನು ಆ ಕಾಗದವನ್ನು ಓದಬೇಕೆನ್ನಲು ಮಂತ್ರಿ ಓದಿದನು. ಅದರಲ್ಲಿ ಈ ರೀತಿ ಬರೆದಿತ್ತು :—

'ಶ್ರೀ, ಪರ್ವತೇಶ್ವರರು ಕಾಮರೂಪದೇಶಕ್ಕೆ ಹೋಗಿರುವ ನಮ್ಮ ನಿಯೋಗಿಯಾದ ಕಮಲಾಪೀಡನಿಗೆ ಬರೆಸಿ ಕಳುಹಿಸಿದ ನಿರೂಪವೇನೆಂದರೆ—ನೀನು ಕನ್ಯಾರ್ಥಿಯಾಗಿ ಕಾಮರೂಪಾಧಿಪತಿಗಳ ಬಳಿಗೆ ಹೋಗಿರುವುದು ಸರಿಯಷ್ಟೆ. ಅಲ್ಲಿ ನೀನು ಅರಸರನ್ನು ಕಂಡೆಯೋ ಇಲ್ಲವೋ ತಿಳಿಯದು. ನಿನಗೆ ಗುಟ್ಟಾಗಿ ತಿಳಿಸಬೇಕಾದ ಇನ್ನೊಂದು ವಿಷಯವುಂಟು. ಈಚೆಗೆ ಲಂಪಾಕಾಧಿಪತಿಯ ಸಭೆಯಲ್ಲಿ ರಾಜಮಂತ್ರಿಗಳು ಮಾತನಾಡುವಾಗ ಎಲ್ಲ ದೇಶದ ರಾಜರ ಪ್ರಶಂಸೆ ಬಂತು. ಆಗ ಲಂಪಾಕಾಧಿಪತಿ 'ಕಾಮರೂಪದೇಶಾಧಿಪತಿಯ ವಂಶದಲ್ಲಿ ವರ್ಣಸಾಂಕರ್ಯವುಂಟಾಗಿದೆ. ಅವರು ಶೌರ್ಯದಲ್ಲಿ ಒಂದು ಮೆಟ್ಟಿ ಕೆಳಗೆ' ಎಂದನಂತೆ. ನರಕಾಸುರನ ವಂಶದಲ್ಲಿ ಈ ಕಾರ್ಯ ನಡೆದಿಲ್ಲವೆಂಬುದು ನಮಗೆ ಗೊತ್ತು. ಏನೋ ಮಾತ್ಸರ್ಯದಿಂದ ಲಂಪಾಕಪತಿ ಈ ತುಚ್ಛ ವಚನವನ್ನು ಆಡಿರಬೇಕು. ಆದರೂ ನಾವು ಮಾಡುವ ಸಂಬಂಧ ಬಹುಕಾಲ ನಿಲ್ಲತಕ್ಕದ್ದು. ಆದ್ದರಿಂದ ಆ ರಾಜನ ಕುಲಶೀಲಗಳನ್ನು ಪರೋಕ್ಷದಲ್ಲಿ ಚೆನ್ನಾಗಿ ವಿಚಾರಿಸಿಕೊಂಡು ನಿನ್ನ ಮನಸ್ಸು ಒಪ್ಪಿದರೆ ಈ ಶುಭಕಾರ್ಯ ಬೆಳೆಯಲು ನಿಶ್ಚಯಿಸಿಕೊಂಡು ಬಾ.'

ಓಲೆಯ ಒಕ್ಕಣೆಯನ್ನು ಕೇಳಿ ಕಾಮರೂಪಾಧಿಪತಿ ಕಲ್ಲಿಟ್ಟು ಕೆಣಕಿದ ಹುಲಿಯಂತೆ ಕೋಪದಿಂದ 'ಎಲೈ ಮಂತ್ರಿ, ನೀಚನಾದ ಲಂಪಾಕಾಧಿಪತಿ ನಮ್ಮ ವಂಶದವರ ಮೇಲಾಡಿದ ಕೆಟ್ಟಮಾತಿಗೆ ಅವನ ತಲೆಯನ್ನು ತೆಗೆಯದೆ ಈ ಕಿರೀಟವನ್ನು ಧರಿಸುವುದೇ ಇಲ್ಲ. ಈ ಮಾತಿಗೆ ಪ್ರತಿ ಹೇಳಿದವರು ನನಗೆ ಹಗೆಗಳೇ ಸರಿ. ಈಗಲೇ ನಮ್ಮ ಸೇನೆ ಲಂಪಾಕದೇಶಕ್ಕೆ ತೆರಳಲು ಸಿದ್ಧವಾಗಲಿ. ನಾಳೆ ನಮಗೆ ಯುದ್ಧಕ್ಕೆ ಪ್ರಯಾಣ' ಎಂದು ಅಪ್ಪಣೆಮಾಡಿದನು.

ಸೂರ್ಯವರ್ಮನು ಕಮಲಾಪೀಡನಿಗೆ ಉಚಿತವಾದ ಕಾಗದವನ್ನು ಬರೆಸಿಕೊಟ್ಟು ಮರ್ಯಾದೆಮಾಡಿ, ಅವನನ್ನು ಬೀಳ್ಕೊಟ್ಟನು. ಆಗ ರಾಜಧಾನಿಯಲ್ಲಿ ಯುದ್ಧ ಸೂಚಕ ವಾದ್ಯಗಳು ಮೊಳಗಿದುವು.

ಕಮಲಾಪೀಡನು ಮೂರು ನಾಲ್ಕು ದಿನ ಅಲ್ಲಿಯೇ ಇದ್ದು ಸೂರ್ಯವರ್ಮನ ಸೈನ್ಯ ಲಂಪಾಕದೇಶಕ್ಕೆ ತೆರಳಿದುದನ್ನು ನೋಡಿ ಪರ್ವತ ರಾಜ್ಯಕ್ಕೆ ಹಿಂದಿರುಗಿದನು.

## ೮. ಸೇನಾ ಪ್ರಯಾಣ

ಕಮಲಾಪೀಡನು ಬಂದು ಪರ್ವತರಾಜನನ್ನು ಕಂಡು ಕೈಮುಗಿದು, 'ಜೀಯಾ, ನಾನು ಹೋಗಿದ್ದ ಕಾರ್ಯ ಜಯವಾಯಿತು' ಎಂದು ಅದರ ವಿವರಗಳನ್ನು ರಾಜನಿಗೆ ಗುಟ್ಟಾಗಿ ಬಿನ್ನೈಸಿದನು. ಪರ್ವತರಾಜನು ಈ ಸುದ್ದಿಯನ್ನು ಕೇಳಿ ಬೆರಗಾಗಿ, ಮೂಗಿನ ಮೇಲೆ ಬೆರಳಿಟ್ಟು ತಲೆದೂಗಿ ಶಬರವರ್ಮನನ್ನು ಕುರಿತು 'ಎಲೈ ಮಂತ್ರಿ, ಚಾಣಕ್ಯನು ಮಹಾ ಬುದ್ಧಿಸಂಪನ್ನ. ನಾವು ಮಾಡಬೇಕಾದ ಕಾರ್ಯ ಗಂಧರ್ವರಿಂದಲೇ ಆಯಿತೆನ್ನುವಂತೆ ನಮ್ಮಿಂದ ಆಗಬೇಕಾದ ಕಾರ್ಯ ಕಾಮರೂಪಾಧಿಪತಿಯಿಂದಲೇ ಆಯಿತು. ಚಂದ್ರಗುಪ್ತನಿಗೆ ಉಪಕಾರ ಮಾಡುವುದಕ್ಕೆ ಬದಲು ಈಗ ನಾವೇ ಆತನಿಗೆ ಪ್ರತಿಯಾಗಿ ಉಪಕಾರ ಮಾಡಬೇಕಾಗಿ ಬಂತು. ಪಾಟಲೀಪುರಕ್ಕೆ ಸಮಸ್ತ ಸೇನೆಯೊಡನೆ ಈಗ ನಾವೇ ತೆರಳಬೇಕು' ಎಂದನು. ಕೂಡಲೇ ಚಾಣಕ್ಯನನ್ನು ಸಭೆಗೆ ಬರಮಾಡಿಕೊಂಡು ಈ ಒಸಗೆಯನ್ನು ಆತನಿಗೆ ತಿಳಿಸಿ ಚಾಣಕ್ಯನ ಜಾಣ್ಮೆಯನ್ನು ಹೊಗಳಿ ಉಪಚರಿಸಿ ಬೀಡಾರಕ್ಕೆ ಕಳುಹಿಸಿದನು.

ಸಂಜೆಯಾಯಿತು. ಮನ್ಮಥನ ನಗೆಯಂತೆ ಬೆಳುದಿಂಗಳನ್ನು ಸೂಸುತ್ತ ಚಂದ್ರನು ಮೂಡಿಬಂದನು. ಸಂಜೆವೆಣ್ಣು ಮುಡಿದ ಅರಳುಗಳಂತೆ ತಿಳಿನೀಲಿಯಾಕಾಶದಲ್ಲಿ ಚುಕ್ಕೆಗಳು ಮಿನುಗಿದುವು. ಆಗ ಪರ್ವತರಾಜನು ತನ್ನ ಮಗನಾದ ಮಲಯಕೇತುವನ್ನು ಕರೆದು 'ಕುಮಾರ, ನಂದರನ್ನು ನಿಗ್ರಹಿಸಲು ಚಂದ್ರಗುಪ್ತನೊಡನೆ ನಾವೇ ಸೇನಾಸಮೇತವಾಗಿ ತೆರಳಬೇಕಾಗುತ್ತದೆ. ಈ ಕಾರ್ಯವನ್ನು ನಾವು ಮಾಡಿಕೊಟ್ಟರೆ ನಮಗೆ ಉಪಕಾರಮಾಡುವ ವಿಷಯದಲ್ಲಿ ಆತನ ಅಭಿಪ್ರಾಯವನ್ನು ತಿಳಿದು ಬಾ' ಎಂದು ಕಳುಹಿಸಿಕೊಟ್ಟನು.

ಮಲಯಕೇತು ಚಂದ್ರಗುಪ್ತನನ್ನು ಬಂದು ಕಂಡನು. ಪರಸ್ಪರ ಕುಶಲಪ್ರಶ್ನೆಯಾದ ಮೇಲೆ ಚಾಣಕ್ಯನು ಮಲಯಕೇತುವನ್ನು ಕುರಿತು

'ಕುಮಾರ, ಚಂದ್ರಗುಪ್ತನು ನಿಮ್ಮ ಸ್ನೇಹವನ್ನು ಬಯಸಿ ಬಂದಿದ್ದಾನೆ. ನಿಮ್ಮಿಬ್ಬರಿಗೆ ಸ್ನೇಹವಾದಲ್ಲಿ ಉಳಿದ ಸಾಮಂತರಾಜರು ನಿಮ್ಮಡಿಗಳಿಗೆ ತಲೆಬಾಗುವುದರಲ್ಲಿ ಸಂದೇಹವೇನು? ನಮ್ಮ ಕೆಲಸ ಕೈಗೂಡಿದಾಗ ನಿಮಗೆ ಅರ್ಧ ರಾಜ್ಯವನ್ನು ಕೊಡುವುದಾಗಿ ಚಂದ್ರಗುಪ್ತನು ತನ್ನ ಅಕ್ಷರದಿಂದಲೇ ಬರೆದ ಕಾಗದವಿದು. ಇದನ್ನು ನಿಮ್ಮ ತಂದೆಗೆ ತೋರಿಸಬಹುದು. ಈ ನಮ್ಮ ಆಲೋಚನೆ ಹಗೆಗಳಿಗೆ ತಿಳಿಯುವುದಕ್ಕೆ ಮುಂಚೆ ಪಾಟಲೀಪುರದ ಮುತ್ತಿಗೆಗೆ ನಿಮ್ಮ ಸೈನ್ಯ ತೆರಳಲಿ' ಎಂದು ಆ ಕಾಗದವನ್ನು ಅವನ ಕೈಗೆ ಕೊಟ್ಟು ಉಪಚರಿಸಿ ಸುಮ್ಮಾನದಿಂದ ಕಳುಹಿಸಿಕೊಟ್ಟನು.

ಮಲಯಕೇತು ಹಿಂದಿರುಗಿ ಬಂದು ತಂದೆಗೆ ನಮಸ್ಕರಿಸಿ 'ತಂದೆಯೇ, ದುಂಬಿಗಳು ಪರಿಮಳದಿಂದ ತಾಳೆಯ ಹೂವನ್ನು ತಿಳಿಯುವಂತೆ ಬುದ್ಧಿವಂತನಾದ ಚಾಣಕ್ಯನು ನಾನು ಹೋದೊಡನೆಯೇ ತಾನು ಮೊದಲೇ ಬರೆಸಿಟ್ಟಿದ್ದ ಅರ್ಧರಾಜ್ಯ ಕೊಡುವ ಚಂದ್ರಗುಪ್ತನ ಅಕ್ಷರದ ಈ ಕಾಗದವನ್ನು ಕೊಟ್ಟನು' ಎಂದು ಅದನ್ನು ತೋರಿಸಿದನು. ಆ ಕಾಗದವನ್ನು ನೋಡಿಕೊಂಡು ಪರ್ವತೇಶ್ವರನು ಸಂತೋಷದಲ್ಲಿ ಮುಳುಗಿಹೋದನು.

ಪಾಟಲೀಪುರದ ಮುತ್ತಿಗೆಗೆ ಪರ್ವತರಾಜನ ಸೈನ್ಯ ಬಹು ವೈಭವದಿಂದ ಹೊರಟಿತು. ಆ ಸಮಯದಲ್ಲಿ ಚಾಣಕ್ಯನು ಚಂದ್ರಗುಪ್ತನಿಗೆ 'ಕುಮಾರ, ಮಲಯಕೇತುವಿನ ಕೈಯಲ್ಲಿ ಕೊಟ್ಟಿದ್ದ ಕಾಗದ ಪರ್ವತೇಶ್ವರನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ. ಅವನು ಅದನ್ನು ಹಿಂದಕ್ಕೆ ಕಳುಹಿಸದೆ ಬಹುಲಾಭ ಪಡೆದವನಂತೆ ಉತ್ಸಾಹದಿಂದ ಪ್ರಯಾಣ ಹೊರಟಿದ್ದಾನೆ. ಈತನಿಗೆ ಈಗ ನಾವು ಮಾಡಿದ ಉಪಕಾರ ಕೃತಘ್ನನಾದ ರೋಗಿಗೆ ಮಾಡಿದ ಚಿಕಿತ್ಸೆಯಂತಾಯಿತು. ನಮ್ಮ ಕಾರ್ಯವಾದಾಗ ಅರ್ಧರಾಜ್ಯದ ಮಾತು ಬರುವುದು; ಇರಲಿ. ಆಗ ಅದಕ್ಕೆ ತಕ್ಕ ಉಪಾಯವನ್ನು ಕಂಡುಕೊಳ್ಳೋಣ' ಎಂದು ಪ್ರಯಾಣಕ್ಕೆ ಸಿದ್ಧನಾದನು. ಚಾಣಕ್ಯನು ಪಲ್ಲಕ್ಕಿಯನ್ನೇರಿದನು. ಚಂದ್ರಗುಪ್ತನು ತನ್ನ ಭಾಗದ ಭಾಗ್ಯದೇವತೆಯಂತಿದ್ದ ಚಾಣಕ್ಯನಿಗೆ ನಮಸ್ಕರಿಸಿ, ಮಲಯಕೇತುವಿನೊಡನೆ ಮದ್ದಾನೆಯನ್ನೇರಿ ಬಂದನು. ಪರ್ವತರಾಜನು ಆನೆಯನ್ನೇರಿ ಅಟ್ಟಹಾಸದಿಂದ ಯುದ್ಧಕ್ಕೆ ಹೊರಟನು.

# ೯. ಮಿತ್ರಭೇದ

ಚಾಣಕ್ಯ ಚಂದ್ರಗುಪ್ತರೊಡನೆ ಪರ್ವತರಾಜನು ಪಾಟಲೀಪುರವನ್ನು ಮುತ್ತಲು ದಂಡೆತ್ತಿ ಬರುತ್ತಿರುವನೆಂಬ ಸಮಾಚಾರ ರಾಕ್ಷಸನಿಗೆ ಗೂಢಚಾರರಿಂದ ತಿಳಿಯಿತು. ನಂದರಾಜ್ಯದ ಗಡಿದುರ್ಗಗಳು ಒಂದೊಂದಾಗಿ ಪರ್ವತರಾಜನ ಸಾಮಂತರ ವಶವಾದುವು. ತುಂಟ ಪಾಳೆಯಗಾರರು ಇದೇ ಸಮಯವೆಂದು ತಿಳಿದು ಸ್ವತಂತ್ರರಾಗಲು ಯತ್ನಿಸಿದರು. ನಂದರಾಜ್ಯಕ್ಕೆ ಈಗ ನಿಜವಾಗಿಯೂ ವಿಪತ್ತು ತಲೆದೋರುವಂತೆ ಕಂಡುಬಂತು. ಹಿಂದೆ ನಂದರು ದಾಯಾದಿಗಳಾದ ಮೌರ್ಯರನ್ನು ಸುಟ್ಟು ಬೂದಿಮಾಡಿದ್ದರೂ ಚಂದ್ರಗುಪ್ತನೊಬ್ಬನು ಮಾತ್ರ ಆ ಬೂದಿಯಲ್ಲಿ ಕಿಡಿಯಾಗಿ ಉಳಿದನು. ಈ ಕಿಡಿಗೆ ಈಗ ಬ್ರಾಹ್ಮಣನ ತೇಜಸ್ಸೆಂಬ ನೆರೆ ಬೇರೆ ದೊರಕಿತು. ಇನ್ನು ಕೇಳುವುದೇನು ? ನಂದರು ಮೌರ್ಯರನ್ನು ಕೊಂದದ್ದೇ ಅನುಚಿತ. ಜೊತೆಗೆ ಚಂದ್ರಗುಪ್ತನು ಪರ್ವತರಾಜನೊಡನೆ ಸ್ನೇಹ ಬೆಳೆಸಲು ಅವಕಾಶ ಕೊಟ್ಟು ಸ್ವಜನ ವಿರೋಧವನ್ನು ತಂದುಕೊಂಡರು. ಇವುಗಳೊಡನೆ ಬ್ರಾಹ್ಮಣಾಪಮಾನದ ಅಪರಾಧ ತ್ರಿವೇಣಿ ಸಂಗಮದಂತೆ ಬಂದು ಸೇರಿತು. ಚಂದ್ರಗುಪ್ತನು ಗೆಲ್ಲುವ, ಸೋಲುವ ಮಾತು ಹಾಗಿರಲಿ. ನಂದರು ಹಾಳಾಗಿ ಅವರ ನಗರ ವೈರಿಗಳಿಂದ ಸೂರೆಯಾದರೆ ಅವನಿಗೆ ಅಷ್ಟೇ ಸಂತೋಷ. ನಂದರು ತನ್ನಂತಾದರೆನ್ನುವ ತೃಪ್ತಿ ಬರುವುದು ಅವನಿಗೆ. ನಂದರು ದಾಯಾದಿಗಳನ್ನು ಕೊಂದು ಸುಖಿಗಳಾಗಬೇಕೆಂದು ಬಗೆದರು. ಆದರೆ ಈಗ ಅವರ ನಾಶಕ್ಕೆ ದೈವ, ಚಾಣಕ್ಯ ಚಂದ್ರಗುಪ್ತರೊಡನೆ ಒಂದುಗೂಡಿ ಸಂಚುಮಾಡಿತು. ಒಟ್ಟಿನಲ್ಲಿ ರಾಜಕಾರ್ಯ ಈಗ ಪ್ರಬಲವಾದಂತೆ ಅಮಾತ್ಯನಿಗೆ ಕಂಡುಬಂತು. ಈ ವಿಷಮ ಸಮಯದಲ್ಲಿ ಸ್ವಾಮಿಭಕ್ತನಾದವನು ಕೈಕಟ್ಟಿಕೊಂಡು ಕುಳಿತಿರಲಾದೀತೇ ? ಮುಂದಿನ ರಾಜಕಾರ್ಯವನ್ನು ನೆನೆದು, ರಾಯಸದವರನ್ನು ಕರೆಸಿ, ದಶಾರ್ಣ, ಶೂರದೇಶಾಧಿಪತಿಗಳಿಗೆ ರಾಕ್ಷಸನು ಈ ರೀತಿ ನಿರೂಪಗಳನ್ನು ಬರೆಸಿದನು.

'ಮಿತ್ರರೇ, ಕೆಲವು ದಿನಗಳ ಹಿಂದೆ ನಿಮಗೂ ಪರ್ವತರಾಜನಿಗೂ ಕಲಹವುಂಟಾದುದು ಸರಿಯಷ್ಟೆ. ಆಗ ನೀವು ನಮ್ಮನ್ನು

ಸಹಾಯಕ್ಕೆ ಬರಬೇಕೆಂದು ಪ್ರಾರ್ಥಿಸಿದಿರಿ. ಆಗ ನಾವು ನಿಮಗೂ ತಕ್ಕ ಆಲೋಚನೆಯನ್ನು ಹೇಳಿ, ಪರ್ವತರಾಜನಿಗೂ ಸರಿಯಾದ ದಾರಿ ತೋರಿ ನಿಮ್ಮಿಬ್ಬರಿಗೂ ಆಗಬೇಕಾದ ಮಹಾಕಲಹವನ್ನು ತಪ್ಪಿಸಿದೆವು. ಈಗ ಪರ್ವತರಾಜನು ನಾವು ಮಾಡಿದ ಉಪಕಾರವನ್ನು ಮರೆತು, ನಮ್ಮ ಮೇಲೆ ದಂಡೆತ್ತಿ ಬರುತ್ತಿದ್ದಾನೆ. ಆ ಕೃತಘ್ನನನ್ನು ಪಟ್ಟಣಕ್ಕೆ ಹಿಂದಿರುಗಲು ಅವಕಾಶಕೊಡದೆ ಅವನನ್ನು ಇಲ್ಲೇ ನಾಶಮಾಡುತ್ತೇವೆ. ನೀವು ನಮಗೆ ಪರಮಮಿತ್ರರಾದುದು ನಿಜವಾದಲ್ಲಿ ಸೇನೆಯೊಡಗೂಡಿ ಅವನ ಗಡಿದುರ್ಗಗಳನ್ನು ಹಿಡಿದು, ರಾಜಧಾನಿಯನ್ನು ವಶಪಡಿಸಿ ಕೊಳ್ಳಿ. ಪರ್ವತರಾಜನ ರಾಜಧಾನಿ ನಿಮ್ಮ ವಶವಾದರೆ ಆತನ ದೇಶ ಕೋಶಗಳೆಲ್ಲ ನಿಮಗೇ ಸೇರುವುವು.'

ಈ ಲೇಖನಗಳನ್ನು ಚಾರರ ವಶಕ್ಕೆ ಕೊಟ್ಟು 'ವೇಗವಾದ ಕುದುರೆಗಳನ್ನೇರಿ ಈ ನಿರೂಪಗಳನ್ನು ಆಯಾ ದೇಶದ ಅರಸರಿಗೆ ತಲು ಪಿಸಿ, ಅವರ ಸೇನೆ ಸಿದ್ಧವಾಗಿ ಪರ್ವತರಾಜ್ಯಕ್ಕೆ ಹೊರಟುದನ್ನು ನೋಡಿ ಬಂದು ನಮಗೆ ಬೇಗ ತಿಳಿಸಿ' ಎಂದು ಹೇಳಿ ಅವರಿಗೆ ಒಂದು ವರ್ಷದ ಸಂಬಳವನ್ನು ಉಚಿತವಾಗಿ ಕೊಟ್ಟು ಕಳುಹಿಸಿದನು.

ನಂದರ ಪರವಾಗಿ ಚಂದ್ರಗುಪ್ತನೊಡನೆ ಯುದ್ಧ ನಡೆಸುವ ಭಾರ ರಾಕ್ಷಸನದಾಯಿತು. ರಾಜತಂತ್ರದಲ್ಲಿ ಹಸುಳೆಗಳಂತಿದ್ದ ನಂದರು ಮುಂದಿನ ಕಾರ್ಯಕ್ಕೆ ತಮ್ಮ ನಚ್ಚಿನ ಮಂತ್ರಿಯನ್ನೇ ನಂಬಿದರು. ರಾಕ್ಷಸನು ಏಕಾಂತದಲ್ಲಿ ಕುಳಿತು 'ಈ ಪಟ್ಟಣದ ಜನರಿಗೂ ಅರಸು ಗಳಿಗೂ ಗ್ರಹಬಲ ಹೇಗಿರುವುದೋ? ಬುದ್ಧಿವಂತರಾದ ಜೋಯಿಸ ರನ್ನು ಕೇಳಿ ತಿಳಿಯಬೇಕು' ಎಂದು ಚಿಂತಿಸಿದನು. ಅದನ್ನು ಆಮೇಲೆ ತಿಳಿದರಾದೀತೆಂದು ನಿರ್ಧರಿಸಿ, ರಾಯಸದವರನ್ನು ಕರೆಸಿ ಅವರಿಂದ ನಿರೂಪಗಳನ್ನು ಬರೆಸಲು ಸಿದ್ಧನಾದನು. ಚಾಣಕ್ಯನ ಗೆಳೆಯನಾದ ಇಂದುಶರ್ಮನು ಕ್ಷಪಣಕವೇಷದಿಂದ ರಾಕ್ಷಸನನ್ನು ಆಶ್ರಯಿಸಿದ್ದನಷ್ಟೆ. ಇಂದುಶರ್ಮನಾದರೋ ವಾದ, ವಶ್ಯ, ಜ್ಯೋತಿಷ್ಯ, ಮಂತ್ರ ನೀತಿಗಳಲ್ಲಿ ಅತಿ ಕುಶಲ. ಈಗ ಈತನು ರಾಕ್ಷಸನ ಮನೆಯ ಬಾಗಿಲಲ್ಲಿ ಬಂದು ನಿಂತು, ತನ್ನ ಬರುವಿಕೆಯನ್ನು ರಾಕ್ಷಸನಿಗೆ ತಿಳಿಸುವಂತೆ ದೂತರಿಗೆ ತನ್ನ ಪಿಂಛದಿಂದ ಸನ್ನೆಮಾಡಿದನು. ರಾಕ್ಷಸನ ಅಪ್ಪಣೆಯಂತೆ

ಅವನನ್ನು ಒಳಕ್ಕೆ ಬಿಡಲು ಕ್ಷಪಣಕನು ಅಮಾತ್ಯನಿಗೆ ಹರಸಿ ಕುಳಿತು ಕೊಂಡನು. ಆತನನ್ನು ನೋಡಿ ರಾಕ್ಷಸನು—

'ಕ್ಷಪಣಕರೇ, ನೆನೆಸಿದಂತೆ ಒಳ್ಳೆಯ ಸಮಯದಲ್ಲಿ ಬಂದಿರಿ!' ಎಂದನು.

ಅದಕ್ಕೆ ಕ್ಷಪಣಕನು 'ಅಮಾತ್ಯರೇ, ನಾವು ಸಂನ್ಯಾಸಿಗಳು. ಕಾಡೇ ನಮ್ಮ ವಾಸಸ್ಥಳ. ಎಲ್ಲವನ್ನೂ ತ್ಯಾಗಮಾಡಿದವರು ನಾವು. ನಿಮ್ಮಲ್ಲಿ ಇರುವ ಆದರದಿಂದ ನಿಮ್ಮಲ್ಲಿ ಮೌನವನ್ನು ಬಿಟ್ಟು, ನಿಮ್ಮ ಕಲ್ಯಾಣವನ್ನು ಬಯಸುತ್ತಿದ್ದೇವೆ. ನಾಲ್ಕಾರು ದಿನಗಳಿಂದ ತಮ್ಮ ದರ್ಶನವೇ ಇಲ್ಲ ದಾಗಿದೆ. ನಾವಿಲ್ಲಿದ್ದು ಏನು ಪ್ರಯೋಜನ?' ಎಂದು ನುಡಿದನು.

'ರಾಜಕಾರ್ಯಗೌರವದಿಂದ, ಕ್ಷಪಣಕರೇ, ತಮ್ಮನ್ನು ಕರೆಕಳು ಹಿಸಲಾಗಲಿಲ್ಲ. ಈಗ ನೀವು ಬಂದುದು ಒಳ್ಳೆಯದೇ ಆಯಿತು. ನಿಮ್ಮನ್ನು ಒಂದು ಪ್ರಶ್ನೆ ಕೇಳಬೇಕಾಗಿದೆ.'

ಕ್ಷಪಣಕನು ಸಮಯಜ್ಞನಾದುದರಿಂದ ರಾಕ್ಷಸನ ಭಾವವನ್ನು ಗ್ರಹಿಸಿದವನಂತೆ ನಟಿಸಿ 'ಅಮಾತ್ಯರೇ, ನೀವು ಕೇಳಬಯಸುವ ಪ್ರಶ್ನೆ ರಾಜರಿಗೆ ಆತಂಕವನ್ನೂ ಶತ್ರುಗಳ ಬರುವಿಕೆಯನ್ನೂ ಸೂಚಿಸು ತ್ತದೆ. ಈ ಲಗ್ನಕ್ಕೆ ಶತ್ರುಗ್ರಹವನ್ನು ಶತ್ರುಗ್ರಹ ನೋಡುವುದರಿಂದ ನಿಮ್ಮ ಮೇಲೆ ದಂಡೆತ್ತಿ ಬರುವ ಶತ್ರು ಬದುಕಿ ಹಿಂದಿರುಗಲಾರ. ಇದಕ್ಕೆ ನನ್ನ ವ್ರತವೇ ಸಾಕ್ಷಿ. ನಿಮಗೆ ಕಾರ್ಯಾವಸಾನದಲ್ಲಿ ಜಯಲಾಭ ವೆಂದು ಹೇಳಬೇಕು. ಗ್ರಹಗತಿಗಳನ್ನು ನೋಡಿದರೆ ಶತ್ರುವಿಗೆ ಸಹಾಯ ಕರಾಗಿ ಬಂದವರು ಭೇದಕ್ಕೆ ಒಳಗಾದಾರು. ಆಗ ದಂಡೋಪಾಯ ದಿಂದ ಶತ್ರು ಹತನಾದಾನು ಎಂದು ಹೇಳಿ, ಚಾಣಕ್ಯನು ಹಿಂದೆ ತನಗೆ ಹೇಳಿದ್ದ ಮಾತನ್ನು ನೆನೆದು 'ಅಮಾತ್ಯರೇ, ನನ್ನ ಮಾತು ತಮ್ಮ ಮನಸ್ಸಿಗೆ ಬಂದರೆ, ಈ ಅನಿಷ್ಟನಿವಾರಣೆಗಾಗಿ ನದೀತೀರದಲ್ಲಿ ಇದೇ ಲಗ್ನದಲ್ಲಿ ಜಪಶೀಲರಾದ ಬ್ರಾಹ್ಮಣರಿಂದ ಶತ್ರುಪಲಾಯನ ಜಪಮಾಡಿ ಸಿದರೆ ಈ ಅನಿಷ್ಟನಿವೃತ್ತಿಯಾಗುವುದು' ಎಂದನು.

ಕ್ಷಪಣಕನ ಮಾತಿನಿಂದ ಸಂತೋಷಗೊಂಡ ರಾಕ್ಷಸನು 'ಕ್ಷಪಣ ಕರೇ, ನಿಮ್ಮ ಅಭಿಪ್ರಾಯ ನಮ್ಮ ಮನಸ್ಸಿಗೆ ಬಂತು. ಜ್ಯೋತಿಷ್ಯದಲ್ಲಿ ನೀವು ಮಹಾ ಸಮರ್ಥರು. ನೀವು ನಮ್ಮನ್ನು ಬಿಡದೆ ಇಲ್ಲಿಯೇ

ಇರಬೇಕು. ನಮ್ಮಿಂದ ನಿಮಗಾಗಬೇಕಾದ ಪ್ರಯೋಜನವನ್ನು ತಿಳಿಸಿ' ಎಂದು ಹೇಳಿದನು. ಅದಕ್ಕೆ ಉತ್ತರವಾಗಿ ಕ್ಷಪಣಕನು, ತನಗೆ ಲೌಕಿಕವಾದ ಪ್ರಯೋಜನ ಯಾವುದೂ ಬೇಡವೆಂದೂ, ನಗರದ ಹೊರಗಡೆ ಪರ್ಣಶಾಲೆಯೊಂದರಲ್ಲಿ ವಾಸಮಾಡುತ್ತಿದ್ದು ಅಮಾತ್ಯರ ಕಲ್ಯಾಣವನ್ನು ನೆನೆಯುವುದೇ ತನ್ನ ಕರ್ತವ್ಯವೆಂದೂ ಅದಕ್ಕಾಗಿಯೇ ತಾನು ರಾಕ್ಷಸನನ್ನು ಬಿಡದಿರುವುದೆಂದು ಹೇಳಿ ಬುದ್ಧನನ್ನು ನೆನೆದು ಕಣ್ಣನ್ನು ಮುಚ್ಚಿ ಧ್ಯಾನಮಾಡುವವನಂತೆ ಕುಳಿತುಬಿಟ್ಟನು. ಆಗ ರಾಕ್ಷಸನು ಭಾಗುರಾಯಣನನ್ನು ಕರೆಸಿ, ಅವನಿಗೆ ಆಗ ಒದಗಿಬಂದಿರುವ ರಾಜಕಾರ್ಯದ ವಿಷಯವನ್ನು ತಿಳಿಸಿ, ನದೀತೀರದಲ್ಲಿ ಬ್ರಾಹ್ಮಣರಿಂದ ಜಪಮಾಡಿಸಲು ಏರ್ಪಡಿಸುವಂತೆ ಅಪ್ಪಣೆಮಾಡಿ ಕಳುಹಿಸಿದನು.

ಇಷ್ಟೆಲ್ಲ ಕೆಲಸ ಮುಗಿದಮೇಲೆ ರಾಯಸದವರಿಂದ ಪತ್ರಬರೆಸಲು ರಾಕ್ಷಸನು ಯತ್ನಿಸಿ, ಹತ್ತಿರದಲ್ಲಿದ್ದ ಕ್ಷಪಣಕನನ್ನು ಆಚೆ ಹೋಗು ಎಂದು ಹೇಳಲು ಸಂಕೋಚಪಟ್ಟುಕೊಂಡು 'ಈತ ವಿರಕ್ತ. ನಮ್ಮಲ್ಲಿರುವ ಪ್ರೀತಿಯಿಂದ ಈತನಿಗೆ ನಮ್ಮಲ್ಲಿ ಮಾತೇ ಹೊರತು ಇತರರಲ್ಲಿ ಮೌನ. ಇಷ್ಟಾಗಿಯೂ ಈ ಲೌಕಿಕ ವ್ಯವಹಾರದಿಂದ ಈತನಿಗೇನು ಪ್ರಯೋಜನ? ಆದ್ದರಿಂದ ಈತನು ಇಲ್ಲಿದ್ದರೂ ಬಾಧಕವಿಲ್ಲ' ಎಂದು ನಿರ್ಧರಿಸಿ, ಪರರಾಜರ ಬಳಿ ವರ್ತಕವೇಷದಲ್ಲಿದ್ದ ಮಂತ್ರಿಗಳಿಗೆ ಈ ರೀತಿ ಕಾಗದಗಳನ್ನು ಬರೆಸಿದನು.

'ಸ್ವಾಮಿಭಕ್ತರಾದ ನೀವು ಈ ಕಾರ್ಯವನ್ನು ಮಾಡತಕ್ಕದ್ದು. ನಿಮಗೆ ಆಶ್ರಯ ಕೊಟ್ಟಿರುವ ಪರ್ವತರಾಜನ ಸಾಮಂತರು ನಂದರ ಮೇಲೆ ದಂಡೆತ್ತಿ ಬರುತ್ತಿರುವರಷ್ಟೆ. ಈ ಸಮಯದಲ್ಲಿ ಎಷ್ಟು ಹಣ ವೆಚ್ಚವಾದರೂ ಚಿಂತೆಯಿಲ್ಲ. ನಿಮ್ಮ ಅರಸರನ್ನು ಯಾವರೀತಿಯಲ್ಲಾದರೂ ಒಡಂಬಡಿಸಿ ಚಂದ್ರಗುಪ್ತನನ್ನು ಸಂಹರಿಸುವುದು ಉತ್ತಮೋತ್ತಮ. ಇಲ್ಲವಾದರೆ ಅವರು ಏನಾದರೂ ಒಂದು ನೆಪದಿಂದ ಪರ್ವತ ರಾಜನನ್ನು ಬಿಟ್ಟು ನಂದರಿಗೆ ಸಹಾಯವಾಗುವುದು ಒಂದು ಪಕ್ಷ. ಅದೂ ಸಾಧ್ಯವಾಗದಿದ್ದರೆ ಏನಾದರೂ ಒಂದು ಕಾರಣದಿಂದ ಜಗಳ ತೆಗೆದು ತಮ್ಮ ದೇಶಗಳಿಗೆ ಸೇನೆಯೊಡನೆ ಹೋಗುವುದು ಒಂದು

ಮಾರ್ಗ. ಈ ಕಾರ್ಯವೂ ಕೈಗೂಡದಿದ್ದರೆ ಪರ್ವತರಾಜನಿಗೂ ನಂದರಿಗೂ ಯುದ್ಧವಾಗುವಾಗ ನಂದರಮೇಲೆ ಕೈಮಾಡದೆ ಸುಮ್ಮನಿರುವುದು ಒಂದು ರೀತಿ. ನಮ್ಮಿಂದ ಪರ್ವತರಾಜನು ಹತನಾಗುವುದರಲ್ಲಿ ಸಂದೇಹವಿಲ್ಲ. ಆಗ ನಮಗೆ ಅನುಕೂಲರಾದ ಅರಸುಗಳಿಗೆ ಅವರು ಮಾಡಿದ ಉಪಕಾರಕ್ಕಾಗಿ ಆತನ ದೇಶ ಕೋಶಗಳನ್ನು ಸಮನಾಗಿ ಹಂಚಿಕೊಡುತ್ತೇವೆ' ಹೀಗೆಂದು ನಿರೂಪಗಳನ್ನು ಬರೆಸಿದ ಮೇಲೆ ಅವುಗಳನ್ನು ನಾಲ್ಕುಮಂದಿ ಚಾರರಿಗೆ ಕೊಟ್ಟು ವೇಗವಾದ ಕುದುರೆಗಳನ್ನೇರಿ ನಿರೂಪಗಳನ್ನು ಆ ಎಂಟುಜನ ವರ್ತಕರಿಗೆ ತಲುಪಿಸಬೇಕೆಂದು ಅಪ್ಪಣೆಮಾಡಿ ಕಳುಹಿಸಿದನು.

ರಾಕ್ಷಸನ ತಂತ್ರ ಕ್ಷಪಣಕನಿಗೆ ತಿಳಿಯಿತು. ಧ್ಯಾನದಿಂದ ಎಚ್ಚೆತ್ತು 'ನಮ್ಮ ಪ್ರಭುವಿಗೆ ಜಯವಾಗಲಿ' ಎಂದು ಹರಸಿ ಭಿಕ್ಷಾಸಮಯವಾದುದರಿಂದ ರಾಕ್ಷಸನಿಂದ ಬೀಳ್ಕೊಡಿಸಿಕೊಂಡನು. ಅಲ್ಲಿಂದ ತಾಸಿದ್ದ ಸ್ಥಳಕ್ಕೆ ಬಂದು 'ಈ ಕಾಗದಗಳಂತೆ ಕಾರ್ಯ ನಡೆದು ರಾಕ್ಷಸನ ಉಪಾಯ ಫಲಿಸಿದರೆ ಚಾಣಕ್ಯರ ಪ್ರಯತ್ನ ಬೂದಿಯಲ್ಲಿ ಹೋಮಮಾಡಿದಂತಾಗುತ್ತದೆ. ರಾಕ್ಷಸನ ಈ ಕಾಗದಗಳು ವರ್ತಕರಿಗೆ ತಲಪುವುದಕ್ಕೆ ಮುಂಚೆ ಚಾಣಕ್ಯರಿಗೆ ಈ ಸಮಾಚಾರ ತಿಳಿಯದಿದ್ದರೆ ನಾನು ಇಲ್ಲಿದ್ದು ಏನುತಾನೆ ಪ್ರಯೋಜನ? ಅವರಿಗೆ ಹೇಗೆ ತಾನೆ ಸ್ನೇಹಿತನೆನಿಸಿಕೊಳ್ಳುವೆ?' ಎಂದು ನಿರ್ಧರಿಸಿ, ಅಲ್ಲಿ ನಡೆದ ಸಮಾಚಾರವನ್ನೆಲ್ಲಾ ವಿಶದವಾಗಿ ಬರೆದು ಅದನ್ನು ವೇಗಶರ್ಮನೆಂಬ ತನ್ನ ಶಿಷ್ಯನೊಡನೆ ಚಾಣಕ್ಯನಿಗೆ ಕಳುಹಿಸಿಕೊಟ್ಟನು. ವೇಗಶರ್ಮನು ಗುರುವಿನ ಅಪ್ಪಣೆಯಂತೆ ಹತ್ತಿರದಲ್ಲಿ ಯಾರೋ ಸಿದ್ಧಪಡಿಸಿಟ್ಟಿದ್ದ ಕುದುರೆಯನ್ನೇರಿ, ರಾಜಮಾರ್ಗವನ್ನು ಬಿಟ್ಟು ಕಾಲುದಾರಿಯಲ್ಲಿ ಯಾರಿಗೂ ಕಾಣಿಸದಂತೆ ಚಾಣಕ್ಯನ ಬಳಿಗೆ ಬಂದನು.

## ೧೦. ಜಪಶಾಲೆ

ಇತ್ತ ಭಾಗುರಾಯಣನು ಶತ್ರುಪಲಾಯನಕ್ಕಾಗಿ ಜಯಶೀಲರಾದ ಬ್ರಾಹ್ಮಣರನ್ನು ವಿಚಾರಿಸುತ್ತಿದ್ದನು. ಕ್ಷಪಣಕನ ಶಿಷ್ಯನಾದ ಸಿದ್ಧಾರ್ಥಕನು ಭಾಗುರಾಯಣನ ಬಳಿ ವೈದ್ಯವೇಷದಿಂದ ಇರುತ್ತಿದ್ದನಷ್ಟೆ.

ಅವನು ಚಾಣಕ್ಯನ ರಾಜಕಾರ್ಯಕ್ಕೆ ಅನುಕೂಲವಾಗುವಂತೆ ಸರಯೂ ನದಿಯ ತೀರದಲ್ಲಿ ಜಪಶಾಲೆಯನ್ನು ಮಾಡಿಸಬೇಕೆಂದು ಯೋಚಿಸಿ 'ಸೇನಾಪತಿಗಳೇ, ಗಂಗಾಸರಯೂ ಸಂಗಮದ ಪೂರ್ವಭಾಗ ಜಪಕ್ಕೆ ಅನುಕೂಲವಾದ ಸ್ಥಳ. ಏಕೆಂದರೆ ಜಪ ಅಲ್ಲಿ ಬಹು ಬೇಗ ಸಿದ್ಧಿಸುವುದೆಂದು ಬಲ್ಲವರು ಹೇಳುವರು.' ಎಂದನು. ಅಷ್ಟರಲ್ಲೇ ಸಿದ್ಧಾರ್ಥಕನ ಸ್ನೇಹಿತನಾದ ಮಾಸೋಪವಾಸಿ ಮುನಿಯ ವೇಷವನ್ನು ಧರಿಸಿ ಅದೃಷ್ಟವಶದಿಂದ ಬೀದಿಯಲ್ಲಿ ಹೋಗುವಂತೆ ನಡೆಯುತ್ತಿದ್ದನು. ಸಿದ್ಧಾರ್ಥಕನು 'ಇದೇನು ಸೋಜಿಗ! ಇವರು ಇಲ್ಲಿಗೆ ಬರಲು ಕಾರಣವೇನು?' ಎಂದು ದೂರದಿಂದಲೇ ಅವನಿಗೆ ಕೈ ಮುಗಿದನು. ಭಾಗುರಾಯಣನು ಇದನ್ನು ನೋಡಿ 'ಸಿದ್ಧಾರ್ಥಕನೇ ಇದೇನು? ಇವರಾರು?' ಎನಲು, ಆತನು 'ಸೇನಾಪತಿಗಳೇ, ಇವರು ಮಾಸೋಪವಾಸಿಗಳೆಂಬ ಮಹಾಮುನಿಗಳು. ನಮ್ಮ ಪುಣ್ಯದಿಂದಲೇ ಇವರು ಈ ಕಡೆ ಬಂದಿರುವಂತಿದೆ. ಇವರ ಕ್ಷೇಮಸಮಾಚಾರವನ್ನು ಕೇಳುವ ಮಾತು ಹಾಗಿರಲಿ. ಏನಾದರೂ ಮಾಡಿ ಈ ಜಪದ ಆರ್ತ್ವಿಜ್ಯಕ್ಕೆ ಇವರನ್ನು ಒಪ್ಪಿಸಿದರೆ ಇವರಿಂದ ಕೆಲಸ ಕೈಗೂಡುವುದರಲ್ಲಿ ಸಂದೇಹವಿಲ್ಲ' ಎಂದನು. ಸಿದ್ಧಾರ್ಥಕನ ಮಾತಿನಂತೆ ಭಾಗುರಾಯಣನು ಮಾಸೋಪವಾಸಿಯನ್ನು ವಿನಯದಿಂದ ಕರೆತಂದು ಅವನಿಗೆ ನಾನಾ ಬಗೆಯಾಗಿ ಹೇಳಿಸಿ ಆರ್ತ್ವಿಜ್ಯಕ್ಕೆ ಒಪ್ಪುವಂತೆ ಮಾಡಿದನು. ಸಿದ್ಧಾರ್ಥಕನು ಹೇಳಿದ ಸ್ಥಳದಲ್ಲೇ ಜಪಶಾಲೆ ರಚಿತವಾಯಿತು. ಅವನ ಕಡೆಯ ಬ್ರಾಹ್ಮಣರೇ ಮಾಸೋಪವಾಸಿಗೆ ಜಪದಲ್ಲಿ ಸಹಾಯಕರಾಗಿ ನಿಂತರು. ತನ್ನ ನಾಲ್ಕು ಜನ ಶಿಷ್ಯರಿಂದ ಕೂಡಿ ಮಾಸೋಪವಾಸಿ ಚಾಣಕ್ಯನ ಆಗಮನವನ್ನೇ ಕಾದುಕೊಂಡಿದ್ದನು.

ಇತ್ತ ರಾಕ್ಷಸನು ತನ್ನ ಮನಸ್ಸಿನಲ್ಲಿ ಈ ರೀತಿ ಯೋಚಿಸಿದನು. 'ನಂದರು ನಿಷ್ಕಾರಣವಾಗಿ ಮೌರ್ಯರನ್ನು ಕೊಂದರು. ಇದರಿಂದ ನಮ್ಮ ಅಧಿಕಾರಿಗಳಿಗೆ ಇವರಲ್ಲಿ ವಿಶ್ವಾಸ ತಪ್ಪಿರಬಹುದು. ಇವರು ತಮ್ಮ ಕಾರ್ಯಸಾಧನೆಗಾಗಿ ನಂದರಲ್ಲಿ ಸ್ವಾಮಿ ಭೃತ್ಯರಂತೆ ನಟಿಸುತ್ತ ದಂಡೆತ್ತಿಬರುತ್ತಿರುವ ಚಂದ್ರಗುಪ್ತನಲ್ಲಿ ಪ್ರೀತಿಯನ್ನಿಟ್ಟಿರಬಹುದು. ಚಂದ್ರಗುಪ್ತ ಶೂದ್ರಸ್ತ್ರೀಯ ಮೊಮ್ಮಗ. ರಾಜ್ಯಕ್ಕೆ ಯೋಗ್ಯನಲ್ಲ

ವೆಂಬುದನ್ನು ಮರೆತಿರಬಹುದು. ರಾಜಕಾರ್ಯ ಪ್ರಬಲವಾಗಿರುವಾಗ ಈ ವಿಷಯದ ಚರ್ಚೆಯು ಗೋಜಿಗೇ ಈಗ ಹೋಗಬಾರದು. ಈ ಸಮಯದಲ್ಲಿ ಸೇನಾಪತಿಗಳನ್ನು ಬಹುಮಾನಗಳಿಂದ ಪ್ರೋತ್ಸಾಹಿಸಿ, ಅವರಿಗೆ ಚಂದ್ರಗುಪ್ತನಲ್ಲಿ ಉಪೇಕ್ಷೆ ಹುಟ್ಟುವಂತೆ ಮಾಡಬೇಕು.' ಹೀಗೆ ನಿಶ್ಚಯಿಸಿ, ಭಾಗುರಾಯಣಾದಿ ಸೇನಾಪತಿಗಳನ್ನು ರಾಜಸಭೆಗೆ ಕರೆಸಿಕೊಂಡು 'ಸೇನಾಪತಿಗಳೇ, ನಂದರ ವಿಜಯವೇ ನಿಮ್ಮ ಅಭ್ಯುದಯ. ಶತ್ರು ದಂಡೆತ್ತಿ ಬರುವ ಈ ವೇಳೆಯಲ್ಲಿ ಸ್ವಾಮಿಕಾರ್ಯದಲ್ಲಿ ನೀವು ಎಚ್ಚರಿಕೆಯಿಂದಿರಬೇಕು.' ಎಂದು ಹುರಿದುಂಬಿಸಿ, ವಸ್ತ್ರಾಭರಣಗಳಿಂದ ಅವರನ್ನು ಬಹುಮಾನಿಸಿ ಕಳುಹಿಸಿದನು.

## ೧೧. ವರ್ತಕರ ವಿಪತ್ತು

ವೇಗಶರ್ಮನು ಗುರುವಿನ ಅಪ್ಪಣೆಯಂತೆ ಕ್ಷಪಣಕನ ಲೇಖನವನ್ನು ತಂದು ಚಾಣಕ್ಯನಿಗೆ ಕೊಟ್ಟನು. ಅದನ್ನು ಓದಿಕೊಂಡು ಚಾಣಕ್ಯನು ಚಂದ್ರಗುಪ್ತನಿಗೆ 'ವತ್ಸ, ರಾಕ್ಷಸನು ನಮ್ಮ ನಾಶಕ್ಕೆ ಬಲವಾದ ತಂತ್ರಹೂಡಿದ್ದಾನೆ. ನಂದರ ಮಂತ್ರಿಗಳು ವರ್ತಕ ವೇಷದಿಂದ ಪರ್ವತರಾಜನ ಬಳಿಯಲ್ಲಿದ್ದು ನಮ್ಮ ನಾಶಕ್ಕೆ ಸಮಯ ಕಾಯುತ್ತಿದ್ದಾರೆ. ಈ ವಿಷಯವನ್ನು ನಮ್ಮ ಮಿತ್ರನಾದ ಇಂದ್ರಶರ್ಮನು ಬರೆದು ಕಳುಹಿಸಿದ್ದಾನೆ. ಈ ಕಪಟವೇ ನಂದರ ನಾಶಕ್ಕೆ ಕಾರಣವಾಗಬಹುದು. ಈಗಲೇ ಈ ಅಂಶವನ್ನು ಪರ್ವತರಾಜನಿಗೆ ತಿಳಿಸಿ ರಾಕ್ಷಸನ ತಂತ್ರಕ್ಕೆ ಪ್ರತೀಕಾರಮಾಡಿ ಜಯಸಂಪಾದಿಸಬೇಕು' ಎಂದು ಪರ್ವತರಾಜನ ಬಳಿಗೆ ಬಂದು ಆತನಿಗೆ ಈ ರೀತಿ ಹೇಳಿದನು—

'ರಾಜನೇ, ಧನದ ಮೇಲೆ ಈ ಲೋಕ ನಿಂತಿದೆ. ಅದು ಎಲ್ಲರಿಗೂ ಹುಚ್ಚು ಹಿಡಿಸುವುದು. ಈಗಿನ ಸಮಯದಲ್ಲಿ ಧನದಿಂದ ಮಿತ್ರರು ಶತ್ರುಗಳಾಗಬಹುದು; ಶತ್ರುಗಳು ಮಿತ್ರರಾಗಬಹುದು. ನೀನು ಚಂದ್ರಗುಪ್ತನಿಗೆ ಕೊಟ್ಟಿರುವ ಅಭಯವನ್ನು ರಾಕ್ಷಸನು ತಿಳಿದು, ನಿನಗೂ ನಿನ್ನ ಬಳಿಯಲ್ಲಿರುವ ಅರಸರಿಗೂ ಜಗಳ ಗಂಟಿಕ್ಕುವ ಉಪಾಯ ಹೂಡಿದ್ದಾನೆ. ಅವರ ಬಳಿ ಇರುವ ವರ್ತಕರಿಗೆ ರಾಕ್ಷಸನ ಪತ್ರ ಬಂದಿದೆ. ಈ ಅಂಶವನ್ನು ಚೆನ್ನಾಗಿ ಪರಿಶೋಧಿಸಬೇಕು.'

ಚಾಣಕ್ಯನು ಈ ರೀತಿ ಹೇಳುತ್ತಿರುವ ಸಮಯಕ್ಕೆ ಸರಿಯಾಗಿ ದೂತನೊಬ್ಬನು ಲೇಖನದೊಡನೆ ಬಂದಿದ್ದ ಪಾಟಲೀಪುರದ ಗೂಢಚಾರನನ್ನು ಹಿಡಿದು ತಂದು ಪರ್ವತರಾಜನ ಮುಂದೆ ನಿಲ್ಲಿಸಿದನು. ಗೂಢಚಾರನಲ್ಲಿದ್ದ ಲೇಖನಗಳನ್ನು ಓದಿಕೊಂಡು ರಾಜನು ಅದರ ವಿವರಗಳನ್ನು ತಿಳಿದುಕೊಂಡನು. ಚಾಣಕ್ಯನು ರಾಕ್ಷಸನ ವಿಷಯವಾಗಿ ಹೇಳಿದ ಅಭಿಪ್ರಾಯ ರಾಜನ ನಿದರ್ಶನಕ್ಕೆ ಬಂತು. ಕೂಡಲೇ ಚಾಣಕ್ಯನು ಕ್ಷಪಣಕನ ಪತ್ರವನ್ನು ರಾಜನಿಗೆ ತೋರಿಸಿದನು. 'ಈ ಗೂಢಮಂತ್ರಿಗಳಿಗೆ ಏನು ದಂಡನೆ ಮಾಡಬೇಕು? ಕ್ರೂರವಾದ ಶಿಕ್ಷೆ ಮಾಡಿದರೆ ಈ ಅರಸರಿಗೆ ಮುಖಭಂಗವಾಗಿ ರಾಜಕಾರ್ಯ ಕೆಡಬಹುದು' ಹೀಗೆಂದು ಯೋಚಿಸಿ, ಪರ್ವತರಾಜನು ಚಾಣಕ್ಯನ ಮಾತಿನಂತೆ ಈ ಎಂಟುಜನ ವರ್ತಕರನ್ನು ದಂಡಿಸದೆ ಕಾವಲಿಟ್ಟು ಅವರ ದೇಶಗಳಿಗೆ ಕಳುಹಿಸಿದನು. ರಾಜನ ಸಾಮಂತರು ಈ ವಿಷಯವಾಗಿ ಏನೊಂದೂ ಮಾತನಾಡಲಿಲ್ಲ. ತೆರೆಯ ಮರೆಯಲ್ಲಿ ಏನು ನಡೆದಿದೆಯೋ ಎಂದು ಅವರು ಸುಮ್ಮನಿದ್ದರು. ಇದೆಲ್ಲವನ್ನೂ ನೋಡಿ ಪಾಟಲೀಪುರದ ಇತರ ಚಾರರು ಹೆದರಿ ತಮ್ಮಲ್ಲಿದ್ದ ಕಾಗದಗಳನ್ನು ಹರಿದು ಭಕ್ಷಿಸಿ ತಪ್ಪಿಸಿಕೊಂಡು ಹಿಂದಿರುಗಿ ಹೋದರು.

ವರ್ತಕರನ್ನು ದಂಡಿನಿಂದ ಹೊರಡಿಸಿದ ಮೇಲೆ, ಚಾಣಕ್ಯನು ವೇಗಶರ್ಮನಿಂದ ಪಾಟಲೀಪುರದ ವಿವರಗಳನ್ನೆಲ್ಲ ತಿಳಿದುಕೊಂಡನು. ನಂದರ ಸಂಹಾರಕ್ಕೆ ಅನುಕೂಲವಾದ ಎಲ್ಲ ಏರ್ಪಾಟುಗಳನ್ನು ಇಂದುಶರ್ಮನು ಮಾಡಿದ್ದಾನೆಂದು ಚಾಣಕ್ಯನಿಗೆ ಮನದಟ್ಟಾಯಿತು. ವೇಗಶರ್ಮನನ್ನು ಕುರಿತು ಚಾಣಕ್ಯನು 'ವತ್ಸ, ನೀನು ಹೇಳಿದುದೆಲ್ಲ ನಮ್ಮ ಮನಸ್ಸಿಗೆ ಬಂತು. ಈಗ ರಾಕ್ಷಸನ ಸಂಧಾನ ಮುರಿದಿರುವ ಕಾರಣ ಅವನಿಗೆ ಇಂದುಶರ್ಮನಮೇಲೆ ಸಂಶಯ ಬರುವುದು. ಆದ್ದರಿಂದ ಇಂದುಶರ್ಮನಲ್ಲಿ ರಾಕ್ಷಸನಿಗೆ ಕಪಟ ತೋರದ ರೀತಿ ಎಚ್ಚರಿಕೆಯಿಂದಿರುವಂತೆ ಆತನಿಗೆ ತಿಳಿಸು. ಅಲ್ಲದೆ ಬುದ್ಧಿವಂತನಾದ ಮಾಸೋಪವಾಸಿಗೆ ನಾವು ಈ ರೀತಿ ಹೇಳಿದೆವೆಂದು ಗುಟ್ಟಾಗಿ ತಿಳಿಸು. 'ನಂದರು ಪಟ್ಟಣದಿಂದ ಹೊರಟು ತಮ್ಮ ದಂಡಿನ ಬೀಡಾರಕ್ಕೆ ಬರುವ ವೇಳೆಯಲ್ಲಿ ಆತನು ಶಿಷ್ಯಸಮೇತನಾಗಿ ಅರಸರಿಗೆ ಕಾಣಿಸಿಕೊಂಡು ಅವರಿಗೆ

ಫಲ ಮಂತ್ರಾಕ್ಷತೆಗಳನ್ನು ಕೊಟ್ಟು ಮೃದುವಾದ ಮಾತನ್ನಾಡಲಿ. ಅವರಿಗೆ ಜಪಹೋಮಗಳಲ್ಲಿ ನಂಬಿಕೆಯನ್ನುಂಟುಮಾಡಿ ಮೂರನೆಯ ದಿನ ನಾಲ್ಕನೆಯ ಜಾವದಲ್ಲಿ ನಡೆಯುವ ಪೂರ್ಣಾಹುತಿಯ ಸಮಯಕ್ಕೆ ಅವರು ಜಪಶಾಲೆಗೆ ಬರುವಂತೆ ಮಾಡಲಿ. ಆಗ ಜಪಶಾಲೆಯ ಸುತ್ತಲೂ ಶೂದ್ರಾದಿಗಳ ಸಂಪರ್ಕವಿಲ್ಲದಂತೆ ಮಾಡಿಸಬೇಕು. ನಿನಗೆ ಮಂಗಳ ವಾಗಲಿ' ಎಂದು ಅವನನ್ನು ಕಳುಹಿಸಿಕೊಟ್ಟನು. ಚಾಣಕ್ಯನ ಸಂದೇಶ ಇಂದುಶರ್ಮ, ಮಾಸೋಪವಾಸಿಗಳಿಗೆ ತಿಳಿಯಿತು.

ರಾಕ್ಷಸನಿಗೆ ಭೇದೋಪಾಯ ನಷ್ಟವಾದರೆ, ತನ್ನಲ್ಲಿ ಅವನಿಗೆ ಸಂಶಯ ಹುಟ್ಟಿ ತನ್ನನ್ನು ತೊಂದರೆಪಡಿಸಬಹುದೆಂದು ತಿಳಿದು, ತನ್ನ ಶಿಷ್ಯರು ಕೆಲಕಾಲ ತನ್ನ ಬಳಿಗೆ ಬರಕೂಡದೆಂದು ಅವರಿಗೆ ತಿಳಿಸಿ ಊರ ಹೊರಗಣ ಜಗತೀಕಟ್ಟೆಯಲ್ಲಿ ಕ್ಷಪಣಕನು ಏಕಾಂಗಿಯಾಗಿ ಮೌನ ದಿಂದಿದ್ದುಬಿಟ್ಟನು.

## ೧೨. ಗಂಗಾಸ್ನಾನ

ವರ್ತಕರನ್ನು ಅವರವರ ದೇಶಗಳಿಗೆ ಕಳುಹಿಸಿದ ಮೇಲೆ ಚಾಣ ಕ್ಯನು ಮುಂದಿನ ರಾಜಕಾರ್ಯವನ್ನು ಯೋಚಿಸಿದನು. ಪರ್ವತ ರಾಜನಿಗೆ ಚಾಣಕ್ಯನು 'ರಾಜನೇ, ವೇಗವಾಗಿ ಹರಿಯುವ ಪ್ರವಾಹಕ್ಕೆ ಮರಳು ಸೇತುವೆಯನ್ನು ಕಟ್ಟಿದಂತೆ ರಾಕ್ಷಸನು ಮಾಡಿದ ಪ್ರಯತ್ನ ನಷ್ಟವಾಯಿತು. ಇದು ನಮಗೊಂದು ವಿಜಯವೆಂದು ತಿಳಿ. ಇನ್ನು ನಾವು ಸುಮ್ಮನಿರಬಾರದು. ಎಲ್ಲರಿಗೂ ತಿಳಿಯುವಂತೆ ಪ್ರಕಟವಾಗಿ ಕಾರ್ಯಸಾಧನೆ ಮಾಡಿ ಜಯಸಂಪಾದಿಸಬೇಕು. ಈಗ ನಮಗೆ ಸೈನ್ಯ ದೊಡನೆ ಬಂದು ಸಹಾಯಮಾಡಬೇಕೆಂದು ನಂದರ ಮಿತ್ರನಾದ ಕಾಶೀ ರಾಜನಿಗೆ ಲೇಖನವನ್ನು ಬರೆದು ಕಳುಹಿಸು. ಹಾಗೆ ಮಾಡುವುದ ರಿಂದ ಲಾಭವುಂಟು. ಈ ಕಾರ್ಯವನ್ನು ಸಾಧಿಸಿಕೊಂಡು ಬರಲು ಕಮಲಾಪೀಡನನ್ನು ನಮ್ಮಲ್ಲಿಗೆ ಕಳುಹಿಸು' ಎಂದನು. ಚಾಣಕ್ಯರ ಮಾತಿಗೊಪ್ಪಿ ಪರ್ವತರಾಜನು ತನ್ನ ನಿಯೋಗಿಯನ್ನು ಚಾಣಕ್ಯನ ಸಮೀಪಕ್ಕೆ ಕಳುಹಿಸಿದನು.

ಚಾಣಕ್ಯನು ಕಾಶೀರಾಜನಿಗೆ ಲೇಖನವನ್ನು ಬರೆಸಿ, ಅದಕ್ಕೆ

ರಾಜಮುದ್ರೆಯನ್ನೊತ್ತಿ, ಅದನ್ನು ಕಮಲಾಪೀಡನ ವಶಕ್ಕೆ ಕೊಟ್ಟು ಆತನು ಅಲ್ಲಿ ಮಾಡಬೇಕಾದ ಕೆಲಸಗಳನ್ನು ತಿಳಿಸಿ ಕಳುಹಿಸಿಕೊಟ್ಟನು. ಕಾಶೀಪಟ್ಟಣವನ್ನು ಸೇರಿದ ಮೇಲೆ ಕಮಲಾಪೀಡನು, ಕಾಶೀಪಟ್ಟಣ ದಿಂದ ಪಾಟಲೀಪುರಕ್ಕೆ ಹೋಗಿ ಬರುವ ನಡುದಾರಿಯಲ್ಲಿ ಕಾಶೀರಾಜನ ದೂತರು ಪಾಟಲೀಪುರಕ್ಕೆ ಹೋಗಿ ಬರುವುದನ್ನು ಗಮನಿಸಲು, ತನ್ನಿಬ್ಬರು ದೂತರನ್ನು ಕಾವಲಿಟ್ಟನು. ಈ ಏರ್ಪಾಟು ಮುಗಿದ ಮೇಲೆ ಕಮಲಾಪೀಡನು ಕಾಶೀರಾಜನನ್ನು ಬಂದುಕಂಡು ಪರ್ವತರಾಜನು ಕೊಟ್ಟ ಲೇಖನವನ್ನು ಉಡುಗೊರೆಯೊಡನೆ ಒಪ್ಪಿಸಿದನು. ಕಾಶೀರಾಜನು ಆ ಪತ್ರವನ್ನು ಬಿಚ್ಚಿ ಓದಿಕೊಂಡನು. ನಂದರ ನಾಶದಲ್ಲಿ ಕಾಶೀರಾಜನು ಸೈನ್ಯದೊಡನೆ ಬಂದು ಚಂದ್ರಗುಪ್ತನಿಗೆ ಸಹಾಯ ಮಾಡಬೇಕೆಂಬುದೇ ಈ ಪತ್ರದ ಸಾರಾಂಶ. ಪತ್ರವನ್ನು ಓದಿಕೊಂಡ ಮೇಲೆ ಕಾಶೀರಾಜನು 'ಈ ನಿಯೋಗಿ ಇಲ್ಲಿಗೆ ಬಂದಿರುವ ಸುದ್ದಿ ಮೊದಲು ನಂದರಿಗೆ ತಿಳಿದರೆ ಪ್ರಭುಗಳಿಗೆ ನನ್ನಲ್ಲಿ ಅಪನಂಬಿಕೆಯುಂಟಾಗುವುದು ; ಅಲ್ಲದೆ ನಾನು ಅವರ ಕೋಪಕ್ಕೂ ಗುರಿಯಾಗಬಹುದು. ಆದ್ದರಿಂದ ಈ ಸುದ್ದಿಯನ್ನು ನಾನೇ ಮೊದಲು ಅವರಿಗೆ ತಿಳಿಸುವೆನು' ಎಂದು ನಿರ್ಧರಿಸಿ, ಕಮಲಾಪೀಡನಿಗೆ 'ಅಯ್ಯಾ, ನೀನು ಈ ದಿನ ನಿಮ್ಮ ಬೀಡಾರದಲ್ಲಿದ್ದು ವಿಶ್ರಮಿಕೋ. ಈ ಪತ್ರಕ್ಕೆ ನಾಳೆ ಉತ್ತರ ಹೇಳುವೆವು' ಎಂದು ಅವನನ್ನು ಬೀಳ್ಕೊಟ್ಟನು- ಕಮಲಾಪೀಡನು ಆಸ್ಥಾನವನ್ನು ಬಿಡುವುದಕ್ಕಿಂತ ಮುಂಚೆ ಅಲ್ಲಿನ ಸಮಾಚಾರವನ್ನು ತಿಳಿದು ಬರಲು ಆಸ್ಥಾನದ ಬಾಗಿಲಲ್ಲಿ ತನ್ನ ದೂತರನ್ನು ನಿಲ್ಲಿಸಿ ಬೀಡಾರಕ್ಕೆ ಬಂದನು.

ಕಾಶೀರಾಜನು ನಂದರಿಗೆ ಈ ವಿಷಯವಾಗಿ ಒಂದು ಪತ್ರ ಬರೆದು, ಅದರೊಡನೆ ಪರ್ವತರಾಜನು ಕಳುಹಿಸಿದ ಲೇಖನವನ್ನಿಟ್ಟು, ಮರುದಿನ ಸಂಜೆಗೆ ಅದಕ್ಕೆ ಉತ್ತರ ತರತಕ್ಕದ್ದೆಂದು ಅಪ್ಪಣೆಮಾಡಿ ದೂತರನ್ನು ಪಾಟಲೀಪುರಕ್ಕೆ ಅಟ್ಟಿದನು. ದೂತರು ಕಾಶೀರಾಜನ ಲೇಖನವನ್ನು ರಾಕ್ಷಸನಿಗೆ ಕೊಡಲು ಅವನು ಅದನ್ನು ಓದಿಕೊಂಡು ತನ್ನ ಮನಸ್ಸಿನಲ್ಲಿಯೇ 'ಕಾಶೀರಾಜನಿಗೂ ನಮಗೂ ಇರುವ ಸ್ನೇಹವನ್ನು ಪರ್ವತರಾಜನು ಅರಿಯ. ಕಾಶೀರಾಜನು ಕಾರ್ಯದಕ್ಷ.

ಅವನಿಂದಲೇ ನಂವರ ವೈರಿಯನ್ನು ನಾಶವಾಡಬೇಕು' ಎಂದು ಯೋಚಿಸಿ, ನಂದರ ಒಪ್ಪಿಗೆಯನ್ನು ಪಡೆದು ಅವನಿಗೆ ಈ ರೀತಿ ಪತ್ರ ಬರೆಸಿದನು.

'ಪ್ರಿಯ ಕಾಶೀರಾಜ, ನಿಮ್ಮ ಪತ್ರ ಕೈಸೇರಿ ಅದರರ್ಥ ತಿಳಿಯಿತು. ನಮಗೂ ನಿಮಗೂ ಇರುವ ಸ್ನೇಹವೆಷ್ಟೆಂಬುದನ್ನು ಪರ್ವತರಾಜನು ಅರಿಯ. ಅವನು ನಿಮ್ಮಲ್ಲಿ ಮಾಡಿರುವ ಪ್ರಾರ್ಥನೆಯಿಂದ ನಮ್ಮ ಕಾರ್ಯಕ್ಕೆ ಅನುಕೂಲವೇ ಆಯಿತು. ಈಗ ನಮ್ಮ ಅಭ್ಯುದಯವೇ ನಿಮ್ಮ ಅಭ್ಯುದಯವೆಂದರಿತು, ಪರ್ವತರಾಜನ ಮಾತಿಗೊಪ್ಪಿಕೊಂಡು, ನಿಮ್ಮ ಸೈನ್ಯದೊಡನೆ ಅವನ ಸಹಾಯಕ್ಕೆ ಹೊರಡಿ. ನೀವು ನಡುದಾರಿಗೆ ಬರಲು ನಿಮ್ಮ ಉಪಕಾರವನ್ನು ನೆನೆದು ನಿಮ್ಮನ್ನು ಎದುರುಗೊಂಡು ಗೌರವಿಸಲು, ಆತನು ಚಂದ್ರಗುಪ್ತನನ್ನು ಕಳುಹಿಸುತ್ತಾನೆ. ಆಗ ನೀವು ಚಂದ್ರಗುಪ್ತನನ್ನು ಸಂಹರಿಸತಕ್ಕದ್ದು. ಹಾಗಲ್ಲದೆ ಪರ್ವತರಾಜನ ಮಗನಾದ ಮಲಯಕೇತುವನ್ನು ಕಳುಹಿಸಿದರೆ ಅವನನ್ನು ಸೆರೆಹಿಡಿದು ನಮ್ಮ ಬಳಿಗೆ ಕಳುಹಿಸತಕ್ಕದ್ದು. ಅಲ್ಲದೆ ಇನ್ನಾರನ್ನಾದರೂ ಕಳುಹಿಸಿದರೆ ಪರ್ವತರಾಜನ ಸೇನೆಯಲ್ಲಿಳಿದು, ಸಮಯನೋಡಿ ಚಂದ್ರಗುಪ್ತನನ್ನು ಸಂಹರಿಸಿ.'

ರಾಕ್ಷಸನ ಪತ್ರವನ್ನು ತೆಗೆದುಕೊಂಡು ಕಾಶೀರಾಜನ ದೂತರು ವೇಗವಾಗಿ ರಾಜಧಾನಿಗೆ ಹಿಂದಿರುಗಿದರು.

ರಾಜಧಾನಿಯಲ್ಲಿ ಕಮಲಾಪೀಡನು ಪಾಟಲೀಪುರಕ್ಕೆ ಹೋಗಿ ಬರುತ್ತಿದ್ದ ದೂತರ ಚಲನವಲನಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದನು. ದಿನವೂ ಕಾಶೀರಾಜನ ಆಸ್ಥಾನಕ್ಕೆ ಹೋಗಿ ಬರುವುದು, ಅಲ್ಲಿ ಸಂಜೆ ಬಾ, ನಾಳೆ ಬಾ, ಎನ್ನಿಸಿಕೊಳ್ಳುವುದು ಅವನ ಕೆಲಸವಾಗಿತ್ತು. ಪಾಟಲೀಪುರದಿಂದ ದೂತರು ಹಿಂದಿರುಗಿದ ಮೇಲೆ ಕಾಶೀರಾಜನೇ ಅವನನ್ನು ಕರೆಸಿಕೊಂಡು, ಪರ್ವತರಾಜನಿಗೆ ತಾನು ಸಹಾಯವಾಗಿ ಸೇನೆಯನ್ನು ತೆಗೆದುಕೊಂಡು ಬರುವೆನೆಂದು ಅವನಿಗೆ ತಿಳಿಸಿದನು. ಅದಕ್ಕೆ ಉತ್ತರವಾಗಿ ಕಮಲಾಪೀಡನು 'ಕಾಶೀರಾಜರೇ, ಪರ್ವತರಾಜನಿಗೆ ತಾವು ಸಹಾಯವಾಗಿ ಬರುವುದೇ ಹೆಚ್ಚು. ನಿಮ್ಮನ್ನು ಎದುರುಗೊಳ್ಳಲು, ಚಂದ್ರಗುಪ್ತನೇ ಬರಬೇಕು ಇಲ್ಲವೇ ಮಲಯಕೇತು

ವಾದರೂ ಬರಬೇಕು. ತಾವು ಒಪ್ಪಿದರೆ ಈ ವಿಷಯವನ್ನು ನಮ್ಮ ಅರಸರಿಗೆ ತಿಳಿಸುವೆನು. ಅವರಿಂದ ಉತ್ತರ ಬಂದ ಬಳಿಕ ತಮ್ಮಲ್ಲಿ ಬಿನ್ನೈಸುವೆನು. ಆ ಬಳಿಕ ಸೇನಾಸಮೇತರಾಗಿ ಪರ್ವತರಾಜನ ಸಹಾಯಕ್ಕೆ ತಾವು ಹೊರಡಬಹುದು' ಎಂದನು. ಕಾಶೀರಾಜನು ನಿಯೋಗಿಯ ಮಾತಿಗೆ ಒಪ್ಪಿ ಅವನನ್ನು ಬೀಡಾರಕ್ಕೆ ಕಳುಹಿಸಿದನು.

ಕಮಲಾಪೀಡನು ತನ್ನ ಬೀಡಾರಕ್ಕೆ ಬಂದು, ರಾಜಧಾನಿಯಲ್ಲಿ ನಡೆದ ಎಲ್ಲ ವಿಷಯಗಳನ್ನೂ ವಿವರವಾಗಿ ಬರೆದು ಚಾಣಕ್ಯನಿಗೆ ಕಳುಹಿಸಿದನು. ಇತ್ತ ಕಾಶೀರಾಜನು ಕಮಲಾಪೀಡನನ್ನು ಮರುದಿವಸ ಕರೆಸಿ ಪರ್ವತರಾಜನಿಂದ ಉತ್ತರ ಬಂತೇ ಎಂದು ಕೇಳಲು 'ಇಂದು ಬರಬಹುದು. ದಾರಿಯಲ್ಲಿ ರಾಜಕಾರ್ಯಕ್ಕೆ ಏನು ತಡೆಯೋ ತಿಳಿಯದು. ತಾವು ಆತುರಪಡಬೇಡಿ' ಎಂದನು. ಮೂರನೆಯ ದಿನವೂ ರಾಜನಿಗೆ ಅದೇ ಉತ್ತರ ಹೇಳಿದನು. ಹೀಗೆಯೇ ಕಾಲಕಳೆಯುತ್ತ, ಕಮಲಾಪೀಡನು ರಾಜಧಾನಿಯಲ್ಲಿ ಗಂಗಾಸ್ನಾನತತ್ಪರನಾಗಿ ಚಾಣಕ್ಯನ ಉತ್ತರವನ್ನೇ ಕಾಯುತ್ತ ಕಾಶಿಯಲ್ಲಿದ್ದುಬಿಟ್ಟನು.

ಕಮಲಾಪೀಡನ ಲೇಖನವನ್ನೋದಿಕೊಂಡು ಚಾಣಕ್ಯನು, ಕಾಶೀರಾಜನು ತನ್ನ ಪತ್ರವನ್ನೋದಿಕೊಂಡು ಅದಕ್ಕೆ ಮಾಡಿದ ಕೆಲಸವನ್ನೆಲ್ಲ ಊಹಿಸಿದನು. 'ಕಾಶೀರಾಜನು ಈ ಕೆಲಸವನ್ನೆಲ್ಲ ಏಕೆ ಮಾಡಿದನು?'—ನಂದರ ಪ್ರಸಾದವನ್ನು ಬಯಸಿ. ಈ ಕಪಟವನ್ನು ನಾನು ಬೇಕೆಂದೇ ಮಾಡಿದೆನು. ಸೇನೆಯಿಂದ ನಂದರು ದೂರವಾಗಲು ಇದೇ ಮೊದಲ ಮೆಟ್ಟಲು. ಮಾಸೋಪವಾಸಿಯ ವಾಕ್ಯ ಎರಡನೆಯ ಮೆಟ್ಟಲು. ಈ ಶೇಖರನ ಸೇನೆ ಮೂರನೆಯ ಮೆಟ್ಟಲು. ಈ ಮೂರು ಸಾಧನೆಗಳಿರುವಾಗ ನಂದರು ಯಾವ ದೇವಗರ್ಭವನ್ನು ಹೋಗುವರು?' ಎಂದು ಯೋಚಿಸಿದನು. ಈ ವೇಳೆಗೆ ಸೂರ್ಯನು ಮುಳುಗಲು ಮೆಲ್ಲಮೆಲ್ಲನೆ ಕತ್ತಲೆ ಲೋಕವನ್ನು ಆವರಿಸಿತು. ಚಾಣಕ್ಯನು ಸಂಧ್ಯಾವಂದನೆಗೆ ತೆರಳಿದನು.

## ೧೩. ಕ್ಷಪಣಕ ಪರೀಕ್ಷೆ

ಶತ್ರುಗಳಲ್ಲಿ ತಾನು ಮಾಡಿದ ಭೇದೋಪಾಯ ಭಂಗವಾದುದು ದೂತರಿಂದ ರಾಕ್ಷಸನಿಗೆ ತಿಳಿದುಹೋಯಿತು. ದೂತರ ಮಾತನ್ನು

ಕೇಳಿ ರಾಕ್ಷಸನು ತಲೆದೂಗಿ ತನ್ನ ಮನಸ್ಸಿನಲ್ಲಿ ' ಶತ್ರುಗಳಲ್ಲಿ ನಾನು ಮಾಡಿದ ಉಪಾಯಕ್ಕೆ ಭಂಗ ಬಂದುದು ಇದೇ ಮೊದಲು. ಶತ್ರು ಸೇನೆಯಲ್ಲಿ ಸಿಕ್ಕ ಒಬ್ಬ ಚಾರನ ಕೈಯಲ್ಲಿದ್ದ ಎರಡು ಕಾಗದಗಳಿಂದ ಇಬ್ಬರು ವರ್ತಕರು ಮಾತ್ರ ಬಯಲಿಗೆ ಬರಬೇಕಲ್ಲದೆ ಎಂಟು ಜನ ವರ್ತಕರನ್ನೂ ಪರ್ವತೇಶ್ವರನು ದಂಡಿನಿಂದ ಹೊರಡಿಸಿದುದಕ್ಕೆ ಕಾರಣ ಗೊತ್ತಾಗಲಿಲ್ಲ. ರಾಯಸದವರಿಂದ ಈ ಗುಟ್ಟು ವೈರಿಗಳಿಗೆ ಬಯಲಾಯಿತೆಂದು ಹೇಳಲವಕಾಶವಿಲ್ಲ. ಏಕೆಂದರೆ ಕುಲಪರಂಪರೆಯಿಂದ ಬಂದ ಆಪ್ತರವರು. ರಾಜಕಾರ್ಯವನ್ನು ಆಲೋಚಿಸುವಾಗ ಇಬ್ಬರ ಹೊರತು ಪಂಜರದ ಗಿಳಿಯೂ ಬಳಿಯಲ್ಲಿರಕೂಡದೆಂಬುದು ನೀತಿ ಶಾಸ್ತ್ರಕಾರರ ಮತ. ನಮ್ಮ ಆಲೋಚನೆಯ ವೇಳೆಯಲ್ಲಿ ತಪಸ್ವಿಯಾದ ಕ್ಷಪಣಕನು ಧ್ಯಾನಾಸಕ್ತನಾಗಿದ್ದ. ಅವನಿಂದ ಈ ಗುಟ್ಟು ರಟ್ಟಾಗಿರ ಬಹುದೇ ? ಕಾರ್ಯಮಿಂಚಿಹೋಗಿರುವಾಗ ಈಗ ಅದನ್ನು ಚಿಂತಿಸಿ ಫಲವೇನು ? ಆದರೂ ಉಪೇಕ್ಷೆಮಾಡದೆ ಈ ವಿಷಯದಲ್ಲಿ ಕ್ಷಪಣಕ ನನ್ನು ಪರೀಕ್ಷಿಸಬೇಕು ' ಎಂದು ಯೋಚಿಸಿದನು.

ಆ ಬಳಿಕ ರಾಕ್ಷಸನು, ಹೇಳಿದ ಕಾರ್ಯವನ್ನು ಮಾಡುವುದರಲ್ಲಿ ನಿಪುಣನಾದ ಒಬ್ಬ ಬ್ರಾಹ್ಮಣನನ್ನು ಕರೆದು ' ನೀನು ಕ್ಷಪಣಕನ ಪ್ರತ್ಯಕ್ಷಪರೋಕ್ಷಗಳಲ್ಲಿ ಅವನ ಶೀಲಸ್ವಭಾವಗಳನ್ನು ಚೆನ್ನಾಗಿ ಪರೀ ಕ್ಷಿಸಿ ಬಂದು ನಮಗೆ ತಿಳಿಸುವವನಾಗು.' ಎಂದು ಅಪ್ಪಣೆಮಾಡಿ ಕಳು ಹಿಸಿದನು.

ರಾಕ್ಷಸನು ತನ್ನನ್ನು ಪರೀಕ್ಷಿಸಬಹುದೆಂದು ಕ್ಷಪಣಕನು ಈ ಮೊದಲೇ ಊಹಿಸಿದ್ದನು. ಆದ್ದರಿಂದ ಅವನು ಊರ ಹೊರಗಡೆ ಜಗ ತಿಯ ಕಟ್ಟೆಯ ಮೇಲೆ ಯಾರ ಸಂಗವನ್ನೂ ಬಯಸದೆ ಸ್ಥಾಣುವಿನಂತೆ ಚಲಿಸದೆ ಕುಳಿತುಬಿಟ್ಟಿದ್ದನು. ಇತ್ತ ರಾಕ್ಷಸನಿಂದ ನಿಯಮಿತನಾದ ಬ್ರಾಹ್ಮಣನು ದೂರದಿಂದಲೇ ಕ್ಷಪಣಕನನ್ನು ನೋಡಿ ' ಇವನು ಎಲ್ಲಿ ತಿರುಗುವನು ? ಇವನಲ್ಲಿಗೆ ಯಾರು ಬಂದು ಹೋಗುವರು ? ' ಎಂಬು ದನ್ನು ತಿಳಿಯಬೇಕೆಂದು ಯೋಚಿಸಿ ವೇಷಮರೆಯಿಸಿಕೊಂಡು ಅವನ ಕಾರ್ಯಗಳನ್ನು ಒಂದೆರಡು ದಿನಗಳವರೆಗೆ ಗುಟ್ಟಾಗಿ ಎಚ್ಚರಿಕೆಯಿಂದ ಪರಿಶೀಲಿಸಿದನು. ಕ್ಷಪಣಕನಾದರೊ ಆ ಒಂದೆರಡು ದಿನ ಅನ್ನ ನೀರು

ಗಳನ್ನೂ ಬಯಸದೆ ಮರದ ಮೊದ್ದಿನಂತೆ ಕುಳಿತಲ್ಲೇ ಕುಳಿತುಬಿಟ್ಟಿದ್ದನು. ಇದನ್ನು ಕಂಡು ಬ್ರಾಹ್ಮಣನು 'ಎಲ್ಲರಂತೆ ಈತನು ಸಾಮಾನ್ಯನಲ್ಲ. ಆರೂಢ ಯೋಗಿಯಾಗಿರಬೇಕು. ಆದ್ದರಿಂದ ನಾನು ಈತನಲ್ಲಿ ಶಿಷ್ಯಭಾವದಿಂದಿರುತ್ತ ಈತನ ಶೀಲಸ್ವಭಾವಗಳನ್ನು ಪರಿಶೀಲಿಸುವೆನು' ಎಂದು ನಿರ್ಧರಿಸಿ ಬೌದ್ಧಮತದವನಂತೆ ವೇಷಧರಿಸಿ ಕ್ಷಪಣಕನಲ್ಲಿಗೆ ಹೋಗಿ, ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಅವನೆದುರಿಗೆ ಕೈಜೋಡಿಸಿಕೊಂಡು ನಿಂತನು. ಕ್ಷಪಣಕನು ಅವನನ್ನು ನೋಡಿ ತನ್ನ ಪಿಂಛದಿಂದ 'ಕುಳ್ಳಿರು ಏನು ಬಂದೆ?' ಎಂದು ಸನ್ನೆ ಮಾಡಿದನು.

ಕ್ಷಪಣಕನಿಗೆ ಬ್ರಾಹ್ಮಣನು 'ಗುರುವೇ, ಸಂಸಾರಬಾಡಬಾಗ್ನಿಯಿಂದ ಸಂತಪ್ತನಾದ ನಾನು ತಮ್ಮ ಅಡಿದಾವರೆಯನ್ನು ಸೇರಿ ಆ ಸಂತಾಪದಿಂದ ಮುಕ್ತನಾಗಬೇಕೆಂಬ ಅಪೇಕ್ಷೆಯಿಂದ ತಮ್ಮಲ್ಲಿಗೆ ಬಂದೆನು. ನನಗಾಗಿ ಮೌನವನ್ನುಳಿದು ಪರತತ್ತ್ವವನ್ನು ಉಪದೇಶಿಸಿ ನನ್ನನ್ನು ಧನ್ಯನನ್ನಾಗಿ ಮಾಡಬೇಕು' ಎಂದು ಅವನ ಕಾಲುಗಳನ್ನು ಹಿಡಿದುಕೊಂಡನು.

ತನ್ನ ಕಾಲುಗಳನ್ನು ಹಿಡಿದುಕೊಂಡಿದ್ದ ಬ್ರಾಹ್ಮಣನ ಮುಖವನ್ನು ಚೆನ್ನಾಗಿ ನೋಡಿ ಅವನ ಹಣೆಯಲ್ಲಿದ್ದ ತಿಲಕದ ಕಲೆಯನ್ನು ಕಂಡು ಕ್ಷಪಣಕನು ಮನಸ್ಸಿನಲ್ಲೇ 'ಇವನು ಬೌದ್ಧನಲ್ಲ. ಏಕೆಂದರೆ ಬೌದ್ಧರು ಶೂನ್ಯಲಲಾಟರು. ಈತನಿಗೆ ತಿಲಕದ ಕಲೆಯಿರುವುದರಿಂದ ಇವನು ನಿಸ್ಸಂದೇಹವಾಗಿ ಬ್ರಾಹ್ಮಣ. ರಾಕ್ಷಸನಿಂದ ಪ್ರೇರಿತನಾಗಿ ಈ ವೇಷವನ್ನು ಧರಿಸಿ ನಮ್ಮ ಪರೀಕ್ಷೆಗಾಗಿ ಬಂದಿರುವುದೇ ನಿಶ್ಚಯ. ಇರಲಿ, ಇವನಿಗೆ ತಕ್ಕ ಹಾಗೆ ಮಾಡಿ ಕಳುಹಿಸಬೇಕು' ಎಂದು ಯೋಚಿಸಿ ಮೌನವನ್ನು ಬಿಟ್ಟು ಆ ಬ್ರಾಹ್ಮಣನಿಗೆ ಈ ರೀತಿ ನುಡಿದನು—

'ಅಯ್ಯಾ, ನಿನ್ನನ್ನು ನೋಡಿದರೆ ಗುರುಭಕ್ತನಂತೆ ತೋರುತ್ತದೆ. ದಿಗಂಬರ ಸಿದ್ಧಾಂತೋಪದೇಶವನ್ನು ಹೊಂದಲು ನೀನು ಯೋಗ್ಯನಾಗಿರುವೆ. ಆದಿ ಸಂಸ್ಕಾರದಲ್ಲಿ ಯಾವ ಸಂಪ್ರದಾಯದಿಂದ ನಿನಗೆ ವ್ಯಾಹೃತಿಯನ್ನು ಉಪದೇಶಿಸಿದ್ದಾರೆ? ಅದನ್ನು ಹೇಳು' ಎಂದನು.

ಕ್ಷಪಣಕನ ಮಾತು ಬ್ರಾಹ್ಮಣನಿಗೆ ಅರ್ಥವಾಗದೆ ತಬ್ಬಿಬ್ಬಾಗಿ

ಯೋಚಿಸಿ ಏನೋ ಒಂದು ವಿಧವಾಗಿ ಉತ್ತರ ಕೊಟ್ಟನು. ಬ್ರಾಹ್ಮಣನ ವೇಷ, ನಡತೆ ಇವು ಕೃತ್ರಿಮವೆಂದು ನಿಶ್ಚೈಸಿ, ಕ್ಷಪಣಕನು ಅವನ ಮಾತಿಗೆ ಒಪ್ಪಿಕೊಂಡವನಂತೆ ನಟಿಸಿದನು. ಆ ಬಳಿಕ ತನ್ನ ಪಿಂಛದಿಂದ ಅವನ ಶರೀರವನ್ನಭಿಮಂತ್ರಿಸಿದಂತೆ ಮಾಡಿ, ಬ್ರಾಹ್ಮಣನಿಗೆ ಮುಂಡನ ಮಾಡಿಸಿದನು. ಇದಾದಮೇಲೆ ಅವನ ಬಟ್ಟೆಬರೆಗಳೆಲ್ಲವನ್ನೂ ದಾರಿ ಯಲ್ಲಿ ಹೋಗುತ್ತಿರುವವರಿಗೆ ಕೊಡಿಸಿ ಮತ್ತೊಂದು ನವಿಲುಗರಿಯ ದೊಂದೆಯನ್ನು ಅವನ ಕೈಯಲ್ಲಿ ಕೊಟ್ಟು 'ಈ ಕಪ್ಪರವನ್ನು ತೆಗೆದು ಕೊಂಡು ಮನಸ್ಸು ಹದಕ್ಕೆ ಬರುವವರೆಗೆ ಆಯಾ ಚಿತವೃತ್ತಿಯಿಂದ ಜೀವಿಸು. ಚೈತ್ಯವಂದನಾದಿಗಳನ್ನು ಮಾಡುತ್ತ ಗುರುಭಕ್ತಿನಿರತನಾಗಿದ್ದರೆ ನಿನ್ನ ಮನಸ್ಸು ಹದಕ್ಕೆ ಬಂದುದನ್ನರಿತು ನಿನಗೆ ಪರತತ್ತ್ವೋಪದೇಶ ವನ್ನು ಮಾಡುವೆವು. ನಮ್ಮ ಪೀಠಕ್ಕೆ ಮುಂದೆ ನೀನೇ ಅಧಿಕಾರಿ. ಬೆಳಿಗ್ಗೆ ನಮಗೆ ಹನ್ನೆರಡು ನಮಸ್ಕಾರಮಾಡಿ, ನೂರೆಂಟು ಬಾರಿ ಚೈತ್ಯ ವಂದ ನೆಯನ್ನು ಮಾಡು. ಆ ಮೇಲೆ ಭಿಕ್ಷೆ ಬೇಡಿ ಬಾ. ಇದೇ ರೀತಿಯಲ್ಲಿ ಸಾಯಂಕಾಲದಲ್ಲಿಯೂ ಆಚರಿಸು' ಎಂದು ಹೇಳಿ ಮತ್ತೆ ಮೌನವನ್ನು ಧರಿಸಿದನು.

ತನಗುಂಟಾದ ದುರ್ದೆಶೆಯನ್ನು ನೆನೆದು ಬ್ರಾಹ್ಮಣನಿಗೆ ಬಲು ಸಂಕಟವುಂಟಾಯಿತು. ಆದರೆ ಕ್ಷಪಣಕನು ಹೇಳಿದಂತೆ ಮಾಡದಿದ್ದರೆ ವಿಧಿಯಿಲ್ಲವೆಂದುಕೊಂಡು, ಅವನಿಗೆ ಹನ್ನೆರಡು ನಮಸ್ಕಾರ, ಜಗತಿಯ ಕಟ್ಟೆಗೆ ನೂರೆಂಟು ನಮಸ್ಕಾರ ಹಾಕುವಷ್ಟರಲ್ಲೇ ಆಯಾಸದಿಂದ ಬಳಲಿ ಬೆಂಡಾಗಿ ಬಾಯಾರಿ ಬ್ರಾಹ್ಮಣನ ಕೈಕಾಲುಗಳು ಸೋತು ಹೋದುವು. ಆ ಬಳಿಕ ಕಪ್ಪರ ಪಿಂಛಗಳನ್ನು ಹಿಡಿದು, ಗುರುವಿಗೆ ಅಭಿವಂದಿಸಿ ಭಿಕ್ಷೆ ಬೇಡಲು ಆತನ ಅಪ್ಪಣೆಯನ್ನು ಬೇಡಿ ಹೊರಟನು. ಬೆತ್ತಲೆ ಯಾಗಿದ್ದ ಕಾರಣ ಊರಕಡೆ ಹೊರಡಲು ಬ್ರಾಹ್ಮಣನಿಗೆ ನಾಚಿಕೆಯುಂ ಟಾಗಿ ಅಲ್ಲಿಯೇ ಕಪ್ಪರ ಪಿಂಛಗಳನ್ನು ಎಸೆದು ಸಂಜೆಯವರೆಗೆ ಕಾಡಿ ನಲ್ಲಿ ಮರೆಯಾಗಿದ್ದು, ಕತ್ತಲಾಗುತ್ತಲೇ ವಲ್ಕಲಕೌಪೀನವನ್ನು ಧರಿಸಿ ತನ್ನ ಮನೆಯನ್ನು ಸೇರಿಕೊಂಡನು.

ನಡೆದ ವಿಷಯವನ್ನು ರಾಕ್ಷಸನಿಗೆ ತಿಳಿಸಲು ಬ್ರಾಹ್ಮಣನಿಗೆ ನಾಚಿಕೆಯಾಯಿತು. ಮಾರನೆಯ ದಿನ ರಾಕ್ಷಸನನ್ನು ಉಚಿತವೇಷ

ದಲ್ಲಿ ಕಂಡು ‘ ಸ್ವಾಮಿ, ತಾವು ಅಪ್ಪಣೆಕೊಡಿಸಿದಂತೆ ಕ್ಷಪಣಕನನ್ನು ಪ್ರತ್ಯಕ್ಷ ಪರೋಕ್ಷಗಳಲ್ಲಿ ನಾನಾ ವಿಧವಾಗಿ ಪರೀಕ್ಷಿಸಿದೆನು. ಅವನಲ್ಲಿ ಲೇಸವಾದರೂ ಕಪಟಕಾಣಿಸಲಿಲ್ಲ. ಆತನು ಸರ್ವಸಂಗಪರಿತ್ಯಾಗ ಮಾಡಿದ ಮಹಾಯೋಗಿಯೇ ಸರಿ ’ ಎಂದು ಬಿನ್ನೈಸಿದನು.

ಇದನ್ನು ಕೇಳಿ ರಾಕ್ಷಸನು ಕ್ಷಪಣಕನಲ್ಲಿಯೂ ಕಪಟವಿಲ್ಲದ ಬಳಿಕ ಪರ್ವತರಾಜನು ನಮ್ಮ ಲೇಖನದಿಂದ ಇಬ್ಬರು ವರ್ತಕರು ನಮಗೆ ಅನುಕೂಲರಾದವರೆಂದು ನಿಶ್ಚೈಸಿ, ಉಳಿದ ರಾಜರ ಬಳಿಯಲ್ಲಿ ರುವ ವರ್ತಕರೂ ಇಂಥವರೇ ಆಗಿರಬೇಕೆಂಬ ಊಹೆಯಿಂದ ಆ ಆರು ಮಂದಿಯನ್ನೂ ದಂಡಿನಿಂದ ಹೊರಡಿಸಿರಬೇಕು ’ ಎಂದು ನಿರ್ಧರಿಸಿ ಕ್ಷಪಣಕನಲ್ಲಿ ಸಂಶಯವನ್ನು ಬಿಟ್ಟು ಬೇರೆ ಕೆಲಸಗಳನ್ನು ನೋಡ ತೊಡಗಿದನು.

## ೧೪. ಪುಣ್ಯಾಶ್ರಮ ದರ್ಶನ

ವೈರಿಗಳು ಪಾಟಲೀಪುರಕ್ಕೆ ಹತ್ತಿರವಾಗುತ್ತಿರುವರೆಂಬ ಸುದ್ದಿ ಕೇಳಿ ಸರ್ವಾರ್ಥಸಿದ್ಧಿ ಮಹಾರಾಜನಿಗೆ ಚಿಂತೆಗೆ ಮೊದಲಾಯಿತು. ತನ್ನ ಪ್ರೀತಿಯ ಮಕ್ಕಳು ಮತ್ತು ಮೊಮ್ಮಗ—ಇವರು ಒಬ್ಬರೊಡನೊಬ್ಬರು ನೆಲಕ್ಕಾಗಿ ಹೋರಾಡಲು ಸಿದ್ಧವಾಗಿರುವುದನ್ನು ಕೇಳಿ ಮುದುಕನು ಕುಗ್ಗಿ ಹೋದನು. ಇಬ್ಬರಲ್ಲಿ ಯಾರೊಬ್ಬರು ಸೋತರೂ ನಷ್ಟವೇ. ತಾನು ಬದುಕಿರುವಾಗಲೇ ನಡೆಯುವ ಕುಲದ ಕೊಲೆಯನ್ನು ತಪ್ಪಿಸ ಬೇಕೆಂದು ಯೋಚಿಸಿ, ಅಮಾತ್ಯರಾಕ್ಷಸನೊಡಗೂಡಿ ನಂದರ ಬಳಿಗೆ ಬಂದು ಅವರಿಗೆ ಈ ರೀತಿ ಹೇಳಿದನು—

‘ ಮಕ್ಕಳಿರಾ, ಪರ್ವತರಾಜನು ಈಗ ಅನೇಕ ದೇಶಗಳ ಅರಸು ಗಳನ್ನು ಕೂಡಿಕೊಂಡು ನಮ್ಮ ಮೇಲೆ ದಂಡೆತ್ತಿ ಬರುತ್ತಿದ್ದಾನೆ. ನೀವು ಶೂರರು, ನಿಜ. ಆದರೆ ವೈರಿ ಪ್ರಬಲನಾದಾಗ ಆತನೊಡನೆ ಸಮಯೋ ಚಿತವಾಗಿ ಸಂಧಿಮಾಡಿಕೊಳ್ಳುವುದೇ ಮೇಲು. ಸ್ವಲ್ಪ ಕಾಲವಾದ ಮೇಲೆ ಪರ್ವತರಾಜನಿಗೂ ಇತರರಿಗೂ ಭೇದವನ್ನುಂಟುಮಾಡಿ ಆ ಬಳಿಕ ಅವನನ್ನು ಗೆಲ್ಲಬಹುದು. ಇದು ನಮಗೆ ಅವಮಾನವಲ್ಲ. ನಾವು ಅಗತ್ಯವಾಗಿ ಮಾಡಬೇಕಾದ ರಾಜಕಾರ್ಯ. ನಾನು ಮುದುಕ

ನಾದೆ. ಈ ನನ್ನ ಮಾತು ಅಮಾತ್ಯರಿಗೆ ರುಚಿಸಿದರೆ ಅದರಂತೆ ಕೆಲಸ ಮಾಡಿ.'

ರಾಜನ ಮಾತಿಗೆ ಅಮಾತ್ಯರಾಕ್ಷಸನು ' ಸ್ವಾಮಿ, ತಾವು ಅಪ್ಪಣೆ ಕೊಡಿಸಿದ ಮಾತು ಯುಕ್ತವಾದದ್ದು. ಆದರೂ ನನಗೆ ತೋರಿದ ಒಂದೆರಡು ಅಂಶಗಳನ್ನು ತಮ್ಮಲ್ಲಿ ಬಿನ್ನೈಸುವೆನು. ಪರ್ವತರಾಯನು ದಂಡೆತ್ತಿ ಬಂದ ಮಾತ್ರಕ್ಕೆ ನಾವು ಸಂಧಿಯ ಮಾತನ್ನೆತ್ತಬಾರದು. ಏಕೆಂದರೆ ಅವನು ನಮ್ಮನ್ನು ಬಲಹೀನರೆಂದು ತಿಳಿದು ನಮ್ಮ ರಾಜ್ಯ ಕೋಶಗಳನ್ನು ಬಯಸಬಹುದು. ಬಲದಲ್ಲಿ ನಾವೇನು ಕಡಮೆಯೋ ? ಮೇಲಾಗಿ ಪರ್ವತರಾಜನಿಗೆ ಇದು ಪರದೇಶ. ಇಲ್ಲಿ ನಮಗಿರುವ ಅನು ಕೂಲ ಆತನಿಗಿರಲಾರದು. ಆದ್ದರಿಂದ ಮೊದಲು ವೈರಿಗಳ ಮೇಲೆ ನಮ್ಮ ಪರಾಕ್ರಮವನ್ನು ಮೆರೆಯೋಣ. ಆಮೇಲೆ ಮುಂದಿನ ಮಾತು ' ಎಂದು ನುಡಿದನು. ರಾಕ್ಷಸನ ಮಾತು ರಾಜಕುಮಾರರಿಗೆ ಒಪ್ಪಿತು. ಅರಸನು ದೇವರು ಮಾಡಿಸಿದಂತಾಗಲೆಂದು ಸುಮ್ಮನಾದನು. ವಿಜಯ ಯಾತ್ರೆಗೆ ಎಲ್ಲವೂ ಅಣಿಯಾಯಿತು.

ಇತ್ತ ಪರ್ವತೇಶ್ವರನು ಶಬರವರ್ಮನೊಡನೆ ಆಲೋಚಿಸಿ ತನ್ನ ಸೇನೆ ನಾಲ್ಕು ದಿಕ್ಕುಗಳಿಂದಲೂ ಪಾಟಲೀಪುರವನ್ನು ಮುತ್ತುವಂತೆ ಅಪ್ಪಣೆ ಮಾಡಿದನು.

ವಿಜಯಯಾತ್ರೆಗೆ ಹೊರಡುವುದಕ್ಕೆ ಮುಂಚೆ ರಾಕ್ಷಸನು ಕ್ಷಪಣಕ ನನ್ನು ಕಂಡು ' ಕ್ಷಪಣಕರೇ, ನಾಳೆ ತುಲಾಲಗ್ನದಲ್ಲಿ ನಂದರು ವಿಜಯ ಯಾತ್ರೆಗೆ ಹೊರಡಲು ಗೊತ್ತಾಗಿದೆ. ಲಗ್ನಬಲ ಹೇಗಿದೆ ? ತಿಳಿದು ಹೇಳಿ' ಎಂದನು. ಜೀವಸಿದ್ಧಿ ' ಅಮಾತ್ಯರೇ, ತುಲಾಲಗ್ನಕ್ಕಿಂತ ವೃಶ್ಚಿಕ ಲಗ್ನ ಉತ್ತಮ. ಲಗ್ನಾಧಿಪತಿ ಶತ್ರುಸ್ಥಾನವನ್ನು ನೋಡುವುದ ರಿಂದ, ಶತ್ರು ಕ್ಷಯವಾಗುತ್ತದೆ.' ಎಂದು ಗುಣಿಸಿ ಹೇಳಿದನು. ಕ್ಷಪಣಕನ ಮಾತನ್ನು ಕೇಳಿ ಹತ್ತಿರದಲ್ಲಿದ್ದ ಸಿದ್ಧಾರ್ಥಕನು ಶತ್ರುವಿನ ದೆಸೆಯಿಂದ ಕ್ಷಯ ಎಂದು ಮನಸ್ಸಿನಲ್ಲೆಂದುಕೊಂಡನು. ವೃಶ್ಚಿಕಲಗ್ನದಲ್ಲಿ ವಿಜಯ ಯಾತ್ರೆಗೆ ತೆರಳಬೇಕೆಂದು ರಾಕ್ಷಸನ ಅಪ್ಪಣೆಯಾಯಿತು.

ಇತ್ತ ರಾಜಕುಮಾರರು ತಮ್ಮ ಪತ್ನಿಯರನ್ನೊಪ್ಪಿಸಿ, ತಂದೆತಾಯಿ ಗಳ ಹರಕೆಯನ್ನು ಪಡೆದು, ಬ್ರಾಹ್ಮಣರಿಗೆ ನಮಸ್ಕರಿಸಿ ವಾದ್ಯಗಳು ಮೊರೆ

ಯುತ್ತಿರಲು ವಿಜಯಯಾತ್ರೆಗೆ ಪ್ರಯಾಣ ಹೊರಟರು. ಆಗ ಅವರ ಎಡಗಣ್ಣು ಅದುರಿದುವು. ಹದ್ದುಗಳು ಅವರ ರಥಗಳ ಮೇಲೆ ಕುಳಿತುವು. ಈ ಅಪಶಕುನಗಳನ್ನು ಕಂಡು ಮುಂದೇನಾಗುವುದೋ ಎಂದು ಜನ ಹೆದರಿದರು. ಆ ಸಮಯದಲ್ಲಿ ಶಿವವರ್ಮನಿಂದ ದುರ್ಗರಕ್ಷಿತವಾಗಿ, ಅಂದಿನ ಯುದ್ಧದಲ್ಲಿ ನಂದರಿಗೆ ಜಯವಾಯಿತೆಂಬ ಶುಭಸಮಾಚಾರ ದೂತರಿಂದ ತಿಳಿದು ಬಂತು. ರಾಕ್ಷಸನು ನಂದರಿಗೆ ಧೈರ್ಯ ಹೇಳಿ, ನಗರ ರಕ್ಷಣೆಗೆ ಭಾಗುರಾಯಣನು ಮಾಡಿದ ಏರ್ಪಾಟನ್ನು ನೋಡಿ ಬರಲು ತಾನೇ ಹೊರಟನು. ಇತ್ತ ನಂದರು ಸೇನಾಸಮೇತರಾಗಿ ತಮ್ಮ ಬೀಡಾರದ ಬಳಿಗೆ ಬರುತ್ತಿರಲು, ಗಂಗಾಸರಯೂಸಂಗಮದ ದಕ್ಷಿಣದಲ್ಲಿ ಉನ್ನತವಾಗಿದ್ದ ಜಪಶಾಲೆಯನ್ನು ಕಂಡು ಇದೇನೆಂದು ದೂತರನ್ನು ಕೇಳಿದರು.

‘ ಸ್ವಾಮಿ, ಇದು ಅಮಾತ್ಯರ ಅಪ್ಪಣೆಯಂತೆ ಮಾಡಿರುವ ಶತ್ರುಪಲಾಯನ ಜಪಶಾಲೆ. ಇಲ್ಲಿ ಜಪಮಾಡುವ ಬ್ರಾಹ್ಮಣರು ಫಲ ಮಂತ್ರಾಕ್ಷತೆಗಳನ್ನು ಹಿಡಿದುಕೊಂಡು ತಮ್ಮನ್ನು ಕಾಣಲು ಬಂದು ನಿಂತಿದ್ದಾರೆ ’ ಎಂದು ದೂತರಿಂದ ಉತ್ತರ ಬಂತು.

ನಂದರು ಆ ಬ್ರಾಹ್ಮಣರನ್ನು ನೋಡಿ ‘ ಬ್ರಾಹ್ಮಣೋತ್ತಮರೇ, ಜಪ ಹೋಮಗಳನ್ನು ಸಾಂಗವಾಗಿ ಮಾಡಿ. ಈಗ ನಮ್ಮ ಮೇಲೆ ದಂಡೆತ್ತಿಬಂದಿರುವ ವೈರಿಗಳು ಪಲಾಯನಮಾಡಿದರೆ ನಿಮಗೆ ವಿಶೇಷವಾದ ಮರ್ಯಾದೆಯನ್ನು ಸಲ್ಲಿಸುತ್ತೇವೆ ’ ಎಂದು ಹೇಳಿದರು. ಅಷ್ಟರಲ್ಲೇ ಜೋಲುಗಡ್ಡದ ಜಟಾಧಾರಿಯಾದ ಮಾಸೋಪವಾಸಿಮುನಿ ನಂದರಿಗೆ ಕಾಣಿಸಿಕೊಂಡನು. ಮುನಿರೂಪವನ್ನು ಧರಿಸಿದ ಮಾರೀಚನಂತಿತ್ತು ಅವನ ಯೋಗಿ ವೇಷ! ಈ ಯೋಗಿಯನ್ನು ನೋಡಿ ನಂದರು ಅವನ ಶಿಷ್ಯರನ್ನು ಕುರಿತು ‘ ಇವರಾರು ? ’ ಎಂದು ಪ್ರಶ್ನಿಸಿದರು.

ಆದಕ್ಕೆ ಆತನ ಶಿಷ್ಯರು ‘ ಅರಸರೇ, ದತ್ತಾತ್ರೇಯ ಮುನಿಗಳ ಅನುಗ್ರಹವನ್ನು ಪಡೆದ ಮಾಸೋಪವಾಸಿ ಮುನಿಗಳಿವರು. ಧರ್ಮಾತ್ಮರಾದ ನಂದರಿಗೆ ಬಂದಿರುವ ವಿಪತ್ತನ್ನು ದೂರಮಾಡಲು ಇಲ್ಲಿ ಜಪವನ್ನು ಕೈಗೊಂಡಿದ್ದಾರೆ. ಮಹಾಮಹಿಮರಿವರು ’ ಎಂದರು.

ಶಿಷ್ಯರ ಮಾತಿನಲ್ಲಿ ನಂದರಿಗೆ ವಿಶ್ವಾಸವುಂಟಾಯಿತು. ಹಿಂದೆ

ಸರ್ವಾರ್ಥಸಿದ್ಧಿ ಮಹಾರಾಜನು ಪುತ್ರವಂತನಾದುದು ಮುನಿಯ ವರದ ಬಲದಿಂದ. ಈಗ ಈ ಮಹನೀಯರು ನಂದರಲ್ಲಿ ಅನುಗ್ರಹವಿಟ್ಟು ಜಪವನ್ನು ಕೈಕೊಂಡ ಬಳಿಕ ವೈರಿಪಲಾಯನವಾಗುವುದರಲ್ಲಿ ಏನು ಸೋಜಿಗ?

'ಮುನಿಗಳಿಗೆ ಮೌನವ್ರತವೇನೋ?' ಎಂದರು ರಾಜಕುಮಾರರು.

'ಅಯ್ಯಾ, ಅರಸುಗಳೇ! ಸಾಧಾರಣ ಜನರಲ್ಲಿ ಮಾತಿಗೆ ಮಾತು ಬೆಳೆಸುವುದನ್ನು ತಡೆಗಟ್ಟುವುದಕ್ಕಾಗಿ ಮೌನ. ಅರಸುಗಳಲ್ಲಿಯೂ, ಭಕ್ತರಲ್ಲಿಯೂ ಮೌನವುಂಟೇ? ನಾಳೆ ಶುಕ್ರವಾರ ಸಂಜೆಗೆ ಸರಿಯಾಗಿ ಶೂಲಿನೀಜಪ ಹೋಮಗಳು ಮುಗಿಯುವುವು. ಪೂರ್ಣಾಹುತಿಯ ಕಾಲದಲ್ಲಿ ದಿಕ್ಕುಗಳು ಪ್ರಸನ್ನವಾಗಿ, ತಂಗಾಳಿ ಬೀಸಿ ಶತ್ರುನಿಗ್ರಹ ಸೂಚನೆ ಕಂಡುಬರುವುದು. ಹೋಮದ ಕೊನೆಯಲ್ಲಿ ಜ್ಯೋತಿಯೊಂದು ಬೆಳಗುವುದು. ಬಳಿಕ ಅಗ್ನಿಕುಂಡದಿಂದ ದೇವತಾಹಸ್ತ ಕಾಣಿಸಿಕೊಂಡು ಆ ಪೂರ್ಣಾಹುತಿಯನ್ನು ತಾನೇ ಸ್ವೀಕರಿಸುವುದು. ಪುಣ್ಯವಂತರಿಗೆ ಮಾತ್ರ ಈ ನೋಟ ಕಾಣಿಸುವುದು.'

'ಮುನಿವೋತ್ತಮರೇ, ಈ ನೋಟವನ್ನು ನೋಡಲು ನಾವೂ ಬರಬಹುದೋ?' ಎಂದರು ನಂದರು ವಿನಯ ವಿಶ್ವಾಸಗಳಿಂದ.

'ಅರಸುಗಳಿರಾ, ಕುತೂಹಲವಿದ್ದರೆ ಬಂಧುಮಿತ್ರರೊಡನೆ ಅವಶ್ಯವಾಗಿ ತಾವೆಲ್ಲರೂ ಬಂದು ದೇವತಾಹಸ್ತವನ್ನು ನೋಡಿ ಪ್ರಸಾದವನ್ನು ಸ್ವೀಕರಿಸಿ ತೆರಳಬಹುದು. ಈ ನೋಟ ಮರೆಯಾದ ಒಂದು ಯಾಮದೊಳಗೆ ಹೊಟ್ಟೆನೋವಿನಿಂದ ವೈರಿಗಳು ಹತರಾಗುವುದು ಸತ್ಯ. ನಿಮ್ಮ ಬಯಕೆ ಕೈಗೂಡಿದಾಗ ಬ್ರಾಹ್ಮಣರಲ್ಲಿ ನಿಮಗೆ ಗೌರವ ಚಲಿಸದಿದ್ದರೆ ಅದೇ ನೀವು ನಮಗೆ ಕೊಡುವ ಜಪದಕ್ಷಿಣೆ.'

ಮಾಸೋಪವಾಸಿಯ ಮಾತು ಮುಗಿದ ಮೇಲೆ ನಂದರು 'ಅಯ್ಯಾ ಶಿಷ್ಯೋತ್ತಮರೇ, ಪೂರ್ಣಾಹುತಿಯ ಸಮಯವನ್ನು ತಿಳಿದು ನಮಗೆ ನೆನಪುಗೊಟ್ಟರೆ ನಾವೆಲ್ಲರೂ ದೇವತಾದರ್ಶನಕ್ಕೆ ಬರುತ್ತೇವೆ' ಎಂದರು.

ಅದಕ್ಕೆ ಶಿಷ್ಯರು 'ಹಾಗೆ ಆಗಲಿ. ಆದರೆ ಜಪಶಾಲೆಯ ಸುತ್ತಲೂ ಶೂದ್ರಾದಿಗಳು ಬರದಂತೆ ಅಪ್ಪಣೆಯಾಗಬೇಕು' ಎಂದು ಅರಸರನ್ನು ಕೇಳಿಕೊಂಡರು.

ಆ ಮಾತಿಗೆ ನಂದರು ತಮ್ಮ ಒಪ್ಪಿಗೆಯನ್ನು ಸೂಚಿಸಿ, ಜಪಶಾಲೆಯ ಸುತ್ತಲೂ ಬ್ರಾಹ್ಮಣ ಹರಿಕಾರರಿರುವಂತೆ ನೇಮಿಸಿ, ದೇವತಾ ದರ್ಶನಕ್ಕೆ ಖಂಡಿತ ಬರಲೇಬೇಕೆಂದು ತಮ್ಮಲ್ಲೇ ಮಾತನಾಡಿಕೊಳ್ಳುತ್ತ ಸಂತೋಷದಿಂದ ತಮ್ಮ ಬೀಡಾರಗಳನ್ನು ಹೊಕ್ಕರು.

## ೧೫. ಸಂಧಾನ

ಎರಡು ಕಡೆಯವರೂ ಯುದ್ಧಕ್ಕೆ ಸಿದ್ಧರಾದರು. ಗಂಗಾಸರಯೂ ಸಂಗಮದ ಉತ್ತರಭಾಗದಲ್ಲಿ ನಂದರ ಬೀಡಾರಗಳು ಕಂಗೊಳಿಸಿದುವು. ನಂದರು ಜಪಶಾಲೆಗೆ ಬರುವಂತೆ ಮಾಸೋಪವಾಸಿ ಗೊತ್ತುಪಡಿಸಿದ್ದ ವೇಳೆಯನ್ನು ಕ್ಷಪಣಕನು ವೇಗಶರ್ಮನ ಮೂಲಕ ಚಾಣಕ್ಯನಿಗೆ ತಿಳಿಸಿದನು. ಈ ಸುದ್ದಿಯನ್ನರಿತ ಸಿದ್ಧಾರ್ಥಕನು ಮಾರನೆಯದಿನ ನಂದರಿಗೂ ಪರ್ವತರಾಜನಿಗೂ ಯುದ್ಧವಾಗಬಹುದೆಂದು ನಿರ್ಧರಿಸಿದನು. ಭಾರತ ಯುದ್ಧ ಮೊದಲಾಗುವುದಕ್ಕಿಂತ ಮುಂಚೆ ಧರ್ಮರಾಯನು ತನ್ನೆದುರು ಪಕ್ಷದ ಕೌರವರಲ್ಲಿ ಭೇದವನ್ನೆಸಗಿದಂತೆ, ಭಾಗುರಾಯಣಾದಿ ಸೇನಾಪತಿಗಳಿಗೆ ನಂದರಲ್ಲಿ ಉಪೇಕ್ಷೆ ಹುಟ್ಟುವಂತೆ ಮಾಡಬೇಕೆಂದು ಈ ಕಪಟವೈದ್ಯನು ಮನಸ್ಸಿನಲ್ಲೇ ಗೊತ್ತುಮಾಡಿಕೊಂಡನು. ಸಿದ್ಧಾರ್ಥಕನ ಬುದ್ಧಿ ಪಾದರಸ. ವಿಷಯ ಅವನ ಮನಸ್ಸಿಗೆ ಹೊಳೆಯುವುದೇ ತಡ, ಮಿಂಚಿನಂತೆ ಅವನಿಂದ ಕಾರ್ಯ ನಡೆದು ಹೋಗುವುದು. ರಾಕ್ಷಸನ ಮನೆಯ ರಾಯಸದವನಾದ ಶಕಟದಾಸ, ಅಮಾತ್ಯರ ವ್ಯೈಗಾವಲಿನವನಾದ ವಿನತ—ಇವರಿಂದ ರಾಜಕಾರ್ಯದ ಗುಟ್ಟನ್ನು ತಿಳಿದುಕೊಂಡು, ಅಲ್ಲಿಂದ ಸಿದ್ಧಾರ್ಥಕನು ಭಾಗುರಾಯಣನಲ್ಲಿಗೆ ಬಂದು ಅವನಿಗೆ ಈರೀತಿ ಹೇಳಿದನು.–

'ಸೇನಾಪತಿಯೇ, ನಾನು ನಿನ್ನ ಸ್ನೇಹಿತನಾದ ಕಾರಣ ನಿನ್ನಲ್ಲಿ ನನಗಿರುವ ಪ್ರೀತಿಯಿಂದ ನಿನಗೊಂದು ಗುಟ್ಟಾದ ರಾಜಕಾರ್ಯವನ್ನು ತಿಳಿಸುವೆನು. ಚಂದ್ರಗುಪ್ತನಿಗಾದರೋ ನಿನ್ನಲ್ಲಿ ಅತಿಶಯವಾದ ಪ್ರೀತಿಯುಂಟು. ನಿನಗೂ ಅವನಲ್ಲಿ ಪ್ರೀತಿಯುಂಟೆಂದೇ ತೋರುತ್ತದೆ. ನಿಮ್ಮ ಲೇಖನದ ನಂಬಿಕೆ, ಚಾಣಕ್ಯನ ಮಾತಿನ ಜಾಣ್ಮೆ ಇವು ಚಂದ್ರಗುಪ್ತನಿಗೆ ಪರ್ವತರಾಜನ ಸಹಾಯ ದೊರಕುವಂತೆ ಮಾಡಿದುವು.

ನಂದರಿಗೆ ರಾಕ್ಷಸನು ಆಪ್ತನಾಗಿರುವಂತೆ ನನಗೆ ಭಾಗುರಾಯಣನೇ ಆಪ್ತನೆಂದು ಚಂದ್ರಗುಪ್ತನು ಪರೋಕ್ಷದಲ್ಲಿ ಹೇಳಿಕೊಳ್ಳುತ್ತಿದ್ದಾನೆ. ಚಂದ್ರಗುಪ್ತನಿಗೆ ಜಯವಾಗುವುದರಲ್ಲಿ ಸಂದೇಹವೇ ಇಲ್ಲ. ರಾಕ್ಷಸನ ತಂತ್ರ ನಷ್ಟವಾದುದೇ ಇದಕ್ಕೆ ಸಾಕ್ಷಿ. ಅಧಿಕವಾದ ಪರ್ವತೇಶ್ವರನ ಸೇನೆ, ಚಾಣಕ್ಯನ ಕಪಟೋಪಾಯ ಇವುಗಳಿಂದ ನಂದರಿಗೆ ಜಯ ವಾಗುವುದೆಂದರೇನು? ಚಂದ್ರಗುಪ್ತನ ವೈರಿಗಳನ್ನು ಸಂಹರಿಸಿ, ಅವ ನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ತನಗೆ ಬೇಕಾದವರಿಗೆ ಮಂತ್ರಿಪದವಿ ಯನ್ನು ಕೊಟ್ಟು ಚಾಣಕ್ಯನು ತಪೋವನಕ್ಕೆ ತೆರಳುವನು. ಆದ್ದರಿಂದ ಈ ವೇಳೆಯಲ್ಲಿ ಚಂದ್ರಗುಪ್ತನಿಗೆ ನಿನ್ನಲ್ಲಿರುವ ವಿಶ್ವಾಸವನ್ನು ದೃಢ ಪಡಿಸಿಕೊ. ನನ್ನ ಮಾತೇ ಚಂದ್ರಗುಪ್ತನ ಮಾತೆಂದು ತಿಳಿದು, ಅವನಿಗೆ ಸಹಾಯಮಾಡು. ಹತ್ತುಪಾಲು ನಂದರ ಸೇನೆಯನ್ನು ಚಾಣಕ್ಯನೊಬ್ಬನೇ ಎದುರಿಸಬಲ್ಲ. ಈ ನನ್ನ ಮಾತಿಗೆ ಈ ರಾತ್ರಿ ಇಲ್ಲಿಗೆ ಸಮೀಪದಲ್ಲಿ ಯುದ್ಧವಾಗುವುದೇ ನಿದರ್ಶನ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಆಪ್ತನಾದವನು ಇಂಥ ಸಮಯದಲ್ಲಿ ಮಾಡ ಬೇಕಾದ ಕೆಲಸವನ್ನು ನಾನು ಮಾಡಿದ್ದೇನೆ. ನಿನಗೆ ಮಂಗಳವಾಗಲಿ.'

ವೈದ್ಯನಂತಿದ್ದ ಸಿದ್ಧಾರ್ಥಕನು ಚಂದ್ರಗುಪ್ತನಿಗೆ ಆಪ್ತನಾಗಿರ ಬಹುದಲ್ಲವೇ? ಹಾಗಲ್ಲದಿದ್ದರೆ ಈ ದೊಡ್ಡ ಗುಟ್ಟನ್ನು ಇವನು ನನ್ನಲ್ಲಿ ಏಕೆ ಹೇಳುತ್ತಿದ್ದ? ಆದ್ದರಿಂದ ನನ್ನ ಹಿತೈಷಿ ಸಿದ್ಧಾರ್ಥಕ ಎಂದು ಭಾಗುರಾಯಣನು ನಿರ್ಧರಿಸಿ, ಅವನಿಗೆ 'ಸಿದ್ಧಾರ್ಥಕ, ರಾಕ್ಷಸನಂತೆ ನಾವು ಚಂದ್ರಗುಪ್ತನಿಗೆ ದ್ರೋಹಿಗಳಲ್ಲ. ನಾವು ಮಾಡುವ ಸಹಾಯ ಮುಂದೆ ಆತನಿಗೇ ತಿಳಿದುಬರುವುದು. ಆದರೆ ಲೋಕಾಪವಾದಕ್ಕೆ ಹೆದರಿ, ನಾವು ಅವನಿಗೆ ಗುಟ್ಟಾಗಿಯೇ ಸಹಾಯಮಾಡಬೇಕು. ರಾಜ ಧಾನಿಯನ್ನು ಅವನು ಬಿಡುವುದಕ್ಕಿಂತ ಮುಂಚೆ ನಾವು ಬರೆದುಕೊಟ್ಟ ಲೇಖನ ಅವನಿಗೆ ಉಪಯೋಗವಾಗಿರಬಹುದು. ನಾನು ಹೇಳಿರುವ ವಿಷಯ ನಿನ್ನಲ್ಲಿಯೇ ಗುಟ್ಟಾಗಿರಲಿ. ನೀನು ಹೋಗಿ ಬಾ' ಎಂದು ಅವನನ್ನು ಕಳುಹಿಸಿಕೊಟ್ಟನು.

ಸಿದ್ಧಾರ್ಥಕನು ಹೊರಟುಹೋದ ಮೇಲೆ ಭಾಗುರಾಯಣನು ಮನಸ್ಸಿನಲ್ಲಿ ಏನನ್ನು ನೆನೆದನೋ 'ಉರಿಯುವನೆ ಬಲ್ಲ'. ಅಧಿಕಾರದ

ಆಸೆ ಅವನನ್ನು ಸ್ವಾಮಿದ್ರೋಹಿಯನ್ನಾಗಿ ಮಾಡಿರಬೇಕು. ತನ್ನ ಆಪ್ತದೂತನನ್ನು ಕರೆದು ಅವನಿಗೆ 'ಭದ್ರಭಟಾದಿ ಸೇನಾಪತಿಗಳಿಗೆ ನಾನು ಈ ರೀತಿ ಹೇಳಿದೆನೆಂದು ಕಿವಿಯಲ್ಲಿ ಗುಟ್ಟಾಗಿ ತಿಳಿಸು. ಈಗ ಮೊದಲಾಗುವ ಯುದ್ಧದಲ್ಲಿ ಸಾಮಂತರಾಜರೇ ಮುಂದೆ ನಿಂತು ಕಾದಾಡಲಿ. ನೀವು ಮಾತ್ರ ತೋರಿಕೆಯ ಯುದ್ಧ ಮಾಡುತ್ತ, ಕಾಲ ಹರಣಮಾಡಿ ವೈರಿಗಳನ್ನು ತಡೆಯದೆ ಬಿಡತಕ್ಕದ್ದು. ಇದರ ವಿವರ ವನ್ನು ಮುಂದೆ ತಿಳಿಸಲಾಗುವುದು' ಎಂದು ಹೇಳಿ ಕಳುಹಿಸಿದನು. ಭಾಗುರಾಯಣನ ಮಾತನ್ನು ಹಿತವಚನವೆಂದು ನಂಬಿ ಭದ್ರಭಟಾದಿಗಳು ಅದರಂತೆ ನಡೆದುಕೊಂಡರು.

ವೈರಿಸೇನಾಪತಿಗಳು ಯುದ್ಧಮಾಡದೆ ಸುಮ್ಮನಿರುವುದನ್ನು ದೂತ ರಿಂದ ತಿಳಿದ ಪರ್ವತರಾಜನು, ನಾವೆಗಳನ್ನು ಹತ್ತಿ ಅದೇ ರಾತ್ರಿ ಪಾಟಲೀಪುರವನ್ನು ಮುತ್ತಬೇಕೆಂದು ತನ್ನ ಸಾಮಂತರಿಗೆ ಅಪ್ಪಣೆ ಮಾಡಿದನು. ಅವರು ಅದರಂತೆ ರಾಜಧಾನಿಯನ್ನು ಮುತ್ತಲು ಅಣಿ ಯಾದರು.

ಇತ್ತ ರಾಕ್ಷಸನು ಭಾಗುರಾಯಣನು ಮಾಡಿದ ಯುದ್ಧಸನ್ನಾಹ ವನ್ನು ತಾನೇ ಪರೀಕ್ಷಿಸಿದನು. ವೈರಿಬಲವನ್ನು ಹಿಮ್ಮೆಟ್ಟಿಸಲು ಸೇನಾ ಪತಿ ಮಾಡಿದ ಸಿದ್ಧತೆ ಸಾಲದೆಂದು ತಿಳಿದು, ಅದಕ್ಕೆ ತಕ್ಕ ಏರ್ಪಾಟು ಗಳನ್ನು ಮಾಡಿಸಿದನು. 'ಈ ರಾತ್ರಿ ವೈರಿಗಳು ಪಟ್ಟಣವನ್ನು ಮುತ್ತು ವರೆಂಬ ಸುದ್ದಿ ನಮಗೆ ಬಂದಿದೆ. ರಾಜಧಾನಿಯನ್ನು ಕಾಪಾಡುವ ಭಾರ ನಿನಗೆ ಸೇರಿದೆ. ಈ ವಿಷಯದಲ್ಲಿ ಎಚ್ಚರಿಕೆಯಿಂದಿರು' ಎಂದು ಭಾಗುರಾಯಣನಿಗೆ ಅಪ್ಪಣೆಮಾಡಿ ಅಮಾತ್ಯನು ನಂದರ ಬಳಿಗೆ ಬಂದನು. ರಾಕ್ಷಸನು ಮಾಡಿದ ಏರ್ಪಾಟುಗಳನ್ನು ಕೇಳಿ ನಂದರು ತುಂಬ ಸಂತೋಷಿಸಿದರು. ಸ್ವಾಮಿಭಕ್ತನಾದ ಅಮಾತ್ಯರಾಕ್ಷಸ, ಕಾರ್ಯದಕ್ಷನಾದ ಕಾಶೀರಾಜ–ಇವರಿರುವಲ್ಲಿ ಹಗೆಗಳು ಹತರಾಗುವುದ ರಲ್ಲಿ ಸಂದೇಹವುಂಟೇ ಎಂದು ನಂದರು ಎಣಿಸಿದರು. ನಂದರು ಹಾಲನ್ನು ಕಂಡರು; ದೊಣ್ಣೆಯನ್ನು ಕಾಣಲಿಲ್ಲ. ಅವರು ಚಾಪೆಯ ಕೆಳಗೆ ನುಸಿದರೆ, ದೈವ ರಂಗವಲ್ಲಿಯ ಕೆಳಗಡೆ ನುಸಿಯಿತು. ಮನು ಷ್ಯನು ಸುಖ ಶಾಶ್ವತವೆಂದೇ ನಂಬುತ್ತಾನೆ. ಸುಖದ ಕೆಳಗಡೆ ಇರುವ

ವಿಷದ ಪಾತ್ರೆ ಅವನ ಕಣ್ಣಿಗೆ ಕಾಣಿಸುವುದಿಲ್ಲ. ಈ ವೇಳೆಗೆ ಸಂಜೆ ಯಾಯಿತು. ಮುಂದಾಗುವ ಕದನವನ್ನು ನೋಡಲಾರದೆ ಸೂರ್ಯ ದೇವನು ಕಣ್ಣನ್ನು ಮುಚ್ಚಿಕೊಂಡನು. ಕಾಡಿಗೆಯನ್ನು ಬಳಿದಂತೆ ಲೋಕವನ್ನೆಲ್ಲ ಕತ್ತಲೆ ಮುಸುಗಿತು. ರಾತ್ರಿ ಕಣ್ಣು ಬಿಟ್ಟಂತೆ ಎರಡು ಕಡೆಯ ಪಾಳೆಯಗಳಲ್ಲೂ ಸೊಡರುಗಳು ಮಿನುಗಿದುವು.

ಮಾರನೆಯ ದಿನ ನಂದರ ಸೇನೆಗೂ ಪರ್ವತರಾಜನ ಸೇನೆಗೂ ಯುದ್ಧ ಮೊದಲಾಯಿತು. ಪಾಟಲೀಪುರವನ್ನು ಮುತ್ತುವ ಆವೇಶ ದಲ್ಲಿ ಪರ್ವತರಾಜನ ಸೇನೆ ಜೀವದ ಹಂಗು ತೊರೆದು ಹೋರಾಡಿತು. ಎರಡು ಕಡೆಗಳಲ್ಲಿಯೂ ಅನೇಕರು ಹತರಾದರು. ನಂದರ ಕಡೆ ಅಂದು ವಿಶೇಷವಾಗಿ ಕಾದಾಡಿದವರು ಅವರ ಸಾಮಂತರೇ. ಭಾಗುರಾಯಣನ ಅಪ್ಪಣೆಯಂತೆ ಭದ್ರಭಟಾದಿಗಳು ಕಾದದೆ ಹಿಂದುಗಡೆ ಸುಮ್ಮನಿದ್ದು ಬಿಟ್ಟರು. ವೈರಿಗಳು ರಾಜಧಾನಿಗೆ ಸಮೀಪವಾದರು. ದೂತರಿಂದ ಈ ಸಮಾಚಾರ ನಂದರಿಗೆ ತಿಳಿಯಿತು. ಭದ್ರಭಟಾದಿ ಸೇನಾನಾಯ ಕರು ಮನಮುಟ್ಟಿ ಕಾದದಿರಲು ಕಾರಣವೇನು? ಶತ್ರುಗಳು ಇವರ ಮನಸ್ಸನ್ನು ಒಲಿಸಿಕೊಂಡಿರಬಹುದೇ? ನದಿಯ ನಡುವೆ ದೋಣಿಗ ನೊಡನೆ, ಕ್ಷೌರದ ನಡುವೆ ಕ್ಷೌರಿಕನೊಡನೆ ಹಗೆಕಟ್ಟಿಕೊಳ್ಳುವುದು ಹೇಗೆ ಉಚಿತವಲ್ಲವೋ ಹಾಗೆಯೇ ಈ ಸಮಯದಲ್ಲಿ ಅಧಿಕಾರಿಗಳನ್ನು ಮೇಲೆ ಹಾಕಿಕೊಳ್ಳುವುದು ಅನುಚಿತವೆಂದು ತೋರಿತು ನಂದರಿಗೆ. ಆಗ ತಾವೇ ಯುದ್ಧಕ್ಕೆ ಹೊರಡಬೇಕೆಂದು ಅವರು ನಿಶ್ಚೈಸಿದರು. ಈ ವೇಳೆಯಲ್ಲಿ ರಾಕ್ಷಸನೂ ಸಿಡಿಲಾಳಿನಂತೆ ಯುದ್ಧಕ್ಕೆ ಮುನ್ನುಗ್ಗಿ ದನು. ಆ ಮಂತ್ರಿಶ್ರೇಷ್ಠನ ಪರಾಕ್ರಮವನ್ನು ಏನೆಂದು ವರ್ಣಿಸು ವುದು? ಆತನ ಸಿಡಿಲಾಳುತನವನ್ನು ಒಂದೇ ಮಾತಿನಲ್ಲಿ ಬಣ್ಣಿಸುವುದೇ ಉಚಿತ. ವೈರಿಸೇನೆಗೆ ರಾಕ್ಷಸನು ರಾಕ್ಷಸನೇ ಆದನು. ಆತನ ಪರಾ ಕ್ರಮದಿಂದ ಅಂದು ನಂದರಿಗೆ ಜಯಲಕ್ಷ್ಮಿ ಒಲಿದಳು. ಇದರಿಂದ ನಂದರಿಗೆ ಅತಿಯಾಗಿ ಸಂತೋಷವಾಯಿತು. ಮಾರನೆಯದಿನ ನಡೆದ ಯುದ್ಧದಲ್ಲಿಯೂ ನಂದರದೇ ಮೇಲುಗೈ.

ನಂದರಿಗೆ ಉಂಟಾದ ಜಯದಿಂದ ಪರ್ವತರಾಜನಿಗೆ ಕಳವಳ ವುಂಟಾಯಿತು. ಕಷ್ಟಸುಖಗಳು ಬಂದರೆ ಗುಂಪುಕೂಡಿ ಬರುವಂತೆ

ಪರ್ವತರಾಜನಿಗೆ ಮೇಲಿಂದಮೇಲೆ ಕೆಟ್ಟಸುದ್ದಿಗಳು ಬರತೊಡಗಿದುವು. ಮೊದಲನೆಯದಾಗಿ ನಂದರ ಮೂಲಬಲ ಇನ್ನೆರಡು ದಿನಗಳಲ್ಲಿ ಅವರಿಗೆ ಬೆಂಬಲವಾಗಿ ಬರುವುದೆಂಬ ಸುದ್ದಿ ಬಂತು. ಅಷ್ಟರಲ್ಲೇ ರಾಜಧಾನಿಯಿಂದ ನಗರರಕ್ಷಕನು 'ಶತ್ರುಗಳು ನಮ್ಮ ರಾಜ್ಯವನ್ನು ಕೊಳ್ಳೆ ಹೊಡೆಯುತ್ತಿದ್ದಾರೆ. ಅನೇಕ ಗಡಿದುರ್ಗಗಳು ಅವರ ವಶವಾದುವು. ತಡಮಾಡಿದರೆ ರಾಜಧಾನಿ ವೈರಿಗಳ ವಶವಾಗುತ್ತದೆ. ನನ್ನಿಂದ ಪಟ್ಟಣವನ್ನು ಕಾಪಾಡಲು ಸಾಧ್ಯವಿಲ್ಲ. ನೀವು ನಂದರೊಡನೆ ಬೇಗ ಸಂಧಿಮಾಡಿಕೊಂಡು ಬರಬೇಕು' ಎಂದು ಬರೆದು ಕಳುಹಿಸಿದ ಲೇಖನ ಬಂದು ತಲುಪಿತು. ಕೆಸರಿನಲ್ಲಿ ಬಿದ್ದ ಮದ್ದಾನೆಯಂತಾಯಿತು ಪರ್ವತ ರಾಜನ ಸ್ಥಿತಿ. ಮನಸ್ಸಿನ ಗಾಯಕ್ಕೆ ತೈಲ, ಪ್ರತಿದಿನದ ಮರಣ ದಂತಿರುವ ಮೃದುಮಧುರವಾದ ನಿದ್ದೆ ರಾಜನಿಗೆ ಬಾರದಾಯಿತು. ಉಲೂಕನ ಮಾತನ್ನು ಕೇಳಿ, ಚಾಣಕ್ಯನ ಕುಮಂತ್ರಕ್ಕೆ ಒಳಗಾಗ ದಿದ್ದರೆ ಎಷ್ಟು ಚೆನ್ನಿರುತ್ತಿತ್ತು ಎಂದುಕೊಂಡನು ಪರ್ವತರಾಜ. 'ಹಿಂದಿನ ಮನೆ ಭಿಕ್ಷೆ ಇಲ್ಲ, ಮುಂದಿನ ಮನೆ ಕೋರುಧಾನ್ಯ ತಪ್ಪಿತು' ಎಂಬ ಗಾದೆ ರಾಜನ ವಿಷಯದಲ್ಲಿ ಸತ್ಯವಾದಂತೆ ತೋರಿತು.

ಇತ್ತ ರಾಕ್ಷಸನು ಸ್ವಲ್ಪಕಾಲ ಯುದ್ಧ ನಿಲ್ಲಿಸಿ ಕಾಲ ಕಳೆಯಲು ಬಯಸಿದನು. ನಷ್ಟವಾದ ಸೇನೆಯನ್ನು ಜತೆಗೊಳಿಸಿ, ಮೂಲಬಲ ವನ್ನು ಈ ಸೇನೆಯೊಡನೆ ಸೇರಿಸಲು ನಿಜವಾಗಿಯೂ ಅಮಾತ್ಯನಿಗೆ ಸ್ವಲ್ಪಕಾಲ ಬೇಕಾಗಿತ್ತು. ಅದಕ್ಕಾಗಿ ಕಪಟಸಂಧಿಯ ನೆವದಿಂದ ವಿಷ್ಣುದಾಸನೆಂಬ ನಿಯೋಗಿಯನ್ನು ಪರ್ವತರಾಜನಲ್ಲಿಗೆ ಕಳುಹಿಸಿ ದನು. ವಿಷ್ಣುದಾಸನು ರಾತ್ರಿಯಲ್ಲಿ ಪರ್ವತರಾಜನನ್ನು ಮರ್ಯಾದೆ ಯಿಂದ ಬಂದು ಕಂಡು 'ಅರಸರೇ, ನಂದರು ತಮಗೆ ಈ ರೀತಿ ಹೇಳಿ ಕಳುಹಿಸಿದ್ದಾರೆ. ನಮಗೂ ಪರ್ವತರಾಜನಿಗೂ ಎಂದೂ ಇಲ್ಲದ ವೈರ ಚಂದ್ರಗುಪ್ತನಿಂದುಂಟಾಗಿದೆ. ಈ ಅಲ್ಪ ಮನುಷ್ಯನಿಗಾಗಿಯೇ ಇಷ್ಟು ದೊಡ್ಡ ನಷ್ಟ ಉಂಟಾಗಿದೆ. ಆದ್ದರಿಂದ ಚಂದ್ರಗುಪ್ತನನ್ನು ನಮ್ಮ ವಶಪಡಿಸಿದರೆ ಅದೇ ಅರ್ಧರಾಜ್ಯವನ್ನು ನಾವೇ ನಿಮಗೆ ಕೊಡುತ್ತೇವೆ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ತಿಳಿದು ಬರುವಂತೆ ನನಗೆ ಅಪ್ಪಣೆಯಾಗಿದೆ' ಎಂದು ತಿಳಿಸಿದನು.

ನಿಯೋಗಿಯ ಮಾತನ್ನು ಕೇಳಿ ಪರ್ವತರಾಜನ ಮನಸ್ಸಿನಲ್ಲಿ ಆಸೆ, ಅಭಿಮಾನಗಳು ಏಕಕಾಲದಲ್ಲಿ ತಲೆದೋರಿದುವು. ತಮಗೆ ಕ್ಷೇಮ ವನ್ನುಂಟುಮಾಡುವ ಸಂಧಿಯ ಆಶೆಯನ್ನು ಕ್ಷಣಕಾಲ ಅದುಮಿ ಪರ್ವತರಾಜನು ಅಭಿಮಾನದಿಂದ ನಿಯೋಗಿಗೆ ಈ ರೀತಿ ನುಡಿದನು. 'ನಮಗೆ ರಾಜ್ಯದ ಮೇಲೆ ಆಶೆಯಿಲ್ಲ. ಮರೆಹೊಕ್ಕವರನ್ನು ಕಾಪಾಡು ವುದು ಕ್ಷತ್ರಿಯರ ಧರ್ಮ. ಚಂದ್ರಗುಪ್ತನಿಗೆ ನಂದರು ಅರ್ಧರಾಜ್ಯ ವನ್ನು ಕೊಟ್ಟರೇ ನಮಗೆ ಸಂಧಿ ಒಪ್ಪಿಗೆ. ಈ ವಿಷಯವನ್ನು ನಂದರಿಗೆ ತಿಳಿಸಿ, ಅವರ ಕುಶಲವನ್ನು ನಾವು ಕೇಳಿದೆವೆಂದು ತಿಳಿಸು.' ಪರ್ವತ ರಾಜನು ಅಭಿಮಾನದಿಂದ ಮಾತನಾಡಿದರೂ ಅವನ ಮನಸ್ಸಿನ ಆತಂಕ ಮುಖದಲ್ಲಿ ಕಂಡುಬರುತ್ತಿತ್ತು. ಇದನ್ನರಿತ ನಿಯೋಗಿ ಸ್ವಲ್ಪ ಸಮಾ ಧಾನ ಹೊಂದಿ ಬಂದ ದಾರಿಯಲ್ಲಿ ಹಿಂದಿರುಗಿದನು.

ನಿಯೋಗಿ ಹೊರಟುಹೋದ ಮೇಲೆ, ಪರ್ವತರಾಜನು ಶಬರ ವರ್ಮನಿಗೆ 'ಮಂತ್ರಿ, ನಮ್ಮ ರಾಜಧಾನಿಗೆ ಈಗ ವಿಪತ್ತು ಒದಗಿದೆ. ಇದು ರಾಕ್ಷಸನು ಮಾಡಿರುವ ತಂತ್ರ. ಇಷ್ಟರಲ್ಲೇ ನಂದರ ಸೇನೆಗೆ ಮೂಲಬಲ ಬಂದು ಸೇರುತ್ತದೆ. ಈ ಎರಡು ಸುದ್ದಿ ರಾಕ್ಷಸನಿಗೆ ತಿಳಿ ದರೆ ಆತನು ಸಂಧಿಗೆ ಒಡಂಬಡನು. ಆದ್ದರಿಂದ ಪೂರ್ವದಲ್ಲಿ ಜನಮೇ ಜಯನು ಸರ್ಪಯಾಗವನ್ನು ಮಾಡಿದಾಗ ಶರಣಾಗತನಾದ ತಕ್ಷಕ ನನ್ನು ಪರಿತ್ಯಜಿಸಿ ದೇವೇಂದ್ರನು ಸುಖಿಯಾದಂತೆ ಈಗ ಚಂದ್ರಗುಪ್ತ ನನ್ನು ನಂದರಿಗೊಪ್ಪಿಸಿ, ಅವರು ಕೊಡುವ ಅರ್ಧರಾಜ್ಯವನ್ನು ಸ್ವೀಕರಿಸಿ ರಾಜಧಾನಿಗೆ ಹೋಗುವೆನು' ಎಂದನು. ರಾಜನ ಮಾತು ಮಂತ್ರಿಗೆ ರುಚಿಸಲಿಲ್ಲ. ಮಾಡತಕ್ಕ ಕೆಲಸವನ್ನು ಚಾಣಕ್ಯನಿಗೆ ತಿಳಿಸಿ ಮಾಡ ತಕ್ಕದ್ದೆಂದು ಮಾತ್ರ ಹೇಳಿ ಶಬರವರ್ಮನು ಬೀಡಾರಕ್ಕೆ ತೆರಳಿದನು. ಇತ್ತ ರಾಜದೂತನು ಚಾಣಕ್ಯನಲ್ಲಿಗೆ ಬಂದನು.

ದಾರಿಯಲ್ಲಿ ದೂತನೊಡನೆ ರಾಜಸಭೆಗೆ ಹೋಗುತ್ತಿದ್ದ ಚಾಣಕ್ಯ ನನ್ನು ಕಂಡು ಶಬರವರ್ಮನು ತನ್ನ ಮನಸ್ಸಿನಲ್ಲಿ 'ಪೂಜ್ಯರು ನನ್ನ ಬಳಿಗೆ ಬಂದು ರಾಜನು ಈಗ ನಮ್ಮನ್ನು ಕರೆಕಳುಹಿಸಿದುದಕ್ಕೆ ಕಾರಣ ವೇನೆಂದು ಕೇಳಿದರೆ ಏನು ಹೇಳಲಿ? ಆಸ್ಥಾನದಲ್ಲಿ ನಡೆದುದನ್ನು ಅನ್ಯರಿಗೆ ಹೇಳುವುದು ಮಂತ್ರಿಧರ್ಮವಲ್ಲ. ಆದರೆ ಮಹಾತ್ಮರಲ್ಲಿ

ಸುಳ್ಳಾಡಕೂಡದು. ಆದ್ದರಿಂದ ಈಗ ಮರೆಯಾಗುವುದೇ ಉತ್ತಮ' ಎಂದುಕೊಂಡು ಮರೆಯಾದನು. ಇದನ್ನು ದೂರದಲ್ಲೇ ಕಂಡ ಚಾಣಕ್ಯನು 'ಶಬರವರ್ಮನು ಮರೆಯಾದುದಕ್ಕೆ ಕಾರಣವೇನು? ಆಸ್ಥಾನದಲ್ಲಿ ನಮಗೆ ಅಪ್ರಿಯವಾದ ಮಾತುಕತೆಗಳು ನಡೆದಿರಬೇಕು. ನಂದರ ನಿಯೋಗಿ ಪರ್ವತರಾಜನಲ್ಲಿಗೆ ಬಂದು ಏನೋ ಆಸೆಯನ್ನು ಒಡ್ಡಿರಬೇಕು. ಅದು ಪರ್ವತರಾಜನಿಗೆ ಸಮ್ಮತವಾಗಿ, ಸೇನಾಪತಿಗೆ ಅಸಮ್ಮತವಾಗಿ ವಾಗ್ವಾದ ನಡೆದಿರಬೇಕು. ಅದನ್ನು ನಮಗೆ ತಿಳಿಸಲು ನಾಚಿಕೆಯಾಗಿ ಶಬರವರ್ಮನು ಈಗ ಮರೆಯಾಗಿರಬೇಕು. ಈತನ ಅಭಿಪ್ರಾಯವನ್ನು ತಿಳಿದ ಬಳಿಕ ರಾಜನ ಬಳಿಗೆ ಹೋಗೋಣ' ಎಂದು ಯೋಚಿಸಿ ದೂತನಿಂದ ಅವನನ್ನು ತನ್ನಲ್ಲಿಗೆ ಕರೆಸಿಕೊಂಡನು. ಹಾಗೆ ಬಂದು ನಮಸ್ಕರಿಸಿ ಖಿನ್ನನಾಗಿ ನಿಂತಿದ್ದ ಶಬರವರ್ಮನನ್ನು ನೋಡಿ ಚಾಣಕ್ಯನು 'ಎಲೈ ಮಂತ್ರಿ, ಈ ದಿನ ಆಸ್ಥಾನದಲ್ಲಿ ನಡೆದ ಅಪ್ರಿಯವಾದ ಮಾತನ್ನು ನಮಗೆ ತಿಳಿಸುವುದು ಮಂತ್ರಿಧರ್ಮವಲ್ಲವೆಂದು ತಿಳಿದು ನೀನು ಮರೆಯಾದಂತೆ ತೋರುತ್ತದೆ. ಶತ್ರುಗಳು ಒಡ್ಡಿರುವ ಆಶೆಗೆ ಮರುಳಾಗಿ, ಅವರು ಹೇಳಿದಂತೆ ನಡೆಸಿಕೊಡಲು ಅರಸನು ಒಪ್ಪಿರುವನೇ? ಸ್ವರಕ್ಷಣೆಗಾಗಿ ಅರಸರು ಸಮಯೋಚಿತವಾಗಿ ಹೀಗೆ ಮಾಡುವುದುಂಟು' ಎಂದು ಕೇಳಿದನು. ಚಾಣಕ್ಯನ ಮಾತಿಗೆ ಶಬರವರ್ಮನು 'ಪೂಜ್ಯರೇ, ನೀವು ಊಹಿಸಿದುದು ಸುಳ್ಳಾದೀತೇ? ಭಯಗ್ರಸ್ತನಾದವನಿಗೆ ಕಾರ್ಯಾಕಾರ್ಯ ವಿವೇಕವಿರದು. ಆದ್ದರಿಂದ ಅಕಾರ್ಯಕ್ಕೆ ಸಮ್ಮತಿಸದ, ದಕ್ಷನಾದ ಶೇಖರನ ಕೈಯಲ್ಲಿ ಚಂದ್ರಗುಪ್ತನನ್ನು ಒಪ್ಪಿಸಿ ನಿಮ್ಮ ಮನಬಂದಂತೆ ಆಚರಿಸಿ' ಎಂದು ಹೇಳಿ ಹೊರಟುಹೋದನು. ಶಬರವರ್ಮನ ಮಾತಿನ ಅರ್ಥವನ್ನು ಚೆನ್ನಾಗಿ ಗ್ರಹಿಸಿ, ಮುಂದೆ ಮಾಡುವ ಕೆಲಸವನ್ನು ಬೇಗ ಮಾಡಬೇಕೆಂದು ನಿಶ್ಚೈಸಿ ಚಾಣಕ್ಯನು ಆಸ್ಥಾನಕ್ಕೆ ಬಂದನು.

ಪರ್ವತರಾಜನು ಚಾಣಕ್ಯನನ್ನು ಆದರದಿಂದ ಸಭೆಗೆ ಬರಮಾಡಿಕೊಂಡನು. ಸಭೆಯ ಸ್ಥಿತಿ, ರಾಜನ ಮುಖಲಕ್ಷಣ—ಇವುಗಳಿಂದ ನಂದರ ನಿಯೋಗಿ ಪರ್ವತರಾಜನೆಡೆಗೆ ಬಂದಿರಲೇಬೇಕೆಂದು ಚಾಣಕ್ಯನಿಗೆ ಹೊಳೆಯಿತು. ರಾಜನು ಚಾಣಕ್ಯನನ್ನು ನೋಡಿ 'ಪೂಜ್ಯರೇ,

ಸಂಧಿಗಾಗಿ ನಂದರ ನಿಯೋಗಿ ಈಗತಾನೆ ನಮ್ಮಲ್ಲಿಗೆ ಬಂದಿದ್ದ. ಚಂದ್ರಗುಪ್ತನನ್ನು ವೈರಿಗಳಿಗೆ ಒಪ್ಪಿಸಿದರೆ, ಅವರು ನಮಗೆ ಅರ್ಧರಾಜ್ಯವನ್ನು ಕೊಡುವರಂತೆ. ಈ ಮಾತಿಗೆ ನಾನು ಉಚಿತವಾದ ಉತ್ತರವನ್ನು ಹೇಳಿಕಳುಹಿಸಿದೆ. ಮೊನ್ನಿನ ಯುದ್ಧದಲ್ಲಿ ನಮಗೆ ಅಪಜಯವುಂಟಾಯಿತು. ನಿನ್ನೆಯದು ಸಮಯುದ್ಧ. ನಾಳಿನ ಯುದ್ಧದಲ್ಲಿ ಜಯಲಕ್ಷ್ಮಿಯ ಕುಡಿನೋಟ ಯಾರಮೇಲಿರುವುದೋ ಹೇಳಬಲ್ಲವರಾರು? ನಾವು ಸಂಧಿಗೆ ಈಗ ಒಪ್ಪಕೂಡದೇಕೆ? ನಮಗೆ ನಂದರಿಂದ ಬರುವ ಅರ್ಧರಾಜ್ಯಕ್ಕೆ ಚಂದ್ರಗುಪ್ತನನ್ನು ಒಡೆಯನನ್ನಾಗಿ ಮಾಡುವೆನು. ಇದರಿಂದ ಇಬ್ಬರಿಗೂ ಇರುವ ವೈರ ಶಾಂತವಾಗುವುದು.'

ಚಾಣಕ್ಯ (ಮುಗುಳು ನಗೆ ನಕ್ಕು ಮನಸ್ಸಿನಲ್ಲೇ) ರಾಕ್ಷಸ, ನಿನ್ನ ಕಪಟ ನನ್ನ ಬಳಿ ಸಾಗದು. (ಪ್ರಕಾಶವಾಗಿ) ಅರಸನೇ, ಬಲಹೀನರು ಶೂರರನ್ನು ಸಂಧಿಗಾಗಿ ಬೇಡುವುದು ಲೋಕಧರ್ಮ. ಈಗಿನ ಯುದ್ಧದಲ್ಲಿ ಅವರಿಗೆ ಜಯವುಂಟಾಗಿದೆ. ಶೂರರು ಸಂಧಿಗೆ ಹೇಳಿಕಳುಹಿಸುವರೇ? ಇದು ಕಾಲ ಕಳೆಯಲು ವೈರಿಗಳು ಮಾಡಿರುವ ಕಪಟ. ಈ ಅಂಶವನ್ನು ನೀನು ಯೋಚಿಸಬೇಡವೇ? ಅದಿರಲಿ; ನಿನ್ನ ಮುಖ ಕಳೆಗುಂದಿರಲು ಕಾರಣವೇನು? ನಿನ್ನ ಕಣ್ಣುಗಳು ನಿದ್ದೆಯಿಲ್ಲದೆ ಕೆಂಪಾಗಿವೆ.

ಪರ್ವತರಾಜ—ಆರ್ಯರೇ, ರಾಕ್ಷಸನ ತಂತ್ರದ ಫಲವಾಗಿ ನಮ್ಮ ರಾಜಧಾನಿ ವೈರಿಗಳಿಂದ ಸೂರೆಯಾಗುವುದರಲ್ಲಿದೆ. ಇಷ್ಟರಲ್ಲೇ ನಂದರಿಗೆ ಬೆಂಬಲವಾಗಿ ಅವರ ಮೂಲಬಲ ಬಂದೊದಗುವುದಂತೆ. ಈಗ ರಾಜಧಾನಿಗೆ ಸಹಾಯವಾಗಿ ಸೇನೆಯನ್ನು ಕಳುಹಬೇಕು. ನಂದರಿಗೆ ಬೆಂಬಲವಾಗಿ ಮೂಲಬಲ ಬರದಂತೆ ತಡೆಯಬೇಕು. ವೈರಿಗಳೊಡನೆ ಯುದ್ಧ ನಡೆಸಬೇಕು. ಒಂದೇಕಾಲದಲ್ಲಿ ಈ ಮೂರು ಕೆಲಸ ಹೇಗೆ ತಾನೆ ಸಾಧ್ಯ? ಈ ಕಾರಣದಿಂದ ನನಗೆ ನಿದ್ದೆಯಿಲ್ಲದಾಗಿದೆ. ಈಗ ನನಗೆ ಸುಖವಾಗುವ ದಾರಿ ತೋರಿ.

ಚಾಣಕ್ಯ—ಅರಸ! ಪರ್ವತರಾಜನು ಎದೆಗೆಟ್ಟು ಮಂಜಿಗೆ ಹೆದರಬೇಕೇ? ನಂದರನ್ನು ನಿಗ್ರಹಿಸಲು ನಾನು ಇಷ್ಟು ಸೇನೆಯನ್ನು ಬಯಸಲಿಲ್ಲ. ಈಗ ನೀನು ನಗರರಕ್ಷಕನಿಗೆ 'ನಿನ್ನಿನ ಯುದ್ಧದಲ್ಲಿ ನಂದರು

ಮರಣಹೊಂದಿದರು. ಪಾಟಲೀಪುರ ನಮ್ಮ ಕೈವಶವಾಯಿತು. ಅಮಾತ್ಯರಾಕ್ಷಸನು ಓಡಿಹೋದನು. ಎಷ್ಟು ಹುಡುಕಿಸಿದರೂ ಆತನು ಸಿಕ್ಕಲಿಲ್ಲ. ನಿಮ್ಮಲ್ಲಿ ಆತನಿರುವ ಸುದ್ದಿ ತಿಳಿದರೆ, ಆತನನ್ನು ಹಿಡಿಸಿ ಸೆರೆಯಲ್ಲಿಡಿಸುವುದು. ಈ ಒಸಗೆಗಾಗಿ ರಾಜಧಾನಿಯಲ್ಲಿ ಜಯಭೇರಿ ಹೊಡೆಸಿ, ಸಕ್ಕರೆಯನ್ನು ಹಂಚಿಸು. ನಗರದಲ್ಲಿ ಉತ್ಸವ ನಡೆಯಲಿ' ಎಂದು ಬರೆದು ಕಳುಹಿಸು. ಇದರಿಂದ ಶತ್ರುಗಳು ನಿಂತಲ್ಲಿ ನಿಲ್ಲದೆ ಓಡಿಹೋಗುವರು. ಇಷ್ಟರಲ್ಲೇ ದಕ್ಷಿಣದೇಶದಿಂದ ಬರುವ ಬಲ ಓಡಿ ಹೋದ ಸುದ್ದಿ ತಿಳಿದುಬರುವುದು.

ಪರ್ವತರಾಜ—ನೀವು ಹೇಳಿದಂತೆ ದಕ್ಷಿಣದಿಂದ ಬರುವ ಸೇನೆ ಓಡಿಹೋಗದಿದ್ದರೆ, ಆಗಲಾದರೂ ನಾವು ಸಂಧಿಗೆ ಒಡಂಬಡಬೇಕಲ್ಲವೆ?

ಚಾಣಕ್ಯ (ಕೈಹೊಯ್ದು ನಗುತ್ತ)—ಚಂದ್ರಗುಪ್ತನನ್ನು ನಂದರಿಗೆ ಒಪ್ಪಿಸುವುದು ತಾನೆ ನಿನ್ನ ಅಭಿಮತ? ಈ ಅಕಾರ್ಯ ಖಂಡಿತವಾಗಿ ನಾವಿರುವವರೆಗೆ ನಡೆಯಲಾರದು. ನಮ್ಮಲ್ಲಿ ಬುದ್ಧಿಶಕ್ತಿ, ಪೌರುಷ ಗಳು ಇಲ್ಲವೆಂದು ಭಾವಿಸಿರುವೆಯಾ? ನನ್ನ ತಪಸ್ಸಿನಿಂದಲೇ ನಂದ ರನ್ನು ಸುಟ್ಟು ಬೂದಿಮಾಡುವೆನು.

ಈ ವೇಳೆಗೆ ಲಂಪಾಕಾಧಿಪತಿ, ಕಾಮರೂಪ ದೇಶಾಧಿಪತಿಯಿಂದ ಸೋತುಹೋದನೆಂಬ ಸುದ್ದಿ ಚಾರರಿಬ್ಬರಿಂದ ತಿಳಿದುಬಂತು. ಅದನ್ನು ಕೇಳಿಸಂತೋಷದಿಂದ ಪರ್ವತರಾಜನು ಚಾಣಕ್ಯನ ಮುಖ ನೋಡಲು, ಚಾಣಕ್ಯನು ಪರ್ವತರಾಜನನ್ನು ನೋಡಿ 'ರಾಜನೇ, ಇದು ಯಾವ ಮಹಾಸಂತೋಷದ ಸುದ್ದಿ? ನಾಳೆ ಆಗಬಹುದಾದ ಜಯಲಾಭವನ್ನು ನೋಡಬೇಕಾದರೆ ಶೇಖರನನ್ನು ನಿನ್ನೆಲ್ಲ ಸೇನೆಗೆ ಅಧಿಪತಿಯನ್ನಾಗಿ ಮಾಡಿ ನಮ್ಮಲ್ಲಿಗೆ ಕಳುಹು' ಎಂದನು. ಅಂದಿನ ಸಭೆ ಮುಗಿಯಿತು. ಆಸ್ಥಾನದಿಂದ ಎಲ್ಲರೂ ತಮ್ಮ ಬೀಡಾರಗಳಿಗೆ ತೆರಳಿದರು.

ಸಭೆ ಮುಗಿಯುವ ವೇಳೆಗೆ ನಡುರಾತ್ರಿಯಾಗಿತ್ತು. ಕೆಟ್ಟ ಯೋಚನೆಗಳನ್ನು ಹುದುಗಿಟ್ಟುಕೊಂಡ ಮನುಷ್ಯನ ಮನಸ್ಸಿನಂತೆ ಹೊರಗಡೆ ಕಗ್ಗತ್ತಲೆ ದಟ್ಟವಾಗಿ ಹಬ್ಬಿತ್ತು. ಆಸ್ಥಾನದಿಂದ ತನ್ನ ಬೀಡಾರಕ್ಕೆ ಹೋಗುತ್ತ ಚಾಣಕ್ಯನು ತನ್ನ ಮನಸ್ಸಿನಲ್ಲಿ ಈ ರೀತಿ ಯೋಚಿಸಿದನು. 'ರಾಕ್ಷಸನ ಕಪಟಕ್ಕೆ ಪರ್ವತರಾಜನು ಮರುಳಾಗಿ

ದ್ದಾನೆ. ಆದ್ದರಿಂದ ಚಂದ್ರಗುಪ್ತನಿಗೆ ವಿಪತ್ತು ಬರುವುದಕ್ಕೆ ಮುಂಚೆ ನಾವು ಕಾರ್ಯಸಾಧನೆ ಮಾಡಬೇಕು. ಆಹಾ! 'ತಮ್ಮೊಳಗ್ಗಲಿಸಿ ಪೊದಳ್ದು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಂ' ಅಲ್ಲದೆ—

ಅನುಪಮ ವಿಕ್ರಮಕ್ರಮುಮುದಾರ ಗುಣಂ ಋತವಾಕ್ಯವೆಂಬ ಪೆಂ ।
ಪನಲಿವು ಮೂರು ನಾಲ್ಕೆ ಗುಣಮತ್ತ ಮದಾನ್ವಿತ ರಾಜಬೀಜ ಸಂ ॥
ಜನಿತ ಗುಣಂ ಮದಂ ಮದಮನಾಳ್ದವಿವೇಕತೆಯಿಂದಮುತ್ತೆ ತೋ ।
ಳ್ತಿನ ಮೊಲೆವಾಲನುಂಡ ಗುಣಮಿಂತಿವನಾರ್ ಕಿಡಿಪರ್ ನರೇಂದ್ರರೊಳ್ ॥

# ೧೬. ನಂದರ ಮರಣ

ಚಾಣಕ್ಯನಿದ್ದ ಧೈರ್ಯ ಪರ್ವತರಾಜನಿಗಿರಲಿಲ್ಲವಾದ ಕಾರಣ ರಾಜನಿಗೆ ಆ ರಾತ್ರಿ ನಿದ್ದೆ ಬರಲಿಲ್ಲ. ಆ ದಿನದ ಘಟನೆಗಳಿಂದ ಪರ್ವತ ರಾಜನ ಮನಸ್ಸು ಇನ್ನೂ ಹಿಡಿತಕ್ಕೇ ಬಂದಿರಲಿಲ್ಲ. ಚಾಣಕ್ಯರ ಬುದ್ಧಿ ಶಕ್ತಿಯಿಂದ ಆಗದ ಕೆಲಸವಾಗುವುದು? ಅವರ ಸಹವಾಸ ಬೆಂಕಿ ಯೊಡನೆ ಸರಸವಾಡಿದಂತೆ. ಆದರೆ ಇತ್ತ ನೋಡಿದರೆ ನಂದರ ಸೇನೆಗೆ ಮಿತಿಯೇ ಇರುವಂತೆ ತೋರುವುದಿಲ್ಲ, ಹೀಗಿರುವಲ್ಲಿ ಮುಂದೇನು ಮಾಡಬೇಕು? ಈ ಯೋಚನೆಯೇ ರಾಜನ ಮನಸ್ಸನ್ನು ಮುಸುಕಿತ್ತು. ಎಷ್ಟು ಯೋಚಿಸಿದರೂ ದಾರಿಗಾಣದೆ, ಕೊನೆಗೆ ಪರ್ವತರಾಜನು ತನಗೆ ಆಪ್ತನಾದ ಶೇಖರನನ್ನು ಕರೆಸಿ, ಅವನಿಗೆ ಈ ರೀತಿ ಹೇಳಿದನು. 'ಸೇನಾಪತಿ, ನಮಗೆ ಎಂಥ ವಿಪತ್ತು ಬಂತು! ಈ ಸಮಯದಲ್ಲಿ ನನಗೆ ದಿಕ್ಕೇ ತೋರದಾಗಿದೆ. 'ಇತ್ತ ಪುಲಿ, ಅತ್ತ ದರಿ' ಎನ್ನುವಂ ತಾಗಿದೆ ನನ್ನ ಅವಸ್ಥೆ. ರಾಕ್ಷಸನ ತಂತ್ರ, ಅದಕ್ಕೆ ಚಾಣಕ್ಯರು ಹೇಳಿ ರುವ ಪರಿಹಾರ—ಇವು ಒಂದಕ್ಕಿಂತ ಒಂದು ಬಲವಾಗಿವೆ. ಈಗ ನಾನು ಚಂದ್ರಗುಪ್ತನನ್ನು ವೈರಿಗಳ ವಶಪಡಿಸಿ, ರಾಕ್ಷಸನ ಸ್ನೇಹ ಸಂಪಾದಿಸುತ್ತೇನೆ. ನಂದರು ನಮಗೆ ಕೊಡುವ ಅರ್ಧ ರಾಜ್ಯಕ್ಕೆ ನಿನ್ನನ್ನು ಅಧಿಪತಿಯನ್ನಾಗಿ ಮಾಡಬೇಕೆಂದಿರುತ್ತೇನೆ. ಈ ವಿಷಯ ದಲ್ಲಿ ನಿನ್ನ ಅಭಿಪ್ರಾಯವೇನು?'

ಪರ್ವತರಾಜನಿಗೆ ಕೇಡು ಹತ್ತಿರವಾದಂತೆ ಶೇಖರನಿಗೆ ತೋರಿತು. ಎಷ್ಟೇ ಕಷ್ಟಬಂದರೂ ಚಂದ್ರಗುಪ್ತನನ್ನು ಕಾಪಾಡಬೇಕೆಂದು ಸೇನಾ

ಪತಿ ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡು, ರಾಜನಿಗೆ ಗಯನೆಂಬ ಗಂಧರ್ವನ ಕಥೆಯನ್ನು ವಿವರಿಸಿ, ಮರೆಹೊಕ್ಕವರನ್ನು ಕಾಪಾಡುವುದೇ ಕ್ಷತ್ರಿಯ ಧರ್ಮವೆಂದು ಬೋಧಿಸಿದನು. ಶೇಖರನ ಮಾತನ್ನು ಒಪ್ಪಿಕೊಂಡು, ರಾಜನು ಚಾಣಕ್ಯನ ಅಪ್ಪಣೆಯಂತೆ ಅವನನ್ನು ತನ್ನ ಸಮಸ್ತ ಸೇನೆಗೂ ಅಧಿಪತಿಯನ್ನಾಗಿ ಮಾಡಿದನು.

ಇತ್ತ ರಾಜನ ಓಲಗದಿಂದ ತನ್ನ ಬೀಡಾರಕ್ಕೆ ಬಂದಮೇಲೆ, ಚಾಣಕ್ಯನು ನಂದರ ಮರಣಕ್ಕಾಗಿ ಬೇಕಾಗುವ ಎಲ್ಲ ಏರ್ಪಾಟುಗಳನ್ನೂ ಎಚ್ಚರಿಕೆಯಿಂದ ಮಾಡಿದನು. ಪಾಟಲೀಪುರದಿಂದ ಕಾಶೀನಗರಕ್ಕೆ ಹೋಗುವ ದಾರಿಯ ನಡುವೆ ಶೇಖರನ ಮೂವತ್ತು ಸಾವಿರ ಯೋಧರು ಕಾಶೀರಾಜನ ಯೋಧರಂತೆ ವೇಷಧರಿಸಿ, ಚಾಣಕ್ಯನ ಅಪ್ಪಣೆಗಾಗಿ ಕಾದು ನಿಂತರು. ಅವರಲ್ಲಿ ಸುಂದರನೂ ಬುದ್ಧಿವಂತನೂ ಆದ ಒಬ್ಬನಿಗೆ ಮಲಯಕೇತುವಿನಂತೆ ವೇಷಹಾಕಿಸಿ, ಆನೆಯ ಮೇಲೆ ಕೂರಿಸಿದ್ದರು. ಅವನ ಸುತ್ತಲೂ ರಾಜಪರಿವಾರ ಮೆರೆಯುತ್ತಿತ್ತು. ನಂದರು ಜಪಶಾಲೆಗೆ ಬಂದೊಡನೆಯೇ, ಅವರಿಗೆ ಏನೋ ಒಂದು ಸುದ್ದಿಯನ್ನು ತಿಳಿಸಲು ಜಪಶಾಲೆಯ ಬಳಿ ಇಬ್ಬರು ಸವಾರರನ್ನು ಕಾವಲಿಡಲಾಯಿತು. ಕಾಶೀಮಾರ್ಗದ ನಡುವೆ ನಿಂತು ಸೇನೆ ಜಪಶಾಲೆಗೆ ಬರುವುದನ್ನು ಕಂಡು, ಜಪಶಾಲೆಯಲ್ಲಿರುವ ನಂದರಿಗೆ ಯಾವುದೋ ಮಾತನ್ನು ಹೇಳಲು ಇಬ್ಬರು ಸವಾರರನ್ನು ನೇಮಕ ಮಾಡಲಾಯಿತು. ಕಾಶೀಮಾರ್ಗದ ಸೇನೆಯಲ್ಲಿ ನಿಂತು, ನಂದರು ಜಪಶಾಲೆಗೆ ಬಂದ ಸುದ್ದಿ, ಶೇಖರನ ಸೂಚನೆ—ಇದನ್ನು ತಿಳಿದು ಮುಂದಿನ ಕಾರ್ಯ ನಡೆಸಲು, ಇಬ್ಬರು ಸವಾರರನ್ನು ಗೊತ್ತುಮಾಡಲಾಯಿತು.

ಈ ಸನ್ನಾಹ ಮುಗಿದ ಮೇಲೆ ಚಾಣಕ್ಯನು ಶೇಖರನಿಗೆ ' ಸೇನಾಪತಿ, ನಂದರು ಜಪಶಾಲೆಗೆ ಹೋದ ಸಮಾಚಾರ ಸೈನ್ಯಕ್ಕೆ ತಿಳಿಯಲು ತಕ್ಕ ಸ್ಥಳಗಳಲ್ಲಿ ಸವಾರರನ್ನು ನಿಲ್ಲಿಸು. ನಂದರೊಡನೆ ಯುದ್ಧ ಮೊದಲಾದ ಕೂಡಲೇ ಜಯಭೇರಿಯನ್ನು ಹೊಡೆಯಿಸು. ಜಪಶಾಲೆಯಲ್ಲಿ ಉರಿ ಹೆಚ್ಚಿದುದನ್ನು ಕಂಡೊಡನೆಯೆ, ನಮ್ಮ ಸೇನೆ ನಂದರ ಸೇನೆಯ ಮೇಲೆ ಬಿದ್ದು ಅದನ್ನು ಬೆನ್ನಟ್ಟಲಿ. ಸೆನಾಪತಿಗಳು ಸಿದ್ಧರಾಗಿ ಕಾದಿರಲಿ.

ಅಲ್ಲಲ್ಲಿ ಗೂಢಚಾರರು ನಿಂತು ನಮಗೆ ಸಮಾಚಾರ ಕೊಡಲಿ' ಎಂದು ಅಪ್ಪಣೆಮಾಡಿದನು. ಚಾಣಕ್ಯನ ಅಪ್ಪಣೆಯಂತೆ ಎಲ್ಲ ಸಿದ್ಧತೆಗಳೂ ಆದುವು. ಅಂದಿನ ರಾತ್ರಿ ಚಾಣಕ್ಯನಿಗೆ ನಿದ್ದೆಯಿಲ್ಲ. ಈ ಸಿದ್ಧತೆಗಳು ಮುಗಿಯುವ ವೇಳೆಗೆ ಸರಿರಾತ್ರಿ ಮೀರಿತ್ತು. ನಿದ್ದೆಮಾಡಲು ಮನಸ್ಸಾಗದೆ ಚಾಣಕ್ಯನು ಸ್ನಾನಮಾಡಿ ಅಂದು ರಾಕ್ಷಸನಿಗೂ, ನಂದರಿಗೂ ಅಗಲಿಕೆಯಾಗಲೆಂದು ತನ್ನ ಕುಲದೇವರನ್ನು ಪ್ರಾರ್ಥಿಸಿದನು.

ರಾತ್ರಿ ಮೆಲ್ಲನೆ ಜಾರಿ ಬೆಳಗಾಯಿತು. ತಂಗಾಳಿ ಬೀಸಿ ಲೋಕವನ್ನು ಎಚ್ಚರಗೊಳಿಸಿತು. ಹಕ್ಕಿಗಳು ಇಂಪಾಗಿ ಹಾಡಿದುವು. ಚಂದ್ರಗುಪ್ತನ ಅಭ್ಯುದಯವನ್ನು ನೋಡಲೆಂಬಂತೆ ಪೂರ್ವದಿಕ್ಕಿನಲ್ಲಿ ಸೂರ್ಯನು ಉದಯಿಸಿದನು.

ಅಂದು ನಂದರ ಬಾಳಿನ ಕೊನೆಯ ದಿನ. ಆದರೆ ಅವರು ಅದನ್ನು ಅರಿಯರು. ಸ್ನಾನಾದಿಗಳನ್ನು ಮಾಡಿ, ಭೋಜನ ಮಾಡಿದರು. ನಿಯೋಗಿಯ ಮಾತು ನಂದರಿಗೆ ಸಮಾಧಾನ ತಂದಕಾರಣ ತಿರುಗಿ ಅವರು ಮಲಗಿಕೊಂಡರು. ನಿದ್ದೆ ಅವರನ್ನು ಮುತ್ತಿಟ್ಟು ಆಲಿಂಗಿಸಿತು. ಇತ್ತ ನಿಯೋಗಿಯ ಮಾತನ್ನು ಕೇಳಿ ಯುದ್ಧ ಮಾಡಲು ಸ್ವಲ್ಪ ಅವಕಾಶ ಉಂಟಾಯಿತೆಂದು ತಿಳಿದು, ರಾಕ್ಷಸನೂ ಎರಡು ದಿನ ನಿದ್ದೆಯಿರದಿದ್ದ ಕಾರಣ ಮಲಗಿಕೊಂಡನು. ದೈವವೇ ಚಾಣಕ್ಯನಿಗೆ ಸಹಾಯವಾಗಿ ನಿಂತು ಈ ಸಂಚು ನಡೆಸಿತು.

ನಂದರಿಗೆ ಎಚ್ಚರವಾಯಿತು. ಅವರಿಗೆ ರಾಜಕಾರ್ಯಗೌರವವಿರಲಿಲ್ಲವಾದಕಾರಣ ಕಾಲ ಕಳೆಯಲು ಪಗಡೆಯಾಡಬೇಕೆಂದು ನಿರ್ಧರಿಸಿದರು. ಆ ವೇಳೆಗೆ ಸರಿಯಾಗಿ ಜಪಶಾಲೆಯಿಂದ ಯಮದೂತರಂತೆ ಮಾಸೋಪವಾಸಿಯ ಶಿಷ್ಯರಿಬ್ಬರು ನಂದರಲ್ಲಿಗೆ ಬಂದು 'ಸ್ವಾಮಿ, ಜಪಶಾಲೆಯಲ್ಲಿ ಅನುಷ್ಠಾನ ಮಾಡುತ್ತಿರುವ ಮಾಸೋಪವಾಸಿ ಮಹಾಮುನಿಗಳ ಶಿಷ್ಯರು ನಾವು. ಇಂದು ಶುಕ್ರವಾರವಾದುದರಿಂದ ಹೋಮ ಮುಗಿಯುತ್ತಿದೆ. ಪೂರ್ಣಾಹುತಿಯ ಸಮಯದಲ್ಲಿಉಂಟಾಗುವ ದೇವತಾದರ್ಶನಕ್ಕೆ ಇದು ತಕ್ಕ ಕಾಲ. ನಮ್ಮ ಗುರುಗಳು ತಮ್ಮ ಬರುವಿಕೆಯನ್ನೇ ಎದುರು ನೋಡುತ್ತಿದ್ದಾರೆ. ಬೇಗ ದಯಮಾಡಿಸಬೇಕು' ಎಂದು ವಿನಯದಿಂದ ಬಿನ್ನೈಸಿದರು. ಹೋಮದರ್ಶನಕ್ಕೆ ಹೋಗಲು ನಿರ್ಧರಿಸಿ

ದೈವಬಲಹೀನರಾದ ನಂದರು, ಅಮಾತ್ಯರ ಸಮಯ ನೋಡಲು ದೂತರನ್ನು ಕಳುಹಿಸಿದರು. ರಾಕ್ಷಸನಿಗೆ ಬಹಳ ನಿದ್ರಾಭಾರವೆಂದು ತಿಳಿದು ಬಂತು. 'ಅಮಾತ್ಯರಿಗೆ ಅತಿಯಾಗಿ ಆಯಾಸವಾಗಿದೆ. ಅವರು ಸುಖವಾಗಿ ನಿದ್ರಿಸಲಿ. ನಾವೇ ಜಪಶಾಲೆಗೆ ಹೋಗೋಣ' ಎಂದುಕೊಂಡು ನಂದರೆಲ್ಲರೂ ಅಲಂಕೃತರಾಗಿ ಕುದುರೆಗಳನ್ನೇರಿದರು. ಜಪಶಾಲೆಯ ಬಳಿ ಶೂದ್ರಾದಿಗಳಿಗೆ ಅವಕಾಶವಿರದಿದ್ದ ಕಾರಣ, ಅವರ ವೈಗಾವಲಿನ ಸೇನೆ ಹಿಂದೆ ನಿಂತಿತು. ಬೆಂಬಲವಾಗಿ ಬಂದ ಭಾಗ್ಯಲಕ್ಷ್ಮಿಯನ್ನು ನಂದರೇ ನಿರಾಕರಿಸಿದಂತಾಯಿತು.

ಮುತ್ತಿನ ಸತ್ತಿಗೆಯ ನೆರಳಿನಲ್ಲಿ ಮಿತಪರಿವಾರದಿಂದ ನಂದರು ಜಪಶಾಲೆಯನ್ನು ಸಮೀಪಿಸಿ ಕುದುರೆಗಳನ್ನಿಳಿದು ಒಳಹೊಕ್ಕರು. ಅಷ್ಟರಲ್ಲೇ ಕಾಶೀಮಾರ್ಗದಲ್ಲಿ ಕಿವಿಯೊಡೆಯುವಂತೆ ಶಬ್ದ ಕೇಳಿ ಬಂತು. ಪರ್ವತರಾಜನಿಗೂ ಕಾಶೀರಾಜನಿಗೂ ಕಾಳಗ ನಡೆಯುತ್ತಿರಬಹುದೆಂದೆಣಿಸಿ ನಂದರು ಜಪಶಾಲೆಯಲ್ಲಿ ಹೋಮಕುಂಡವನ್ನು ಬಳಸಿ ಬಂದರು. ಆಗ ಚಾಣಕ್ಯನಿಂದ ನಿಯಮಿತರಾದ ಕಪಟದೂತರಿಬ್ಬರು ನಂದರಲ್ಲಿಗೆ ಬಂದು 'ಸ್ವಾಮಿ, ನಾವು ಕಾಶೀರಾಜನ ದೂತರು. ಮಲಯಕೇತು ಕಾಶೀರಾಜನಿಗೆ ಸೆರೆಸಿಕ್ಕಿದ್ದಾನೆ. ಪರ್ವತರಾಜನ ಸೇನೆ ತಮ್ಮ ಮೇಲೆ ಬಂದು ಕವಿಯದಂತೆ ನಿಮ್ಮ ಸಹಾಯವನ್ನು ದೊರೆ ಬಯಸುತ್ತಿದ್ದಾರೆ' ಎಂದರು. ನಂದರು ಈ ಮಾತನ್ನು ಕೇಳಿ ಸಂತೋಷದಿಂದ 'ಮಿತ್ರ ಕಾಶೀರಾಜನು ಕಾರ್ಯದಕ್ಷ. ಅವನಿಂದ ನಮಗೆ ಜಯಲಕ್ಷ್ಮಿ ಬಂದು ಕೈಸೇರಿದಳು. ಮಲಯಕೇತು ಸೆರೆಸಿಕ್ಕಿದುದರಿಂದ ಚಂದ್ರಗುಪ್ತನೇ ನಮ್ಮ ಕೈವಶವಾದಂತಾಯಿತು. ಈ ಮುನಿಗಳು ಮಹಾಮಹಿಮರು' ಎಂದುಕೊಂಡು ಪರ್ವತರಾಜನ ಸೇನೆಯನ್ನು ತಡೆಯುವಂತೆ ಭದ್ರಭಟಾದಿ ಸೇನಾಪತಿಗಳಿಗೂ ಇತರ ಸಾಮಂತರಾಜರಿಗೂ ಹೇಳಿ ಕಳುಹಿಸಿದರು. ಈಗ ನಂದರ ಬಳಿ ರಾಕ್ಷಸನಿಲ್ಲ, ವೈಗಾವಲಿನ ಜನರಿಲ್ಲ. ಸೇನಾಪತಿಗಳು ದೂರವಾದರು. ನಂದರಿಗೆ ದೈವದೊಲುಮೆ ತಪ್ಪಿತು. ನಂದರ ನಿಗ್ರಹಕ್ಕೆ ಚಾಣಕ್ಯನ ಮಾರ್ಗ ಸುಗಮವಾಯಿತು.

ಭದ್ರಭಟಾದಿಗಳು ನಂದರಿಗೆ ದೂರವಾದುದನ್ನರಿತು ಶೇಖರನ ಯೋಧರು ಕಪಟಮಲಯಕೇತುವನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಅದಕ್ಕೆ

ಮುಸುಕಿಟ್ಟು ನಂದರ ಬಳಿಗೆ ಅದನ್ನು ತರಲು ತೊಡಗಿದರು. ಪಲ್ಲಕ್ಕಿಯ ಸುತ್ತಲೂ ಹಿರಿದ ಕತ್ತಿಯುಳ್ಳ ಯೋಧರ ಕಾವಲು ಬಲವಾಗಿತ್ತು. ನಂದರ ಗೂಡಾರದ ಬಳಿ ಪಲ್ಲಕ್ಕಿಯು ಬರಲು, ಮಲಯಕೇತುವನ್ನು ನೋಡುವ ಕುತೂಹಲದಿಂದ ಆ ಗೂಡಾರವನ್ನು ಕಾಯುತ್ತಿದ್ದ ದಳಪತಿ ಪಲ್ಲಕ್ಕಿಯ ಬಳಿಗೆ ಬಂದನು. ಉಳಿದ ಸೇನಾಜನರೂ ತಮ್ಮ ಆಯುಧಗಳನ್ನು ತಾವಿದ್ದಲ್ಲಿಯೇ ಬಿಟ್ಟು ಪಲ್ಲಕ್ಕಿಯ ಸುತ್ತಲೂ ನೆರೆದರು. ಗೂಡಾರದ ಕಾವಲಿನವರು ನಿರಾಯುಧರಾಗಿ ಬರುತ್ತಿರುವುದನ್ನು ಕಂಡು, ಪಲ್ಲಕ್ಕಿಯ ರಕ್ಷಕನು ' ಜನರೆಲ್ಲ ಒಟ್ಟಿಗೆ ಬಂದು ಸೇರಲಿ. ಮಲಯಕೇತುವನ್ನು ನೋಡುವ ಕುತೂಹಲವಿದ್ದರೆ ತೋರಿಸುವೆವು ' ಎಂದು ಹೇಳುತ್ತ ಜನರ ಗುಂಪು ಸೇರಲು ಪಲ್ಲಕ್ಕಿಯ ಮುಸುಕನ್ನು ಸ್ವಲ್ಪ ಸ್ವಲ್ಪವಾಗಿ ಓರೆಮಾಡಿ ಒಳಗಿದ್ದ ಪುರುಷನನ್ನು ಈತನೇ ಮಲಯಕೇತುವೆಂದು ತೋರಿಸುತ್ತ ಪಲ್ಲಕ್ಕಿಯನ್ನು ಮುಂದೆ ಸಾಗಿಸಿದನು. ಇತ್ತ ನಂದರ ಸೇನೆ ದಳಪತಿಯೊಡನೆ ಗೂಡಾರದ ಚಿಂತೆಯನ್ನು ಬಿಟ್ಟು ಕಪಟಮಲಯಕೇತುವನ್ನು ನೋಡಿ ಆಶ್ಚರ್ಯಪಡುತ್ತ ಮನಸ್ಸಿಗೆ ಬಂದಂತೆ ಮಾತನಾಡಿಕೊಳ್ಳುತ್ತಿದ್ದರು. ಇದೆಲ್ಲವನ್ನು ನೋಡುತ್ತ ಪಲ್ಲಕ್ಕಿಯ ಹಿಂದೆ ಬರುತ್ತಿದ್ದ ಪರ್ವತರಾಜನ ಸೇನೆ ನಂದರ ಗೂಡಾರವನ್ನು ಸೂರೆಮಾಡಿ ಅಲ್ಲಿದ್ದ ಆಯುಧಗಳಲ್ಲಿ ತಮಗೆ ಬೇಕಾದುವನ್ನು ತೆಗೆದುಕೊಂಡು ಉಳಿದುವನ್ನು ಕಂದಕದಲ್ಲಿ ಬಿಸುಟರು. ಗೂಡಾರದ ಕಾವಲಿನವರು ತಮ್ಮ ಸ್ಥಳಗಳಿಗೆ ಹಿಂದಿರುಗಿ ಬರುತ್ತಿರುವಾಗ, ಪಲ್ಲಕ್ಕಿಯ ರಕ್ಷಣೆಗಾಗಿ ನಿಯಮಿತರಾಗಿದ್ದ ಯೋಧರು ಅವರನ್ನು ಸಂಹರಿಸಿದರು. ನಂದರಿಗೆ ಈ ಘಟನೆಗಳ ಅರಿವೇ ಇರಲಿಲ್ಲ. ಈ ವೇಳೆಗೆ ಪಲ್ಲಕ್ಕಿಯನ್ನು ಜಪಶಾಲೆಯಲ್ಲಿದ್ದ ನಂದರ ಬಳಿಗೆ ತಂದಿಳುಹಲು, ನಂದರು ಒಳಗಿದ್ದವನು ಮಲಯಕೇತುವೆಂದೇ ಬಗೆದು ' ಮಲಯಕೇತು, ಬುದ್ಧಿಹೀನನಾಗಿ ಈ ತೆರನಾದ ಕೆಲಸಮಾಡಿ ನಮ್ಮ ಕೈಸೆರೆ ಸಿಕ್ಕಬಹುದೇ ? ' ಎಂದು ಕೇಳಿದರು.

ಕಪಟಮಲಯಕೇತು—ನಮ್ಮ ತಂದೆ ದರಿದ್ರನಾದ ಚಂದ್ರಗುಪ್ತನ ಕೈ ಹಿಡಿದುದರಿಂದ ನನಗೆ ಈ ಗತಿ ಬಂತು. ಈಗ ನಿಮ್ಮ ವಶವಾದ ಬಳಿಕ ಹೆಚ್ಚು ನುಡಿದು ಫಲವೇನು ?

ನಂದರು—ರಾಜಕುಮಾರ, ಆದದ್ದು ಆಯಿತು. ಅದಕ್ಕಾಗಿ ದುಃಖಪಟ್ಟು ಫಲವಿಲ್ಲ. ಈಗಲಾದರೂ ನಿಮ್ಮ ತಂದೆ ಚಂದ್ರಗುಪ್ತ ನನ್ನು ನಮಗೊಪ್ಪಿಸಲಿ. ನಿನಗೆ ಬಿಡುಗಡೆಯಾಗುವುದು.

ಕಪಟಮಲಯಕೇತು—ಸತ್ಯವಂತನಾದ ನಮ್ಮ ತಂದೆ ಹಿಡಿದ ಕೆಲಸವನ್ನು ಪೂರ್ತಿಗೊಳಿಸಲು ನನ್ನನ್ನು ಬಿಡಬಹುದು. ಆದರೆ ಮರೆ ಹೊಕ್ಕವನನ್ನು ಖಂಡಿತ ಬಿಟ್ಟುಕೊಡಲಾರ.

ನಂದರು—ಹುಚ್ಚ, ಮಗನಿಗಿಂತಲೂ ಚಂದ್ರಗುಪ್ತನು ಹೆಚ್ಚೇ? ಹಿಡಿದ ಕಾರ್ಯವೆಂದರೇನು? ಹೊರಗೆ ಬಂದು ಮಾತನಾಡು.

ಕಪಟಮಲಯಕೇತು—ನಿಮಗೆ ಸೆರೆಸಿಕ್ಕಿರುವ ನಾನು ನಾಚಿಕೆ ಯಿಲ್ಲದೆ ಹೊರಗೆ ಬಂದು ನೆರೆದ ಜನರಿಗೆ ಹೇಗೆ ಮುಖ ತೋರಿಸಲಿ?

ಈ ವೇಳೆಗೆ ಸರಿಯಾಗಿ ಪರ್ವತರಾಜನ ಸೇನೆ ಬಂದು ನಂದರನ್ನು ಸುತ್ತುಗಟ್ಟಿ ನಿಂತಿತು. ಈ ಸೂಚನೆಯನ್ನು ತಿಳಿದ ಕಪಟಮಲಯ ಕೇತು ಮುಸುಕನ್ನು ತೆಗೆದು ಹಿರಿದ ಕತ್ತಿಯನ್ನು ಹಿಡಿದು ಪಲ್ಲಕ್ಕಿಯಿಂದ ಹೊರಗೆ ಬಂದನು. ಮುಖವೈವರ್ಣ್ಯವಿಲ್ಲದೆ ನೆರೆದಿದ್ದ ಜನರನ್ನು ನೋಡಿ ನಗುತ್ತಿದ್ದ ಇವನನ್ನು ಕಂಡು ನಂದರಿಗೆ ಭಯವಾಯಿತು. ಕಣ್ಣರಳಿಸಿ ಸುತ್ತಲೂ ನೋಡುತ್ತಾರೆ! ತಮ್ಮ ಬಳಿ ಇರುವ ಪರಿವಾರ ಸ್ವಲ್ಪ. ವೈರಿಬಲ ತಮ್ಮ ಸುತ್ತಲೂ ದಟ್ಟವಾಗಿ ನಿಂತಿದೆ. ತಪ್ಪಿಸಿ ಕೊಳ್ಳಲು ಮಾರ್ಗವಿಲ್ಲ. ಹಿರಿಯರ ಮಾತನ್ನು ಕೇಳದಿದ್ದದ್ದು ಅವಿವೇಕ ವಾಯಿತೆಂದುಕೊಂಡರು. ಅವರ ಮಾತಿನಂತೆ ವೈಗಾವಲಿನವರು ಹಿಂದುಳಿದರು. ಭದ್ರಭಟಾದಿಗಳು ದೂರವಾದರು. ಈಗ ಯುದ್ಧ ಮಾಡಲೇಬೇಕು. 'ಸತ್ತರೆ ಸ್ವರ್ಗ, ಗೆದ್ದರೆ ಸಾರ್ವಭೌಮಪದವಿ' ಎಂದುಕೊಂಡು ಕತ್ತಿಯನ್ನು ಹಿಡಿದು, ಯುದ್ಧಮಾಡುವುದಕ್ಕಾಗಿ ಕುದುರೆಗಳನ್ನೇರಲು ಸಿದ್ಧರಾದರು. ಅಷ್ಟರಲ್ಲೇ ವೈರಿಗಳು ನಂದರ ಕುದುರೆಗಳ ಕಾಲುಗಳನ್ನು ಕತ್ತರಿಸಿ, ಜಪಶಾಲೆಯಲ್ಲಿದ್ದ ಬ್ರಾಹ್ಮಣರನ್ನು ಓಡಿಸಿ, ಹೋಮಕುಂಡದ ಬೆಂಕಿಯಿಂದಲೇ ಜಪಶಾಲೆಯನ್ನು ಹೊತ್ತಿಸಿ ದರು. ತಾನು ಬಂದ ಕೆಲಸವಾದುದರಿಂದ, ಮಾಸೋಪವಾಸಿ ನಂದರಿಗೆ ಕೆಲವು ಚುಚ್ಚುಮಾತುಗಳನ್ನಾಡಿ ಚಾಣಕ್ಯನಿದ್ದಲ್ಲಿಗೆ ಹೊರಟು ಹೋದನು.

ನಂದರು ವೀರಾವೇಶದಿಂದ ಹೋರಾಡಿದರು. ಶೇಖರನ ಸೇನೆ ಜಪಶಾಲೆ ಬೆಳಕಾದುದುನ್ನು ಕಂಡು ನಂದರಿಗೆ ಸಹಾಯ ಬಂದೊದಗ ದಂತೆ ಅವರನ್ನು ಬಳಿಸಿ ನಿಂತಿತು. ಕಪಟವಮಲಯಕೇತು, ಶಬರ ವರ್ಮ—ಇವರೆಲ್ಲ ಒಬ್ಬೊಬ್ಬರಾಗಿ ನಂದರ ಕತ್ತಿಗೆ ಬಲಿಯಾದರು. ಶೇಖರನ ಸೇನೆ ಎಷ್ಟು ಕಾದಿದರೂ, ನಂದರ ಬಲ ಕುಗ್ಗುವಂತೆ ಕಾಣ ಲಿಲ್ಲ. ಯುದ್ಧಭೂಮಿಯಲ್ಲಿ ಎಲ್ಲೆಲ್ಲಿಯೂ ನಂದರೇ ಕಂಡು ಬಂದರು. ಅವರ ಕೈಚಳಕಕ್ಕೆ ಪರ್ವತರಾಜನ ಸೇನೆ ದಾರಿ ಕಾಣದೆ ಸುಮ್ಮನೆ ನಿಂತುಬಿಟ್ಟಿತು. ಈ ಸಮಾಚಾರವನ್ನು ಕೇಳಿ ಚಾಣಕ್ಯನು ಕೋಪ ಗೊಂಡು, ಉತ್ತರೀಯವನ್ನು ನಡುವಿಗೆ ಕಟ್ಟಿ, ಯಜ್ಞೋಪವೀತವನ್ನು ಕಿವಿಗೆ ಸುತ್ತಿ, ದಂಡವನ್ನು ಹಿಡಿದು, ಎಲ್ಲರನ್ನೂ ಹೇಡಿಗಳೆಂದು ಜರೆ ಯುತ್ತ ನಂದರನ್ನು ನಿಗ್ರಹಿಸಲು ತಾನೇ ಯುದ್ಧಭೂಮಿಗೆ ಬಂದನು. ಚಾಣಕ್ಯನ ಮಾತಿನಿಂದ ನಾಚಿಕೆಗೊಂಡ ಸೇನಾಪತಿಗಳು ಇಮ್ಮಡಿ ಯಾದ ಉತ್ಸಾಹದಿಂದ ಹೋರಾಡಿದರು. ಹೆಚ್ಚು ಮಾತಿನಿಂದೇನು? ನಂದರು ಏಕಾಂಗಿಗಳಾಗಿ ಎಷ್ಟು ಹೊತ್ತು ಹೋರಾಡಲು ಸಾಧ್ಯ? ಚಂದ್ರಗುಪ್ತನಿಂದ ಆರು ಮಂದಿ ನಂದರು ಹತರಾದರು. ಚಾಣಕ್ಯನ ಮಾತಿನಂತೆ ಉಳಿದ ಮೂವರ ಕತ್ತಿಗೆ ಹಗ್ಗವನ್ನು ಬೀರಿ ಶೇಖರನು ಅವರನ್ನು ಸಂಹರಿಸಿದನು. ಇದೆಲ್ಲವನ್ನೂ ನೋಡುತ್ತಿದ್ದ ಪರ್ವತ ರಾಜನಿಗೆ ಚಾಣಕ್ಯನ ಸಾಹಸವನ್ನು ಕಂಡು ಭಯವಾಯಿತು; ನಂದರು ಮರಣ ಹೊಂದಿದುದಕ್ಕೆ ಸಂತೋಷವೂ ಆಯಿತು. ತುಂಬಿದ ಸಭೆ ಯಲ್ಲಿ ತನ್ನನ್ನು ಅವಮಾನಪಡಿಸಿದ ನಂದರನ್ನು ಕೊಂದು ಚಾಣಕ್ಯನು ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಂಡನು. ಚಂದ್ರಗುಪ್ತನ ಹಗೆ ಹರಿಯಿತು. ಜಯಭೇರಿಯ ಶಬ್ದ ಹತ್ತು ದಿಕ್ಕುಗಳನ್ನೂ ಮುಸುಕಿತು.

ನಂದರ ಮರಣಾನಂತರ ಚಾಣಕ್ಯನು ಗಂಗಾಜಲದಲ್ಲಿ ಸ್ನಾನ ಮಾಡಿ ಬಿಚ್ಚಿದ್ದ ತನ್ನ ಶಿಖೆಯನ್ನು ಬಂಧಿಸಿ ಚಂದ್ರಗುಪ್ತನೊಡನೆ ಬೀಡಾರಕ್ಕೆ ಬಂದನು.

ಇತ್ತ ರಾಕ್ಷಸನು ನಿದ್ದೆಯಿಂದ ಇನ್ನೂ ಎಚ್ಚರಗೊಂಡಿರಲಿಲ್ಲ. ರಾಕ್ಷಸನ ದೂತರು ನಂದರ ಗೂಡಾರ ಸೂರೆಹೋಗಿ ಸರ್ವನಾಶವಾದು ದನ್ನು ಕಂಡು ರಾಕ್ಷಸನನ್ನು ತಟ್ಟಿ, ಎಬ್ಬಿಸಿ ನಡೆದ ವಿಷಯವನ್ನು

ತಿಳಿಸಿದರು. ವೈಗಾವಲಿನ ನಷ್ಟ, ಜಪಶಾಲೆ ಬೆಂದದ್ದು, ಭದ್ರ ಭಟಾದಿಗಳು ರಾಜರಿಂದ ದೂರವಾದದ್ದು, ಗೂಡಾರದ ಸೂರೆ—ಇವೆಲ್ಲ ವನ್ನೂ ಕೇಳಿ ರಾಕ್ಷಸನು ಕ್ಷಣಕಾಲ ದಿಕ್ಕುತೋರದವನಂತೆ ಸುಮ್ಮ ನಿದ್ದನು. ಅವನ ಕಣ್ಣುಗಳಲ್ಲಿ ನೀರು ತುಂಬಿತು. ನಂದರ ಬಿಡುಗಡೆಗೆ ಸಿದ್ಧನಾಗಿ ಹೊರಡಲು, ಅಷ್ಟರಲ್ಲೇ ಜಯಭೇರಿಯ ಶಬ್ದ ಕೇಳಿ ಬಂತು. ನಂದರು ಸತ್ತು ಸ್ವರ್ಗ ಸೇರಿದರೆಂದು ರಾಕ್ಷಸನಿಗೆ ಮನದಟ್ಟಾಯಿತು.

ಸ್ವಾಮಿಭಕ್ತನಾದ ತಾನು ನಂದರ ಸಹಾಯಕ್ಕಾದರೂ ಹೋಗ ಬೇಕೆನ್ನಿಸಿತು ರಾಕ್ಷಸನಿಗೆ. ಅಂಥ ಪ್ರಭುಗಳೇ ಸತ್ತಮೇಲೆ ತಾನು ಬದುಕಿದ್ದು ಏನು ಫಲ? ಹೀಗೆ ಅಮಾತ್ಯನು ಚಿಂತಿಸಿ, ಕುದುರೆಯ ನ್ನೇರಿ ಯುದ್ಧರಂಗದ ಕಡೆಗೆ ಹೊರಡುವುದಕ್ಕೆ ಅಣಿಯಾಗಲು, ಆತನ ಮೈಗಾವಲಿನವನಾದ ವಿನತನು ಸ್ವಾಮಿಯನ್ನು ತಡೆದು 'ಅಮಾತ್ಯರೇ, ನನ್ನದೊಂದು ಬಿನ್ನಹ. ನಂದರನ್ನು ಈಗ ದೈವ ತನ್ನಡೆಗೆ ಸೆಳೆದು ಕೊಂಡಿದೆ. ಈ ಸಮಯದಲ್ಲಿ ನೀವು ದುಡುಕಿ ಪ್ರಾಣ ಕಳೆದುಕೊಂಡರೆ ಏನು ಪ್ರಯೋಜನ? ಈಗ ಮೊದಲು ಮಹಾರಾಜನ ಮತ್ತು ಅಂತಃ ಪುರದ ಹೆಂಗಸರ ರಕ್ಷಣೆ ಆಗಬೇಕು. ಈ ಕೆಲಸ ನಿಮ್ಮಿಂದ ಮಾತ್ರ ಸಾಧ್ಯ. ನೀವು ಬದುಕಿದ್ದರೆ ಉಪಾಯದಿಂದ ವೈರಿಯನ್ನು ನಾಶಮಾಡಿ ಸತ್ತ ಪ್ರಭುಗಳಿಗೆ ಸಂತೋಷವನ್ನುಂಟುಮಾಡಬಹುದು. ಅಲ್ಲದೆ ಯುದ್ಧದಲ್ಲಿ ಪ್ರಾಣವನ್ನು ಬಿಡುವುದು ಬ್ರಾಹ್ಮಣನ ಧರ್ಮವಲ್ಲ' ಎಂದನು. ಮುಂದಿನ ದಾರಿಯನ್ನು ಕಾಣದೆ ರಾಕ್ಷಸನು ಸುಮ್ಮನೆ ನಿಂತುಬಿಟ್ಟನು. ಆತನ ಪ್ರಯತ್ನವೆಲ್ಲ ಕೊನೆಗಂಡಂತೆ ತೋರಿತು.

ನಂದರು ಸತ್ತ ಸಮಾಚಾರ ಸರ್ವಾರ್ಥಸಿದ್ಧಿರಾಯನಿಗೆ ತಿಳಿಯಲು ಪುತ್ರಶೋಕದಿಂದ ಮುದುಕನ ಎದೆ ಬಿರಿಯಿತು. ಅಂತಃಪುರದ ಹೆಂಗ ಸರು ಕಣ್ಣೀರಿನ ಕೋಡಿಯನ್ನೇ ಸುರಿಸಿದರು. ಗಂಡನನ್ನು ಹಿಂಬಾಲಿ ಸುವುದು ಹೆಂಡತಿಯ ಧರ್ಮ. ನಂದರ ಹೆಂಡಿರಿಗೆ ಈಗ ಸಹಗಮನವೇ ಮುಂದಿನ ಮಾರ್ಗವೆಂದು ತೋರಿತು. ನಂದರ ದೇಹ ಜಪಶಾಲೆಯ ಬೆಂಕಿಯಲ್ಲಿ ಈಗಾಗಲೇ ಸುಟ್ಟು ಬೂದಿಯಾಗಿದ್ದುವು. ಆದಕಾರಣ ಭಾಗುರಾಯಣನಿಂದ ತಮ್ಮ ಗಂಡಂದಿರ ತಲೆಗಳನ್ನು ತರಿಸಿಕೊಂಡು, ಬ್ರಾಹ್ಮಣರಿಗೆ ದಾನಧರ್ಮಗಳನ್ನು ಮಾಡಿ ಅವರು ಚಿತೆಯನ್ನೇರಿದರು.

ಈಗ ನಂದರ ಕಡೆ ಉಳಿದವರು ಇನ್ನಿಬ್ಬರು—ಸ್ವಾಮಿಭಕ್ತ ಅಮಾತ್ಯ ರಾಕ್ಷಸ, ಮಕ್ಕಳನ್ನು ನೀಗಿಕೊಂಡ ವೃದ್ಧ ದಂಪತಿಗಳು.

ಇತ್ತ ರಾಕ್ಷಸನು ಭಾಗುರಾಯಣನನ್ನು ಕರೆಸಿಕೊಂಡು ‘ ಇಂದು ನಂದರ ಮರಣದಿಂದ ನಮ್ಮ ಬುದ್ಧಿ ಪೌರುಷಗಳು ನಷ್ಟವಾದುವು. ಮುಂದೆ ನಾವು ಮಾಡಬೇಕಾದ ಕಾರ್ಯವೇನು? ಪಟ್ಟಣವನ್ನು ಕಾಪಾಡುವ ಬಗೆ ಹೇಗೆ? ’ ಎಂದು ಕೇಳಿದನು. ಅಂತಃಪುರದ ಹೆಂಗಸರ ಮಾನವನ್ನು ಕಾಪಾಡುವುದರ ಸಲುವಾಗಿ ಪಟ್ಟಣದ ಬೀಗಮುದ್ರೆಗಳನ್ನು ಚಂದ್ರಗುಪ್ತನಿಗೊಪ್ಪಿಸಿ, ಆತನನ್ನು ಪ್ರಭುವೆಂದು ಕರೆತರುವುದೇ ಲೇಸೆಂದು ಸೇನಾಪತಿ ಸೂಚಿಸಿದನು. ಭಾಗುರಾಯಣನಿಗೆ ಯುದ್ಧದಲ್ಲಿ ಮನಸ್ಸಿಲ್ಲದಿರುವುದನ್ನರಿತು ರಾಕ್ಷಸನು ಅವನ ಮಾತಿಗೊಪ್ಪಿಕೊಳ್ಳಬೇಕಾಯಿತು ಮಾರನೆಯ ದಿನ ಸಿದ್ಧಾರ್ಥಕನ ಮಾತಿನಂತೆ ಭಾಗುರಾಯಣನು ಚಂದ್ರಗುಪ್ತನನ್ನು ತಾನೇ ಹೋಗಿ ನೋಡದೆ ತನ್ನ ತಮ್ಮನೊಡನೆ ಅವನಿಗೆ ಬೀಗಮುದ್ರೆಗಳನ್ನು ಕಳುಹಿಸಿದನು. ಪಟ್ಟಣ ವೈರಿಗಳಿಗೆ ಸುಲಭವಾಗಿ ವಶವಾಯಿತು. ಇಂದಿಗೆ ನಂದರ ರಾಜ್ಯಲಕ್ಷ್ಮಿ ಸುಲಭವಾಗಿ ಚಂದ್ರಗುಪ್ತನ ಕೈವಶಳಾದಳು. ಇನ್ನು ಮುಂದಿನ ಕಾರ್ಯ ಅವಳನ್ನು ಧ್ರುವಜಲದಲ್ಲಿ ನಟ್ಟ ತಾವರೆಯಂತೆ ಸ್ಥಿರಪಡಿಸುವುದು.

## ೧೭. ಕಂಟಕ ನಿವಾರಣೆ

ನಂದರ ಮರಣದಿಂದ ಪಾಟಲೀಪುರದ ಸಿಂಹಾಸನ ಚಂದ್ರಗುಪ್ತನದಾಯಿತು. ಈಗ ಅದನ್ನು ಭದ್ರಪಡಿಸುವ ಯತ್ನ ಮಾಡಬೇಕು. ಇಲ್ಲದಿದ್ದರೆ ಚಾಣಕ್ಯನೊಡನೆ ಚಂದ್ರಗುಪ್ತನಿಗೆ ವನವಾಸವೇ ಗತಿ. ಚಂದ್ರಗುಪ್ತನಿಗೆ ಒದಗಬಹುದಾದ ಕಂಟಕಗಳನ್ನು ತೊಡೆದುಹಾಕಲು ಚಾಣಕ್ಯನು ಈ ರೀತಿ ಯೋಚಿಸಿದನು. ‘ ರಾಕ್ಷಸನು ಸ್ವಾಮಿಭಕ್ತ. ನಂದರು ಮಡಿದರೂ ಅವನ ಸ್ವಾಮಿಭಕ್ತಿ ಎಳ್ಳಷ್ಟೂ ಕುಗ್ಗಿಲ್ಲ. ಈಗ ಚಂದ್ರಗುಪ್ತನನ್ನು ಕಂಡರೆ ಅವನಿಗಾಗದು. ಚಂದ್ರಗುಪ್ತನನ್ನು ನಾಶಪಡಿಸಬೇಕೆಂದು ನಂದರ ತಂದೆಯಾದ ಸರ್ವಾರ್ಥಸಿದ್ಧಿರಾಯನಿಗೆ ದತ್ತು ಮಗನನ್ನುಂಟುಮಾಡಿ ನಂದವಂಶವನ್ನು ಮುಂದುವರಿಸುವ

ಯೋಚನೆಯನ್ನು ಅವನು ಮಾಡಬಹುದು. ಇದಕ್ಕೆ ಅವಕಾಶ ಕೊಡದೆ ಮೊದಲು ಸರ್ವಾರ್ಥಸಿದ್ಧಿರಾಯನನ್ನು ಸಂಹರಿಸಬೇಕು. ಇದಾದಮೇಲೆ ಮಂತ್ರಶಕ್ತಿಯಿಂದ ಹಾವನ್ನು ಸೆರೆಹಿಡಿಯುವಂತೆ ರಾಕ್ಷಸನನ್ನು ಹಿಡಿದುತಂದು ಮಂತ್ರಿಪದವಿಯಲ್ಲಿ ನಿಲ್ಲಿಸಬೇಕು. ಆಗ ಚಿಂತೆಯಿಲ್ಲದೆ ನಾನು ತಪೋವನಕ್ಕೆ ಹೋಗಬಹುದು. ರಾಕ್ಷಸನು ಹೊರಗಿದ್ದರೆ ಇಮ್ಮಡಿಯಾದ ನಷ್ಟ. ಒಳಗೆ ಬಂದರೆ ಇಮ್ಮಡಿಯಾದ ಲಾಭ. ಅವನಿಂದಲೇ ಚಂದ್ರಗುಪ್ತನ ರಾಜ್ಯ ಭದ್ರ. ಎರಡನೆಯದಾಗಿ ಯುದ್ಧ ಮುಗಿದಿರುವ ಈ ವೇಳೆಯಲ್ಲಿ ಪರ್ವತರಾಜನು ಚಂದ್ರಗುಪ್ತನ ಅರ್ಧರಾಜ್ಯಕ್ಕಾಗಿ ಈ ಪುರದಲ್ಲೇ ಚಾತಕಪಕ್ಷಿಯಂತೆ ಬಾಯಿಬಿಟ್ಟು ಕೊಂಡು ಕಾದು ಕುಳಿತಿದ್ದಾನೆ. ಪರ್ವತರಾಜ ಕೃತಘ್ನ. ಅಲ್ಪ ಲಾಭದ ಆಸೆಗಾಗಿ ಚಂದ್ರಗುಪ್ತನನ್ನು ಹಗೆಗೆ ಒಪ್ಪಿಸಬೇಕೆಂದಿದ್ದ. ಮುಳ್ಳಿನಿಂದ ಮುಳ್ಳನ್ನು ತೆಗೆಯುವಂತೆ ಉಪಾಯದಿಂದ ಅವನನ್ನು ಕೊಲ್ಲಿಸಬೇಕು. ಈಗ ಮೊದಲು ಶೇಖರನ ಸೇನೆಯನ್ನು ಇಲ್ಲಿಂದ ಹೊರಡಿಸಬೇಕು.'

ಬೇಟೆಗಾರನು ಬಲೆ ಬೀಸಿದನು. ಮಂಗಳಸ್ನಾನವಾದನಂತರ ಚಂದ್ರಗುಪ್ತನು ಚಾಣಕ್ಯನ ಅಪ್ಪಣೆಯಂತೆ ಅಜ್ಜನನ್ನು ಬಂದುಕಂಡು ನಮಸ್ಕರಿಸಿದನು. ಚಂದ್ರಗುಪ್ತನನ್ನು ಕಂಡೊಡನೆಯೇ ಮಕ್ಕಳ ಸಾವನ್ನು ನೆನೆದು ಮುದುಕನ ಕಣ್ಣುಗಳು ಹನಿಗೂಡಿದುವು. ಚಂದ್ರ ಗುಪ್ತನು ಮಹಾರಾಜನ ಮೊಮ್ಮಗ; ನಿಜ. ನಂದರು ಮೌರ್ಯರಿಗೆ ದ್ರೋಹವನ್ನು ಬಗೆದರು. ಅದಕ್ಕೆ ತಕ್ಕ ಗತಿ ಅವರಿಗಾಯಿತು. ಹಿಂದೆ ನಡೆದುದೆಲ್ಲಾ ಈಗ ಕನಸಿನ ಮಾತು. ಮಹಾರಾಜನ ಕಣ್ಣೆದುರಿಗೇ ಮಕ್ಕಳು ಮೊಮ್ಮಕ್ಕಳು ಸತ್ತರು. ಮುದುಕನಿಗೆ ಮುಪ್ಪಿನಲ್ಲಿ ಮೇಲಿಂದ ಮೇಲೆ ದುಃಖ ಬಂದೊದಗಿತು. ಈಗ ಆತನು ದುಃಖದಲ್ಲಿ ಶಾಂತಿ ಯನ್ನರಸಬೇಕು. ರಾಜನು ಚಂದ್ರಗುಪ್ತನಿಗೆ 'ವತ್ಸ, ರಾಜಧಾನಿ ನನಗೆ ಬೇಸರವಾಗಿದೆ. ಆದ್ದರಿಂದ ನಾನು ತಪೋವನಕ್ಕೆ ಹೋಗುವೆನು. ಕುಲದ ಹೆಸರನ್ನು ಹೇಳಲು ನೀನೊಬ್ಬನುಳಿದಿರುವೆ. ದೇವರು ನಿನ್ನನ್ನು ಸುಖವಾಗಿಟ್ಟಿರಲಿ. ಅಂತಃಪುರದ ಹೆಂಗಸರನ್ನು ಒಡಹುಟ್ಟಿದವರಂತೆ ಕಾಣು. ಅಷ್ಟೇ ನನ್ನ ಕೋರಿಕೆ' ಎಂದನು. ಮುದುಕನ ಮಾತಿಗೆ

ಚಂದ್ರಗುಪ್ತನು ಕಣ್ಣೀರುತುಂಬಿ ಹೇಳಿದನು ; ' ತಾತ, ನಾನು ನಿಮ್ಮ ಸೇವೆಮಾಡಿ ಕಾಲಕಳೆಯಬೇಕೆಂದಿದ್ದೆ. ಈಗ ಆ ಬಯಕೆ ಬರಿದಾಯಿತು. ನೀವು ತಪೋವನಕ್ಕೆ ತೆರಳಿದರೆ ನನಗೆ ಗತಿ ಯಾರು ?' ಮಹಾರಾಜನು ಮೊಮ್ಮಗನಿಗೆ ಸಮಾಧಾನ ಹೇಳಿದನು. ಮಹಾರಾಜನನ್ನು ರಾಜಧಾನಿಯಲ್ಲಿ ನಿಲ್ಲಿಸಲು ಚಂದ್ರಗುಪ್ತನು ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ಚಾಣಕ್ಯನು ಬಯಸಿದ್ದು ಮಹಾರಾಜನ ತಪೋವನ ಗಮನವನ್ನೇ.

ಶೂರರಾದ ಮಕ್ಕಳನ್ನು ಕಳೆದುಕೊಂಡು, ನೀಚನಾದ ಚಂದ್ರಗುಪ್ತನ ಕೈಕೂಳಿಗಾಗಿ ಕಾಯುವುದು ತಕ್ಕುದಲ್ಲವೆಂದರಿತು, ರಾಜನು ರಾಣಿಯೊಡನೆ ಗಂಗಾತೀರದ ತಪೋವನಕ್ಕೆ ಅರಮನೆಯ ಸುರಂಗ ಮಾರ್ಗದಿಂದ ಹೊರಟನು. ತಪೋವನ ಹತ್ತಿರವಾದಂತೆಲ್ಲ ರಾಜನ ಪುತ್ರಶೋಕ ಕಡಮೆಯಾಗಿ, ಮನಸ್ಸು ಹಗುರವಾಗುತ್ತ ಬಂತು. ತಪೋವನದ ಮಹಿಮೆಯೇ ಅಂಥದು! ಏಕೆಂದರೆ ಶಾಂತಿಯ ತೌರೂರು ತಪೋವನ. ಅಲ್ಲಿ ಕಾಡುಬತ್ತವನ್ನು ತಿಂದು ಆಶ್ರಮದ ಮಕ್ಕಳಂತೆ ಬೆಳೆದ ಹುಲ್ಲೆಗಳು ಹೆದರಿಕೆಯಿಲ್ಲದೆ ಹಸುರಿನ ಮೇಲೆ ಹಾಯಾಗಿ ಮಲಗಿದ್ದುವು. ಒಂದು ಕಡೆ ಋಷಿ ಕನ್ಯೆಯರು ಗಿಡಗಳ ಪಾತಿಗಳಿಗೆ ನೀರೆರೆಯುತ್ತಿದ್ದರು. ಹಕ್ಕಿಗಳು ಆತುರದಿಂದ ಓಡಿಬಂದು ಭೀತಿಯಿಲ್ಲದೆ ಆ ನೀರನ್ನು ಕುಡಿಯುತ್ತಿದ್ದುವು. ರಾಜನು ಆಶ್ರಮದ ಹತ್ತಿರಕ್ಕೆ ಬರಲು ಸುವಾಸನೆಯಿಂದ ಕೂಡಿದ ಹೋಮಧೂಮ ಗಾಳಿಯಿಂದ ಮುರಿಹೋಗಿ ಇವರನ್ನು ಮುಟ್ಟಿ ಬಂದು ಪವಿತ್ರರನ್ನಾಗಿ ಮಾಡಿತು. ಆಶ್ರಮದ ಬಳಿಯಲ್ಲಿಯೇ ರಾಜನು ತನ್ನ ಪರಿವಾರದೊಡನೆ-ರಾಣಿ ಚೇಟಿ, ಬೀಸಣಿಗೆಯವನು, ಇಷ್ಟೇ ಅವನ ಪರಿವಾರ—ಒಂದು ಗುಡಿಸಲನ್ನು ಕಟ್ಟಿಕೊಂಡು ಇರತೊಡಗಿದನು. ದೇವತಾರ್ಚನೆ, ಪುರಾಣ ಶ್ರವಣ, ಯೋಗಾಭ್ಯಾಸ—ಇವೇ ರಾಜನ ನಿತ್ಯಕರ್ಮ. ಹೀಗೆ ಸ್ವಲ್ಪ ಕಾಲ ಕಳೆಯಿತು.

ಬಿಲ್ಲು ಬಾಣಗಳನ್ನು ಧರಿಸಿ ಸುರಂಗಮಾರ್ಗದಿಂದ ರಾಜನು ಪಟ್ಟಣವನ್ನು ಬಿಟ್ಟು ಹೊರಟು ಹೋದುದನ್ನು ಗೂಢಚಾರರು ಚಾಣಕ್ಯನಿಗೆ ತಿಳಿಸಿದರು. ಅವನು ಕೂಡಲೇ ಚಂಡಾಲರನ್ನು ಕರೆಸಿ ' ಚಂಡಾ

ಲರೇ, ರಾಜನಿರುವ ಆಶ್ರಮದಲ್ಲಿ ಯಾರಿಗೂ ಕಾಣದಂತೆ ಗುಟ್ಟಾಗಿ ವಾಸಮಾಡುತ್ತಿರಿ. ಸಮಯ ನೋಡಿ ರಾಜನು ಒಂಟಿಯಾಗಿರುವಾಗ ಅವನನ್ನು ಕೊಂದು ನಮಗೆ ಗುರುತನ್ನು ತಂದು ತೋರಿಸಿ' ಎಂದು ಅಪ್ಪಣೆ ಮಾಡಿದನು. ಚಾಣಕ್ಯನ ಅಪ್ಪಣೆಯಂತೆ ರಾಜನನ್ನು ಕೊಲ್ಲಲು ಚಂಡಾಲರು ಸಮಯ ಕಾಯುತ್ತಿದ್ದರು.

ಇತ್ತ ರಾಜನು ಒಂದು ದಿನ ತನಗೆ ಸಾವು ಸಮೀಪಿಸುತ್ತಿದ್ದ ಸೂಚನೆಯನ್ನು ಕಂಡುಕೊಂಡನು. ಒಂದು ದಿನ ಆತನು ಒಂಟಿಯಾಗಿ ದರ್ಭೆಯ ಆಸನದ ಮೇಲೆ ಕುಳಿತು ಯೋಗದಿಂದ ಪ್ರಾಣ ಬಿಟ್ಟನು. ಅವನ ಬಳಿಯಲ್ಲಿ ಯಾರೂ ಇರಲಿಲ್ಲ. ಸಮಯ ಕಾಯುತ್ತಿದ್ದ ಚಂಡಾಲರು ರಾಜನ ತಲೆಯನ್ನು ಕತ್ತರಿಸಿ ಆತನ ಕೈಯಲ್ಲಿದ್ದ ಜಪಮಾಲೆಯನ್ನು ಕೊಂಡೊಯ್ದು ಅದನ್ನು ಚಾಣಕ್ಯನಿಗೆ ತೋರಿಸಿ ಬಹುಮಾನ ಪಡೆದರು. ಗಂಡ ಸತ್ತ ಸಮಾಚಾರ ಸುನಂದಾದೇವಿಗೆ ತಿಳಿಯಿತು. ಪತಿಗಾಗಿ ಬಹುವಾಗಿ ಶೋಕಿಸಿ ಈ ಮಹಾಸತಿ ಚಿತೆಯನ್ನೇರಿದಳು. ತನಗೆ ಎಲ್ಲರೂ ಸಮವೆಂಬಂತೆ ಗಂಗೆ ಆ ದಂಪತಿಗಳ ಬೂದಿಯ ರಾಶಿಯನ್ನು ಕದಡಿಕೊಂಡು ಹೋದಳು. ಬೀಸಣಿಗೆಯವನು ಅನಾಥನಾದನು. ಒಡೆಯ ತೀರಿಕೊಂಡ ಮೇಲೆ ಆಶ್ರಮದಲ್ಲಿ ಅವನಿಗೇನು ಕೆಲಸ? ಪಟ್ಟಣವನ್ನು ಸೇರಿ ಮುಂದಿನ ದಾರಿ ಕಾಣಬೇಕೆಂದು ಅವನು ಪಾಟಲೀಪುರದ ಕಡೆಗೆ ಹೊರಟನು. ಚೇಟಿ ಮಾತ್ರ ಋಷಿಗಳ ಸೇವೆಗಾಗಿ ಆಶ್ರಮದಲ್ಲಿ ನಿಂತಳು.

ರಾಜನ ಮರಣವಾರ್ತೆಯನ್ನು ಕೇಳಿ ಚಾಣಕ್ಯನು ಚಂದ್ರಗುಪ್ತನ ಮೊದಲ ಮುಳ್ಳು ಮುರಿದು ಹೋಗಿ ಹೇಳಹೆಸರಿಲ್ಲದಾಯಿತೆಂದುಕೊಂಡನು.

ಇನ್ನೊಂದು ದಿನ ಚಾಣಕ್ಯನು ಪರ್ವತರಾಜನ ಸೇನಾಪತಿಯಾದ ಶೇಖರನನ್ನು ಕರೆಸಿಕೊಂಡು 'ಶೇಖರನೇ, ನಿಮ್ಮಿಂದ ನಮಗೆ ಬಹಳ ಉಪಕಾರವಾಯಿತು. ಪರ್ವತರಾಜನಿಗೆ ನೀನು ಹೇಗೆ ಬೇಕಾದವನೋ ನಮಗೂ ಹಾಗೆಯೇ. ಈಗ ಯುದ್ಧಕ್ಕೆ ಕಾರಣವಿಲ್ಲವಾದಕಾರಣ, ಸ್ವಲ್ಪ ಸೇನೆಯನ್ನು ಉಳಿಸಿಕೊಂಡು ಉಳಿದೆಲ್ಲ ಸೈನ್ಯವನ್ನು ರಾಜಧಾನಿಗೆ ಹಿಂದಿರಿಗಿ ಕಳುಹಿಸಿಕೊಡು. ಇಷ್ಟರಲ್ಲೇ ಪರ್ವತರಾಜನಿಗೆ ಅರ್ಧ

ರಾಜ್ಯ ಕೊಡುವ ಏರ್ಪಾಟನ್ನು ಮಾಡುತ್ತೇವೆ' ಎಂದು ಹೇಳಿ ಆತನಿಗೆ ಬೆಲೆ ಬಾಳುವ ಉಡುಗೊರೆಯನ್ನು ಕೊಟ್ಟು ಕಳುಹಿಸಿದನು.

ಶೇಖರನು ಈ ವಿಷಯವನ್ನು ಪರ್ವತರಾಜನಿಗೆ ತಿಳಿಸಲು, ಅದಕ್ಕೆ ದೊರೆ 'ಚಾಣಕ್ಯರು ಹೇಳಿದ ಮಾತು ಸತ್ಯ. ಅದೇ ರೀತಿಯಲ್ಲಿ ನಮ್ಮ ಸೇನೆಯನ್ನು ರಾಜಧಾನಿಗೆ ಕಳುಹಿಸು. ಎರಡು ಸೇನೆ ಒಂದೆಡೆಯಲ್ಲಿ ನಿಂತರೆ ಕ್ಷಾಮ, ದೇಶಕ್ಷೋಭೆ, ಸಾಂಕ್ರಾಮಿಕರೋಗ–ಇವು ಉಂಟಾಗುವುವು. ಇದರಿಂದ ಇಬ್ಬರಿಗೂ ನಷ್ಟ' ಎಂದನು. ರಾಜನ ಅಪ್ಪಣೆಯಂತೆ ಅವನ ಸೈನ್ಯದ ಬಹುಭಾಗ ಶಾಹುರೀನಗರಕ್ಕೆ ತೆರಳಿತು. ಚಂದ್ರಗುಪ್ತನ ಪಟ್ಟಾಭಿಷೇಕಕ್ಕಿದ್ದ ತೊಂದರೆಯಲ್ಲಿ ಮೂರರಲ್ಲಿ ಎರಡು ಪಾಲು ಕಳೆಯಿತು.

ತೀಕ್ಷ್ಣವಾದ ಬುದ್ಧಿ, ದೈವಸಹಾಯ–ಇವುಗಳಿಂದ ಮನುಷ್ಯನಿಗೆ ಯಾವುದು ತಾನೆ ಅಸಾಧ್ಯ?

## ೧೮. ರಾಕ್ಷಸನ ತಂತ್ರ

ಅದೃಷ್ಟ ಚಕ್ರದ ಹಾಗೆ. ಒಂದು ಸಲ ಅದು ಮನುಷ್ಯನನ್ನು ಮೇಲಕ್ಕೆ ಎತ್ತುವುದು. ಮತ್ತೊಮ್ಮೆ ಕೆಳಕ್ಕೆ ತುಳಿಯುವುದು. ಅಮಾತ್ಯರಾಕ್ಷಸನ ಅಧಿಕಾರ, ಐಶ್ವರ್ಯಗಳು ಕರಗುವ ಮುಗಿಲಿನಂತೆ ಇದ್ದಕ್ಕಿದ್ದ ಹಾಗೆಯೇ ಮಾಯವಾದುವು. ಆದರೆ ಅವನಲ್ಲಿ ಸ್ವಾಮಿ ಭಕ್ತಿ ಮಾತ್ರ ದೃಢವಾಗಿ ಉಳಿಯಿತು. ಕಷ್ಟಬಂದ ಈ ಕಾಲದಲ್ಲಿ ಅಮಾತ್ಯನು ಎದೆಗೆಡಲಿಲ್ಲ. ನಂದರಿಗೆ ಮುಗಿದ ಕೈಗಳನ್ನು ಮತ್ತೊಬ್ಬರಿಗೆ ಮುಗಿಯಲು ಆ ವೀರನಿಗೆ ಮನಸ್ಸಾಗಲಿಲ್ಲ. ಈಗ ಪಾಟಲೀಪುರ ವೈರಿಗಳ ವಶವಾಗಿ ಅದನ್ನು ಪರ್ವತರಾಜನ ಸೇನೆ ಕಾದಿದೆ. ರಾಕ್ಷಸನು ನಂದರ ಆಪ್ತ; ಚಂದ್ರಗುಪ್ತನಿಗೆ ವೈರಿ. ಹಗೆಗಳಿಗೆ ರಾಕ್ಷಸನು ಸಿಕ್ಕರೆ ಅವನನ್ನು ಸುಮ್ಮನೆ ಬಿಡುವರೇ? ಮರೆಯಾಗಿದ್ದು ತಂತ್ರಗಳನ್ನು ಹೂಡಿ, ಚಂದ್ರಗುಪ್ತನನ್ನು ಸಂಹರಿಸಿ ಪರಲೋಕದಲ್ಲಿದ್ದ ನಂದರಿಗೆ ಸಂತೋಷವನ್ನುಂಟುಮಾಡಬೇಕೆಂದು ನಿಶ್ಚೈಸಿದನು ರಾಕ್ಷಸ. ಈ ಕಾರ್ಯಸಾಧನೆಗಾಗಿ ತನ್ನ ಆಪ್ತ ದೂತನಿಂದ ಚಂದನದಾಸನೆಂಬ ರತ್ನಪಡಿ ವರ್ತಕನನ್ನು ಕರೆಸಿ ಆತನಿಗೆ ಅಮಾತ್ಯನು—

‘ ಪ್ರಿಯಮಿತ್ರ, ನನ್ನ ತಂತ್ರಗಳೆಲ್ಲ ನಷ್ಟವಾದುವು. ಅದರೂ ಉಪಾಯವಾಗಿ ಚಂದ್ರಗುಪ್ತನನ್ನು ಸಂಹರಿಸಿ, ಹಗೆ ತೀರಿಸಿಕೊಳ್ಳ ಬೇಕಾಗಿದೆ. ಮುದುಕನಾದ ಮಹಾರಾಜನಿಗೆ ಮಗನನ್ನು ದತ್ತು ತಂದು ಅವನನ್ನು ಸಿಂಹಾಸನದಲ್ಲಿ ಕೂರಿಸಿ ನಂದವಂಶವನ್ನು ಮುಂದು ವರಿಸುವೆನು. ಇದಕ್ಕಾಗಿ ಈಗ ನಾನು ಪಟ್ಟಣವನ್ನು ಬಿಟ್ಟು ಹೋಗಲೇಬೇಕಾಗಿದೆ. ಇತರರಿಗೆ ಗುಟ್ಟು ಗೊತ್ತಾಗದಂತೆ ನನ್ನ ಹೆಂಡತಿ ಮಕ್ಕಳನ್ನು ನೀನು ಎಚ್ಚರಿಕೆಯಿಂದ ಕಾಪಾಡು. ಈ ಪದಾರ್ಥಗಳು ನಿನ್ನಲ್ಲಿರಲಿ ’ ಎಂದು ಹೇಳಿ ತನ್ನ ಹೆಂಡತಿ ಮಕ್ಕಳನ್ನು ಅವನ ವಶಕ್ಕೊಪ್ಪಿಸಿದನು.

ಆ ಬಳಿಕ ರಾಕ್ಷಸನು ಚಂದ್ರಗುಪ್ತನ ಸಂಹಾರಕ್ಕಾಗಿ ಉಪಾಯ ಗಳನ್ನು ನೆನೆದನು. ಅವನ ಬಳಿ ವಿಷಕನ್ಯೆಯೊಬ್ಬಳಿದ್ದಳು. ಆಕೆ ಸುಂದರಿ, ಯುವತಿ; ಸಂಗೀತಾದಿ ಕುಶಲಕಲೆಗಳಲ್ಲಿ ನಿಪುಣೆ. ರಾಕ್ಷಸನು ಮನಸ್ಸಿನಲ್ಲಿ ಏನನ್ನೋ ನೆನೆದು, ಆಕೆಯನ್ನು ತನ್ನಲ್ಲಿಗೆ ಕರೆಸಿಕೊಂಡು ಅವಳಿಗೆ ಹೇಳಬೇಕಾದ ಕೆಲವು ಮಾತುಗಳನ್ನು ತಿಳಿಸಿ ದನು. ಅನಂತರ ತನಗೆ ಆಪ್ತನಂತೆ ಕಾದುಕೊಂಡಿದ್ದ ಕ್ಷಪಣಕನನ್ನು ಕರೆದು ಅವನಿಗೆ ಈ ರೀತಿ ಹೇಳಿದನು.

‘ ಅಯ್ಯಾ, ಜೀವಸಿದ್ಧಿ ! ಈ ಕನ್ಯೆ ಸೆರೆಸಿಕ್ಕಿದ ವಲ್ಲಭರಾಯನ ಪ್ರಿಯಪುತ್ರಿ. ಈಕೆ ಮಹಾ ಪ್ರೌಢೆ. ನಂದರಲ್ಲಿ ಹಿರಿಯವನಿಗೆ ಮದುವೆಮಾಡಬೇಕೆಂದು ಈಕೆಯನ್ನು ಹದಿನೈದು ವರ್ಷ ಸಾಕಿದೆನು. ಈಗ ಅದಕ್ಕೆ ಮಾರ್ಗವಿಲ್ಲದಾಯಿತು. ದೈವ ಸಂಕಲ್ಪವನ್ನು ಮಿಾರು ವವರಾರು ? ರಾಜಯೋಗ್ಯಳಾದ ಈ ತರುಣಿಯನ್ನು ನಾನೇ ಚಂದ್ರ ಗುಪ್ತನಲ್ಲಿಗೆ ಕಳುಹಿಸಿದರೆ ಸ್ವಾಮಿದ್ರೋಹಿಯೆಂದು ಲೋಕ ನನ್ನನ್ನು ನಿಂದಿಸುವುದು. ಆದ್ದರಿಂದ ನಿನ್ನ ಶಿಷ್ಯಳೆಂದು ಹೇಳಿ ಈಕೆಯನ್ನು ಚಂದ್ರಗುಪ್ತನಿಗೊಪ್ಪಿಸು. ಚಂದ್ರಗುಪ್ತನು ಈಕೆಯೊಡಗೂಡಿದರೆ ಅದನ್ನೇ ಒಂದು ಪುಣ್ಯವೆಂದು ಭಾವಿಸುವೆನು. ನಂದರು ಸತ್ತ ದುಃಖ ಇದರಿಂದ ಸ್ವಲ್ಪ ಕಡಮೆಯಾಗುವುದು. ನಾನು ಸಂನ್ಯಾಸಿ, ನನಗೇಕೆ ಈ ಕೆಲಸವೆಂದು ಇದನ್ನು ಕಡೆಗಣಿಸಬೇಡ.’

ರಾಕ್ಷಸನ ಮಾತಿಗೆ ಕ್ಷಪಣಕನು ‘ ಅಮಾತ್ಯರೇ, ಈ ಕಷ್ಟಕಾಲ

ದಲ್ಲಿ ನಿಮ್ಮ ಮಾತನ್ನು ಮೀರಲಾದೀತೇ? ನನ್ನ ಬುದ್ಧಿಬಲವಿರುವ ಮಟ್ಟಿಗೆ ಏನಾದರೂ ಮಾಡಿ, ಚಂದ್ರಗುಪ್ತನನ್ನು ಒಡಂಬಡಿಸಿ ಈಕೆಯನ್ನು ಅವನು ಕೂಡುವಂತೆ ಮಾಡುವೆನು. ಒಂದುವೇಳೆ ಚಾಣಕ್ಯನ ಮಾತನ್ನು ಕೇಳಿ ಚಂದ್ರಗುಪ್ತನು ಈಕೆಯನ್ನು ತಿರಸ್ಕರಿಸಿದರೆ ಆಗ ನಿಮ್ಮ ಯತ್ನ ಕೈಗೂಡದಷ್ಟೆ. ಆಗಲಾದರೂ ಚಂದ್ರಗುಪ್ತನಿಗೆ ನೀವು ಶರಣಾಗತರಾಗುವಿರೋ?' ಎಂದನು.

ಕ್ಷಪಣಕನ ಮಾತಿಗೆ ರಾಕ್ಷಸನು 'ಜೀವಸಿದ್ಧಿ, ಸಂನ್ಯಾಸಿಯಾದ ನಿನ್ನಲ್ಲಿ ಮುಚ್ಚುಮರೆಯುಂಟೇ? ನನ್ನ ಆಲೋಚನೆಯನ್ನು ನಿನ್ನಲ್ಲಿ ಹೇಳುವೆನು, ಕೇಳು. ಚಂದ್ರಗುಪ್ತನಲ್ಲಿ ಸಾಮದಾನಗಳು ಸಾಗದಿದ್ದರೆ ಭೇದ ಸಾಧ್ಯವಿಲ್ಲ. ಏಕೆಂದರೆ ಚಾಣಕ್ಯನಿಗೆ ಮೈತುಂಬ ಕಣ್ಣು. ಈ ನಿನ್ನ ಯತ್ನ ಚಂದ್ರಗುಪ್ತನಲ್ಲಿ ಸಾಗದಿದ್ದರೆ ಪರ್ವತರಾಜನ ಸ್ನೇಹವನ್ನು ಬೆಳೆಸುವೆನು. ಅವನು ನನ್ನನ್ನು ಚಾಣಕ್ಯನು ತನಗೆ ಕೊಡುವ ನಂದರ ಅರ್ಧರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡುವನು. ಆಗ ಬೇಕಾದಷ್ಟು ಹಣವನ್ನು ವ್ಯಯಮಾಡಿ, ಪರರಾಜರ ಸ್ನೇಹವನ್ನು ಬೆಳೆಸಿ ಮುಂದಿನ ಯತ್ನಮಾಡುವೆನು. ಈ ವಿಷಯ ಗುಟ್ಟಾಗಿರಲಿ' ಎಂದು ಹೇಳಿ ವಿಷಕನ್ಯೆಯನ್ನು ಅವನಿಗೆ ಒಪ್ಪಿಸಿದನು.

ಕ್ಷಪಣಕನನ್ನು ಬೀಳ್ಕೊಟ್ಟ ಮೇಲೆ, ರಾಕ್ಷಸನು ಪಟ್ಟದಾನೆಯ ಮಾವುತನನ್ನು ಕರೆಸಿಕೊಂಡು ಅವನಿಗೆ 'ಬರ್ಬರಕ, ನಮ್ಮ ಅರಸರಿಗೆ ಪರಮವೈರಿಯಾದ ಚಂದ್ರಗುಪ್ತನು ಪಟ್ಟಗಟ್ಟಿಸಿಕೊಂಡಮೇಲೆ ಪಟ್ಟದಾನೆಯನ್ನೇರಿ ರಾಜದ್ವಾರದಲ್ಲಿ ಬರುವನು. ಆಗ ಅವನನ್ನು ಕೊಲ್ಲಲು ನಿನಗೆ ಅವಕಾಶ ದೊರಕುವುದು. ಆ ಸಮಯದಲ್ಲಿ ನಿನ್ನ ಹಿಂದುಗಡೆ ಕುಳಿತಿರುವ ಚಂದ್ರಗುಪ್ತನನ್ನು ತಿವಿದುಕೊಂದು ಗುಂಪಿನಲ್ಲಿ ತಲೆ ತಪ್ಪಿಸಿಕೊ' ಎಂದು ಹೇಳಿ ಅವನಿಗೆ ಹಣ ಕೊಟ್ಟು ಕಳುಹಿಸಿದನು.

ಆ ಬಳಿಕ ದಾರುವರ್ಮನೆಂಬ ಶಿಲ್ಪಿಯನ್ನು ಕರೆಸಿಕೊಂಡು ಅವನಿಗೆ 'ಅಯ್ಯಾ, ಸ್ವಾಮಿಭಕ್ತನಾದ ಶಿಲ್ಪಿ! ಇಷ್ಟರಲ್ಲೇ ಚಂದ್ರಗುಪ್ತನು ಪಟ್ಟಗಟ್ಟಿಸಿಕೊಂಡು ರಾಜದ್ವಾರದಲ್ಲಿ ಬರುವನು. ಅವನು ಬರುವುದಕ್ಕೆ ಮೊದಲೇ ಕಪಟಶಿಲ್ಪವನ್ನು ರಚಿಸಿ ಸಮಯನೋಡಿ ಅರಸನನ್ನು ಈ ರೀತಿ ಕೊಲ್ಲು' ಎಂದು ತಿಳಿಸಿ ಅವನಿಗೆ ಬೇಕಾದಷ್ಟು ಹಣ

ಕೊಟ್ಟು ಕಳುಹಿಸಿದನು.

ಅನಂತರ ಭವನಪಾಲನೆಂಬ ಅಧಿಕಾರಿಯನ್ನು ಕರೆಸಿಕೊಂಡು, ಆದರದಿಂದ ಅವನಿಗೆ ರಾಕ್ಷಸನು 'ಎಲೈ ಆಪ್ತನಾದ ಅಧಿಕಾರಿ, ನಾಲ್ಕಾರು ದಿನಗಳಲ್ಲಿ ಚಂದ್ರಗುಪ್ತನು ಅರಸನಾಗಿ ಈ ಪಟ್ಟಣಕ್ಕೆ ಬರುವನಷ್ಟೆ. ಈ ಅರಮನೆಯಲ್ಲಿ ಯಾವುದೊಂದು ಭಾಗವೂ ಆತನ ಮನಸ್ಸಿಗೆ ರುಚಿಸದು. ಆದ್ದರಿಂದ ನಂದರ ವಿಹಾರಕ್ಕಾಗಿ ಮಾಡಿದ್ದ, ಕುಮಾರಭವನವನ್ನು ಅಲಂಕಾರಮಾಡು. ಅದರ ಆರನೆಯ ತೊಟ್ಟಿ ಯಲ್ಲಿರುವ ಮಲಗುವ ಮನೆಯನ್ನು ಸಿಂಗರಿಸಿ, ಅಲ್ಲಿ ಈ ರೀತಿ ಕಪಟ ದಿಂದ ಚಂದ್ರಗುಪ್ತನನ್ನು ಕೊಲ್ಲುವಂತೆ ನೇಮಿಸು. ಅವನು ಮಲಗುವ ಮನೆಯನ್ನು ಹೊಕ್ಕೊಡನೆಯೇ ಅರಮನೆಯ ಸುರಂಗಮಾರ್ಗದಿಂದ ನೀನು ತಲೆತಪ್ಪಿಸಿಕೊ. ನಾನೂ ಅದೇ ದಾರಿಯಿಂದ ಈ ಪಟ್ಟಣವನ್ನು ಬಿಟ್ಟು ಹೊರಡುವೆನು. ಒಳಬೊಕ್ಕಸದ ಗೊಲ್ಲನಿಗೆ ಈ ಗುರುತನ್ನು ತೋರಿಸಿ ನಿನಗೆ ಬೇಕಾದಷ್ಟು ಹಣವನ್ನು ತೆಗೆದುಕೊ' ಎಂದು ಅವನಿಗೆ ಚಂದ್ರಗುಪ್ತನು ಮಲಗುವ ಮನೆಯಲ್ಲಿ ಮಾಡಬೇಕಾದ ಕಪಟಗಳನ್ನು ತಿಳಿಸಿ ಕಳುಹಿಸಿದನು. ಇದೆಲ್ಲ ಮುಗಿದ ಮೇಲೆ ಅಮಾತ್ಯನು ರಾಜ ವೈದ್ಯ ಮತ್ತು ತನ್ನ ಮನೆಗೆಲಸವನ್ನು ನೋಡುತ್ತಿದ್ದ ರಾಯಸದ ಶಕಟ ದಾಸ ಇವರನ್ನು ಕ್ರಮವಾಗಿ ಕರೆಸಿಕೊಂಡು ಅವರಿಗೆ, ಮಾಡಬೇಕಾದ ಕೆಲಸಗಳನ್ನು ತಿಳಿಸಿ ಬೇಕಾದಷ್ಟು ಹಣ ಕೊಡಿಸಿದನು. ಇದಾದಮೇಲೆ ನಗರದಲ್ಲಿ ಅಲ್ಲಲ್ಲಿ ಗೂಢಚಾರರನ್ನು ನೇಮಿಸಿ ರಾಕ್ಷಸನು ಅರಮನೆಯ ಸುರಂಗದ ದಾರಿಯಿಂದ ಪಟ್ಟಣವನ್ನು ಬಿಟ್ಟು ಹೊರಟುಹೋದನು.

ರಾಜಧಾನಿ ಕೈವಶವಾದ ಮೇಲೆ ಚಾಣಕ್ಯನು ರಾಕ್ಷಸನನ್ನು ಬಹು ವಾಗಿ ಹುಡುಕಿಸಿದನು. ಆದರೆ ಅದರಿಂದ ಏನೂ ಉಪಯೋಗವಾಗ ಲಿಲ್ಲ. ರಾಯಸದ ಶಕಟದಾಸನು ರಾಕ್ಷಸನ ಗುಟ್ಟನ್ನಾಗಲೀ, ಅವನ ಮನೆಯವರ ವಿಷಯವನ್ನಾಗಲೀ ಹೊರಗೆಡಹಲಿಲ್ಲ. ರಾಕ್ಷಸನು ಪಟ್ಟಣವನ್ನು ಬಿಟ್ಟು ಹೊರಟುಹೋದ ಸಮಾಚಾರ ಚಾಣಕ್ಯನಿಗೆ ತಿಳಿಯಿತು. ಅವನು ದೂತರಿಗೆ 'ಅಮಾತ್ಯನು ಚಂದ್ರಗುಪ್ತನಿಗೆ ಹೆದರಿ, ಹೆಂಡತಿ ಮಕ್ಕಳನ್ನು ಈ ನಗರದಲ್ಲಿರಿಸಿ ಕಳ್ಳದಾರಿಯಿಂದ ತಲೆ ತಪ್ಪಿಸಿಕೊಂಡಿರಬೇಕು. ಚಂದ್ರಗುಪ್ತನಿಗೆ ನಂದರ ಮೇಲೆ ಹಗೆಯಲ್ಲದೆ

ರಾಕ್ಷಸನ ಮೇಲೆ ಹೊಟ್ಟೆಯುರಿಯುಂಟೇ? ಎಲ್ಲರಂತೆ ರಾಕ್ಷಸನು ತಾನೂ ಬಂದು ಪ್ರಭುವನ್ನು ಕಂಡು ಮಾತನಾಡಿಕೊಂಡು ಮನ್ನಣೆ ಹೊಂದಿ ಮೊದಲಿಗಿಂತಲೂ ಅಧಿಕನಾಗಿರಬೇಕು. ಅದನ್ನು ಬಿಟ್ಟು ಧೀರನಾದ ಆತನು ಹೆದರಿ ಮರೆಯಾಗಕೂಡದು. ರಾಕ್ಷಸನಿಲ್ಲದ ಆಸ್ಥಾನ, ಚಂದ್ರನಿಲ್ಲದ ಆಕಾಶದಂತೆ, ಜೋಯಿಸನಿಲ್ಲದ ಗ್ರಾಮದಂತೆ, ಮಕ್ಕಳಿಲ್ಲದ ಸಂಸಾರದಂತೆ ಶೋಭಿಸದು. ಆದ್ದರಿಂದ ಆತನನ್ನು ಹುಡುಕಿ ನಂಬಿಕೆಯನ್ನು ಹೇಳಿ ಕರೆತನ್ನಿ' ಎಂದು ಅಪ್ಪಣೆಮಾಡಿ ಕಳುಹಿದನು.

ರಾಕ್ಷಸನು ಹೊರಗಿದ್ದು ಹಗೆ ಸಾಧಿಸಬಹುದೆಂಬ ಅಳುಕು ಚಾಣಕ್ಯನಿಗೆ ಇದ್ದೇ ಇತ್ತು. ಇದಕ್ಕಾಗಿ ಮುಂದಿನ ಪ್ರಯತ್ನ ರಾಕ್ಷಸನ ಸಂಗ್ರಹ.

## ೧೯. ಪರ್ವತರಾಜನ ಮರಣ

ಮಂಗಳಸ್ನಾನವಾದಮೇಲೆ ಚಾಣಕ್ಯನು ಚಂದ್ರಗುಪ್ತನನ್ನು ವಸ್ತ್ರಾದಿ ಭೂಷಣಗಳಿಂದ ತಾನೇ ಅಲಂಕರಿಸಿ, ಅವನನ್ನು ರಾಜಸಭೆಗೆ ಕರೆತಂದು ಭದ್ರಾಸನದಲ್ಲಿ ಕುಳ್ಳಿರಿಸಿದನು. ಅಧಿಕಾರಿಗಳು ಕಾಣಿಕೆ ಯೊಡನೆ ಚಂದ್ರಗುಪ್ತನನ್ನು ಕಾಣಿಸಿಕೊಂಡರು. ಚಂದ್ರಗುಪ್ತನು ಅವ ರನ್ನು ಮನ್ನಿಸಿ, ಇನ್ನು ಮುಂದೆ ಪ್ರಧಾನಸಚಿವಶಸ್ತ್ರವನ್ನು ಸ್ವೀಕರಿಸಿ ರುವ ಸುರಗುರುವಿಗೆ ಸಮಾನರಾದ ಚಾಣಕ್ಯರ ಅಪ್ಪಣೆಯನ್ನು ಪಾಲಿಸಿ ಕೊಂಡು ಬರುವಂತೆ ಅವರಿಗೆ ಹೇಳಿ ವೀಳಯಕೊಟ್ಟು ಕಳುಹಿಸಿದನು.

ಇದೇ ಸಮಯವನ್ನು ಕಾಯುತ್ತಿದ್ದ, ಕ್ಷಪಣಕನು ವಿಷಕನ್ಯೆ ಯೊಡನೆ ಚಾಣಕ್ಯ ಚಂದ್ರಗುಪ್ತರಿಗೆ ಕಾಣಿಸಿಕೊಂಡನು. ರಾಕ್ಷಸನ ಮಾತನ್ನು ಕೇಳಿದಾಗ ಆ ಕನ್ಯೆಯ ವಿಷಯದಲ್ಲಿ ಕ್ಷಪಣಕನಿಗೆ ಸಂದೇಹ ವುಂಟಾಗಿತ್ತು. ತನ್ನ ಆಶ್ರಮದಲ್ಲಿ ಆಕೆ ತಿಂದುಳಿದ ಅನ್ನವನ್ನು ತಿಂದು ಬೆಕ್ಕು ಸತ್ತುಹೋದುದರಿಂದ ಆಕೆ ವಿಷಕನ್ಯೆಯೆಂದು ಕ್ಷಪಣಕನಿಗೆ ಮಂದಟ್ಟಾಗಿದ್ದಿತು. ಈಗ ಅವನು ಚಂದ್ರಗುಪ್ತನಿಗೆ ಹರಸಲು, ಚಾಣ ಕ್ಯನು ಏನೂ ಅರಿಯದವನಂತೆ 'ಕ್ಷಪಣಕರೇ, ಇತ್ತ ದಯಮಾಡಿ. ನಿಮ್ಮ ಹೆಸರೇನು? ಸಂನ್ಯಾಸಿಗಳಾದ ನಿಮಗೆ ಈ ರೂಪವತಿ ಹೇಗೆ

ದೊರಕಿದಳು ' ಎಂದು ಪ್ರಶ್ನೆ ಮಾಡಿದನು.

ಚಾಣಕ್ಯನ ಮಾತಿಗೆ ಕ್ಷಪಣಕನು, ರಾಕ್ಷಸನು ತಿಳಿಸಿದಂತೆ ಎಲ್ಲವನ್ನೂ ತಿಳಿಸಿ, ಓರೆನೋಟದಿಂದ ಚಾಣಕ್ಯನನ್ನು ನೋಡಿ—

' ಆರ್ಯರೇ, ಈ ಕನ್ಯೆ ಸಾಮಾನ್ಯಳೆಂದು ತಿಳಿಯಬೇಡಿ. ಅರ್ಜುನನ ಮನಸ್ಸನ್ನು ಅಪಹರಿಸಿದ ಉಲೂಪಿಯಂತೆ ಬಲು ಚತುರೆ. ಇವಳ ಅಂಗಸುಖವನ್ನು ಅನುಭವಿಸಿದ ಪ್ರಿಯನು ಇವಳನ್ನಗಲಿ ಮಲಗುವ ಮನೆಯಿಂದ ಮರಳಿ ಈಚೆಗೆ ಬಾರನು ' ಎಂದನು.

ಕ್ಷಪಣಕನ ಮಾತಿನಿಂದ ಆಕೆ ವಿಷಕನ್ಯೆಯೆಂದೂ, ಚಂದ್ರಗುಪ್ತನ ಮರಣಕ್ಕಾಗಿ ರಾಕ್ಷಸನು ಅವಳನ್ನು ಕಳುಹಿಸಿರುವನೆಂದೂ ಚಾಣಕ್ಯನು ಊಹಿಸಿದನು. ಕ್ಷಪಣಕನು ಅನ್ಯೋಕ್ತಿಯಿಂದ ಚಾಣಕ್ಯನಿಗೆ ಮತ್ತೆ ಹೇಳಿದನು; ' ಈಗ ರಾಕ್ಷಸನಿಗೆ ಆಶ್ರಯವಿಲ್ಲ. ಅವನು ಪರ್ವತರಾಜನನ್ನು ಆಶ್ರಯಿಸಿ ಹಗೆ ತೀರಿಸಿಕೊಳ್ಳುವನು. ಆದ್ದರಿಂದ ಈ ವಿಷಕನ್ಯೆಯ ಮೂಲಕ ಪರ್ವತರಾಜನನ್ನು ದಾಕ್ಷಿಣ್ಯವಿಡದೆ ಕೊಲ್ಲಿಸಿ, ಮಲಯಕೇತುವನ್ನು ಇಲ್ಲಿಂದ ಓಡಿಸಬೇಕು. ಇಲ್ಲದಿದ್ದರೆ ಚಂದ್ರಗುಪ್ತನಿಗೆ ಕಾಡೇ ಗತಿ.'

ಕ್ಷಪಣಕನ ಮಾತಿನ ಅರ್ಥವನ್ನು ತಿಳಿದು, ಚಾಣಕ್ಯನು ತನ್ನ ಮನಸ್ಸಿನಲ್ಲಿ ಈ ರೀತಿ ಯೋಚಿಸಿದನು; ' ರಾಕ್ಷಸನಿಗೆ ಆಶ್ರಯಕೊಡುವ ಈ ಪರ್ವತರಾಜನನ್ನು ಕೊಲ್ಲಿಸಿ, ರಾಕ್ಷಸನನ್ನು ಸಂಗ್ರಹಿಸಬೇಕು. ಈಗ ಪರ್ವತರಾಜನಿಗೆ ಅರ್ಧ ರಾಜ್ಯಕೊಟ್ಟರೆ, ಉಳಿದ ಅರ್ಧ ರಾಜ್ಯವನ್ನು ಕಳೆದುಕೊಂಡು ಚಂದ್ರಗುಪ್ತನು ನನ್ನೊಡನೆಯೇ ಕಾಡಿಗೆ ಬರುವನು. ರಾಕ್ಷಸನು ಸ್ವಾಮಿ ಭಕ್ತ. ಒಮ್ಮೆ ಚಂದ್ರಗುಪ್ತನನ್ನು ಕೈಹಿಡಿದರೆ ಸಾಕು; ಚಂದ್ರಗುಪ್ತನ ಸೇವೆಯನ್ನು ಖಂಡಿತವಾಗಿ ಮಾಡುವನು. ಪರ್ವತರಾಜನು ಕೃತಘ್ನ ; ಅವನನ್ನು ಕೊಲ್ಲಿಸಿದರೆ ದೋಷವಿಲ್ಲ,'

ಈ ವೇಳೆಗೆ ಸರಿಯಾಗಿ ಚಾಣಕ್ಯನ ಅಪ್ಪಣೆಯಂತೆ ದೂತರು ರಾಜಸಭೆಗೆ ಗಿಣಿಗಳನ್ನು ತಂದರು. ವಿಷಕನ್ಯೆಯನ್ನು ನೋಡಿದೊಡನೆಯೇ ಅವು ಅರಚಿಕೊಂಡು ಪ್ರಾಣಬಿಟ್ಟುವು. ಈಕೆ ವಿಷಕನ್ಯೆಯೆಂದು ಚಾಣಕ್ಯನಿಗೆ ಸ್ಪಷ್ಟವಾಯಿತು. ಅವನು ಕ್ಷಪಣಕನನ್ನು ನೋಡಿ—

' ಕ್ಷಪಣಕರೇ, ಚಂದ್ರಗುಪ್ತನು ಕೈಹಿಡಿದ ಹೆಂಡತಿಯನ್ನು

ಹೊರತು ಮತ್ತೊಬ್ಬಳನ್ನು ಕಣ್ಣೆತ್ತಿ ನೋಡನು. ಈ ಚೆಲುವೆ ಪರ್ವತ ರಾಜನಿಗೆ ತಕ್ಕವಳು, ಆತನಿಂದಲೇ ಇವಳ ಯೌವನಕ್ಕೆ ಸಫಲತೆ. ಈ ದಿನ ಹುಣ್ಣಿಮೆ; ತುಂಬು ಬೆಳುದಿಂಗಳು ಬರುವುದು. ನಮಗೆ ಸಂತೋಷವನ್ನುಂಟುಮಾಡುವ ಬಯಕೆ ನಿಮಗಿದ್ದರೆ ಪರ್ವತರಾಜನು ಮಲಗುವ ಮನೆಗೆ ಬರುವ ವೇಳೆಯನ್ನು ಕಾದು ಈಕೆಯನ್ನು ಆತನಿಗೊಪ್ಪಿಸಿ' ಎಂದು ಹೇಳಿ ಕಳುಹಿಸಿದನು,

ಕ್ಷಪಣಕನು ರಾಜಸಭೆಯನ್ನು ಬಿಡುವ ವೇಳೆಗೆ ಕತ್ತಲಾಗಿತ್ತು. ಚಂದ್ರನು ಆಗತಾನೆ ಮೇಲೆದ್ದು ಬಂದಿದ್ದನು. ಹೊರಗಡೆ ಹಾಲು ಚೆಲ್ಲಿದಂತೆ ಬೆಳುದಿಂಗಳು ಹರಡಿತ್ತು. ಬೀದಿಯಲ್ಲಿ ಹೋಗುವವರು ಬೆಳುದಿಂಗಳ ಹೊಳೆಯನ್ನು ಹಾಯ್ದು ಹೋಗುವವರಂತೆ ಕಂಡುಬರುತ್ತಿದ್ದರು. ತಂಗಾಳಿ ಮೆಲ್ಲಮೆಲ್ಲನೆ ಬೀಸಿ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿತ್ತು.

ಕ್ಷಪಣಕನು ವಿಷಕನ್ಯೆಯೊಡನೆ ಪರ್ವತರಾಜನನ್ನು ಕಂಡಾಗ, ರಾಜನು ತನ್ನ ಮಲಗುವ ಮನೆಯಲ್ಲಿ ಯೋಚನೆಯಿಲ್ಲದೆ ಸುಖವಾಗಿ ಕುಳಿತಿದ್ದನು. ಅವನ ಬಳಿ ಯಾರೂ ಇರಲಿಲ್ಲ. ಕ್ಷಪಣಕನು ರಾಜನಿಗೆ ಹರಸಿ ಕುಳಿತುಕೊಂಡನು. ಜೀವಸಿದ್ಧಿಯ ಹಿಂದೆ ಸೊಬಗನ್ನು ಬೀರುತ್ತ ನಿಂತಿದ್ದ ಚೆಲುವೆಯನ್ನು ನೋಡಿ ಪರ್ವತರಾಜನ ಬಗೆ ಕದಡಿತು. 'ಮನುಷ್ಯರಲ್ಲಿ ಈ ರೂಪು, ಈ ಲಾವಣ್ಯ, ಈ ಬೆಡಗು ಹೇಗೆ ತಾನೆ ಬರುವುವು? ಬಹು ಪುಣ್ಯಶಾಲಿಗೆ ದೊರಕತಕ್ಕವಳಿವಳು. ಇವಳೊಡನೆ ಕೂಡುವವನು ಬಹು ಧನ್ಯ. ಋಷಿಗಳೇ ಇವಳಿಂದ ಚಂಚಲ ಮನಸ್ಸುಳ್ಳವರಾಗುವರೆಂದಮೇಲೆ ನಮ್ಮ ಮಾತೇನು? ಇವಳು ನಮ್ಮ ಪ್ರಾಣವನ್ನು ಕೇಳಿದರೂ ಕೊಡುವೆನು' ಎಂದುಕೊಂಡನು.

ಮೋಹದಿಂದ ಮತ್ತನಾದ ರಾಜನು ಕ್ಷಪಣಕನಿಗೆ "ಕ್ಷಪಣಕನೇ, ನೀನು ಯಾರು? ಎಲ್ಲಿಂದ ಬಂದೆ? ಸಂನ್ಯಾಸಿಯಾದ ನಿನಗೆ ಈ ಚೆಲುವೆ ಎಲ್ಲಿ ದೊರಕಿದಳು?" ಎಂದು ಪ್ರಶ್ನೆಮಾಡಿದನು.

ರಾಜನ ಮಾತಿಗೆ ಕ್ಷಪಣಕನು ಈ ರೀತಿ ಉತ್ತರಕೊಟ್ಟನು. "ರಾಕ್ಷಸನ ಗೆಳೆಯ ನಾನು. ನನ್ನ ಹೆಸರು ಜೀವಸಿದ್ಧಿಯೆಂದು. ಚಂದ್ರಗುಪ್ತನಿಗೆ ಹೆದರಿ ಈ ಪಟ್ಟಣವನ್ನೇ ಬಿಟ್ಟು ಹೊರಟುಹೋದ

ರಾಕ್ಷಸನು ನಿಮ್ಮ ಅನುಗ್ರಹವನ್ನು ಬಯಸಿ ಈ ಚತುರೆಯನ್ನು ಕಳುಹಿಸಿದ್ದಾನೆ. ಈಕೆಯನ್ನು ಸ್ವೀಕರಿಸಿ ರಾಕ್ಷಸನನ್ನು ಅನುಗ್ರಹಿಸಬೇಕು.''

ಕ್ಷಪಣಕನ ಮಾತನ್ನು ಕೇಳಿ ರಾಜನು ಮೋಹಪರವಶನಾದನು. ಇದನ್ನರಿತ ಜೀವಸಿದ್ಧಿ ವಿಷಕನ್ಯೆಯನ್ನು ಪರ್ವತರಾಜನಿಗೊಪ್ಪಿಸಿ ಹೊರಟು ಬಂದನು. ಕಾಮುಕನಾದ ರಾಜನು ವಿಷಕನ್ಯೆಯನ್ನು ಕೂಡಿ, ನಂಜುತಟ್ಟಿ, ಮಾದ್ರಿಯನ್ನಪ್ಪಿಸತ್ತ ಪಾಂಡುವಿನಂತೆ ಹಾಸಿಗೆಯ ಮೇಲೆ ಒರಗಿದನು.

ವಿಷಕನ್ಯೆ ರಾಜನ ಬಳಿ ಕಣ್ಣೀರು ಸುರಿಸುತ್ತ ಕುಳಿತಿದ್ದಳು. ಹೊರಗಡೆ ಎಲ್ಲೆಲ್ಲಿಯೂ ಮೌನ ಕವಿದಿತ್ತು.

## ೨೦. ಪಲಾಯನ

ಕ್ಷಪಣಕನು ಹೊರಟುಹೋದಮೇಲೆ ಮುಂದಿನ ಕಾರ್ಯವನ್ನು ಯೋಚಿಸಿ ಚಾಣಕ್ಯನು ಒಂದು ಲೇಖನವನ್ನು ಬರೆದು, ಅದನ್ನು ಸಿದ್ಧಾರ್ಥಕನಿಗೆ ಕಳುಹಿಸಿದನು. ಸಿದ್ಧಾರ್ಥಕನು ಅದನ್ನು ನೋಡಿಕೊಂಡು, ಭಾಗುರಾಯಣನಲ್ಲಿಗೆ ಬಂದು—

'ಸೇನಾಪತಿ, ಈ ಕಾಲಕ್ಕೆ ನೀನೇ ಪುಣ್ಯವಂತ. ಚಾಣಕ್ಯರಿಗೆ ನಿನ್ನಲ್ಲಿ ಅದೆಂಥ ವಿಶ್ವಾಸ! ಚಂದ್ರಗುಪ್ತನ ಕಾರ್ಯ ನಿನ್ನಿಂದ ಬಹುವಾಗಿ ಆಗಬೇಕಾಗಿದೆ. ರಾಕ್ಷಸನಂತೆ ನೀನು ಎಲ್ಲದರಲ್ಲಿಯೂ ಪ್ರೌಢ. ನಿನಗೆ ಹೇಳಬೇಕಾದುದೇನಿದೆ? ಈ ಲೇಖನವನ್ನು ಓದಿಕೊಂಡು ಅದರಂತೆ ನಡೆದುಕೊ. ಇದರಿಂದ ನಿನಗೆ ರಾಜಾನುಗ್ರಹವುಂಟಾಗುವುದು. ಇದು ಸತ್ಯ' ಎಂದು ಹೇಳಿ ಚಾಣಕ್ಯನ ಲೇಖನವನ್ನು ಅವನಿಗೊಪ್ಪಿಸಿ ಹೊರಟುಹೋದನು.

ಈ ಮಾತನ್ನು ಕೇಳಿ ಭಾಗುರಾಯಣನಿಗೆ ಸೋಜಿಗವಾಯಿತು. ಸೇನಾಪತಿ ಲೇಖನವನ್ನೋದಿಕೊಂಡು, ಭದ್ರಭಟಾದಿಗಳಿಗೆ ತಮ್ಮ ಸೇನೆಯೊಡನೆ ಮಲಯಕೇತುವಿನ ಪಾಳಯದ ಬಳಿ ಕಾಣಿಸಿಕೊಳ್ಳುವಂತೆ ಗುಟ್ಟಾಗಿ ಹೇಳಿ ಕಳುಹಿಸಿದನು. ಇದಾದ ಮೇಲೆ 'ವಿಷಕನ್ಯೆಯಿಂದ ಪರ್ವತರಾಜನ ಸಾವು ಸಿದ್ಧ. ಈಗ ಮಲಯಕೇತುವಿಗೆ ಹೆದರಿಕೆಯನ್ನುಂಟುಮಾಡಿ, ಅವನನ್ನು ರಾಜಧಾನಿಗೆ ಕರೆದೊಯ್ಯು

ಬೇಕು. ಅಲ್ಲಿ ಅವನ ಆಪ್ತಮಂತ್ರಿಯಂತಿದ್ದು, ರಾಕ್ಷಸನು ಅವನಲ್ಲಿಗೆ ಬಂದರೆ ಪ್ರಾಣಸಹಿತವಾಗಿ ಅವನನ್ನು ಅಲ್ಲಿಂದ ಹೊರಡಿಸಬೇಕು. ಕಾಲ ಕಳೆದರೆ ನಮಗೆ ಕೇಡು ತಪ್ಪದು' ಎಂದು ಯೋಚಿಸಿ, ಬೆತ್ತಲ ಕುದುರೆಯನ್ನೇರಿ ಮಲಯಕೇತುವಿನ ಪಾಳಯದೆಡೆಗೆ ಬರುತ್ತಿದ್ದನು. ದಾರಿಯಲ್ಲಿ ಅವನಿಗೆ ವಿಷಕನ್ಯೆ ಕಾಣಿಸಿಕೊಂಡಳು. ಪರ್ವತರಾಜನು ಇವಳಿಂದಲೇ ಸತ್ತಿರಬೇಕೆಂದು ನಿರ್ಧರಿಸಿ ಅವನು ರಾಜನ ಗೂಡಾರದ ಬಳಿಗೆ ಬಂದನು. ಅಲ್ಲಿ ಜನರಾಡಿಕೊಳ್ಳುತ್ತಿದ್ದ ಪಿಸುಮಾತಿನಿಂದ ಪರ್ವತರಾಜನು ಸತ್ತಿರಬೇಕೆಂದು ಸೇನಾಪತಿಗೆ ಮನದಟ್ಟಾಯಿತು.

ತಂದೆ ಸತ್ತ ಸಮಾಚಾರ ಮಲಯಕೇತುವಿಗೆ ತಿಳಿಯದು. ಜಯಲಕ್ಷ್ಮಿ ಕೈವಶವಾದ ಈ ಕಾಲದಲ್ಲಿ ಅವನು ತನ್ನ ಗೂಡಾರದಲ್ಲಿ ವಿನೋದದಿಂದಿದ್ದನು. ಭಾಗುರಾಯಣನು ಬೆತ್ತಲ ಕುದುರೆಯನ್ನೇರಿ ಬಂದಿರುವುದನ್ನು ದೂತರಿಂದ ಕೇಳಿ, ಮಲಯಕೇತು ಹೊರಗೆ ಬಂದು ಸಮಾಚಾರವೇನೆಂದು ಕೇಳಿದನು. ಭಾಗುರಾಯಣನು ಆತುರದಿಂದ—

'ರಾಜಕುಮಾರ, ಸಮಾಚಾರದ ಮಾತು ಹಾಗಿರಲಿ. ಅದನ್ನು ಆ ಮೇಲೆ ಹೇಳುವೆನು. ಈ ಬೆತ್ತಲ ಕುದುರೆಯನ್ನೇರಿ ಈಗಲೇ ಇಲ್ಲಿಂದ ಹೊರಡು. ಇಲ್ಲದಿದ್ದರೆ ಸರ್ವನಾಶವಾದೀತು! ಅಗೋ ನೋಡು, ನಿನ್ನನ್ನು ಸಂಹರಿಸಲು ಚಂದ್ರಗುಪ್ತನ ಸೇನೆ ಹಿರಿದ ಕತ್ತಿಯೊಡನೆ ಬರುತ್ತಿದೆ. ನಿನ್ನ ತಂದೆಯ ಸುದ್ದಿ ನಿನಗೆ ತಿಳಿಯುವುದಿರಲಿ. ಓಡು, ಓಡು ಎಂದು ತ್ವರೆಗೊಳಿಸಿದನು. ಮಲಯಕೇತು ದಿಕ್ಕುತೋರದೆ ಹೆದರಿ ಕುದುರೆಯನ್ನೇರಿ ಓಡಿದನು. ಮಲಯಕೇತು ಮುಂದೆ, ಮೈಗಾವಲಿನವರು ಹಿಂದೆ. ಸ್ವಲ್ಪದೂರ ಹೋದಮೇಲೆ ಮಲಯಕೇತು ಸೇನಾಧಿಪತಿಯೊಡನೆ ಒಂದು ದಿಣ್ಣೆಯ ಮೇಲೆ ವಿಶ್ರಮಿಸಿಕೊಂಡನು. ಆಯಾಸದಿಂದ ಅವನ ಮೈಯಲ್ಲಿ ಬೆವರು ಸುರಿಯುತ್ತಿತ್ತು. ಆಗ ಭಾಗುರಾಯಣನು ರಾಜಕುಮಾರನಿಗೆ ಈ ರೀತಿ ಹೇಳಿದನು—

'ರಾಜಕುಮಾರ, ನಿನಗೆ ಎಂಥ ದುರವಸ್ಥೆ ಬಂತು! ನಿನ್ನೆ ರಾತ್ರಿ ನಿನ್ನಮೇಲೆ ಕೈಮಾಡಬೇಕೆಂದು ಸೇನಾಧಿಪತಿಗಳಿಗೆ ಚಾಣಕ್ಯನ ಅಪ್ಪಣೆಯಾಯಿತು. ಅದರಂತೆಯೇ ಚಂದ್ರಗುಪ್ತನ ಸೇನೆ ನಿನ್ನ ಗೂಡಾರವನ್ನು ಸುತ್ತುಗಟ್ಟಿತು. ನಿನಗೆ ಅಪಾಯವಾಗಬಹುದೆಂದೆಣಿಸಿ

ನಾನು ಈ ಕುದುರೆಯನ್ನೇರಿ ನಿನ್ನ ಗೂಡಾರದ ಬಳಿ ಬರುತ್ತಿದ್ದೆ. ಅಷ್ಟರಲ್ಲೇ ವಿಷಕನ್ಯೆಯೊಬ್ಬಳು ನನ್ನೆದುರಾಗಿ ಬಂದಳು. ಆಕೆಯನ್ನು ಕೂಡಿ ನಿನ್ನ ತಂದೆ ಮರಣ ಹೊಂದಿರಬಹುದೆಂದು ಅನುಮಾನವಾಯಿತು. ನಿಮ್ಮ ತಂದೆಯ ಗೂಡಾರದ ಬಳಿ ಅಲ್ಲಿ ಜನರಾಡಿಕೊಳ್ಳುತ್ತಿದ್ದ ಪಿಸು ಮಾತಿನಿಂದ ನನ್ನ ಅನುಮಾನ ದೃಢಪಟ್ಟಿತು. ಈ ಸಮಯದಲ್ಲಿ ನಿನ್ನನ್ನು ಕೇಡಿನಿಂದ ಪಾರುಮಾಡಲು ನಿನ್ನ ಗುರುತಿಲ್ಲದಿದ್ದರೂ ನಿನ್ನ ಬಳಿಗೆ ಬಂದೆ. ಈಗ ರಾಜಧಾನಿಗೆ ಹೊರಡು. ಸ್ವಲ್ಪ ಕಾಲವಾದ ಮೇಲೆ ಸೈನ್ಯವನ್ನು ಜತೆಗೂಳಿಸಿ ಪಾಟಲೀಪುರವನ್ನು ಮುತ್ತುವೆಯಂತೆ. ನೀನಿನ್ನೂ ಹುಡುಗ. ವಿವೇಕಿಗಳಾದ ಹಿರಿಯರನ್ನು ಮಂತ್ರಿಗಳನ್ನಾಗಿ ನೇಮಿಸಿಕೊಂಡು ಕೆಲಸಮಾಡು. ದುಡುಕಬೇಡ. ನಾನು ತಲೆ ಮರೆಸಿಕೊಂಡು ರಾಜಧಾನಿಯನ್ನು ಸೇರುವೆನು. ನಿನಗೆ ಮಂಗಳ ವಾಗಲಿ.'

ತಂದೆ ಸತ್ತ ಸುದ್ದಿಯನ್ನು ಕೇಳಿ ಮಲಯಕೇತುವಿನ ಕಣ್ಣುಗಳು ಹನಿಗೂಡಿದುವು. ರಾಜಕುಮಾರನು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಭಾಗುರಾಯಣನು ಅವನನ್ನು ಸಮಾಧಾನಪಡಿಸಿದನು. ದುಃಖ ಸ್ವಲ್ಪ ಹಿಡಿತಕ್ಕೆ ಬರಲು ಮಲಯಕೇತು 'ಭಾಗುರಾಯಣ, ನೀನೇ ನನ್ನ ಆಪ್ತ, ಮಂತ್ರಿ. ನೀನು ನನ್ನ ಬಳಿಯಲ್ಲೇ ಇರಬೇಕು. ಪಾಟಲೀಪುರಕ್ಕೆ ಹೋಗುವುದು ನಿನಗೆ ತರವಲ್ಲ. ಇದು ನನ್ನ ಆಜ್ಞೆ' ಎಂದು ಅವನನ್ನು ತನ್ನ ಬಳಿ ನಿಲ್ಲುವಂತೆ ಬಲವಂತಪಡಿಸಿದನು. ಈ ವೇಳೆಗೆ ಅವನ ಸೇನೆ ಹೆದರಿಕೆಯಿಂದ ಓಡುತ್ತ ಅವನಲ್ಲಿಗೆ ಬಂತು. ಎಲ್ಲರೂ ಇಳಿಮುಖದಿಂದ ರಾಜಧಾನಿಗೆ ಬಂದರು.

## ೨೧. ಕೆಳೆತನ

ಅರಮನೆಯ ಸುರಂಗಮಾರ್ಗದಿಂದ ರಾಜಧಾನಿಯನ್ನು ಬಿಟ್ಟು ಹೊರಟ ರಾಕ್ಷಸನು ಸರ್ವಾರ್ಥಸಿದ್ಧಿರಾಜನಿದ್ದ ತಪೋವನದಲ್ಲಿಯೇ ಇದ್ದನು. ತನ್ನ ಮುಂದಿನ ಕಾರ್ಯಕ್ರಮವನ್ನಿನ್ನೂ ಆತನು ನಿರ್ಧರಿಸಿರಲಿಲ್ಲ. ಅಷ್ಟರಲ್ಲೇ ರಾಜಧಾನಿಯ ಕಡೆಗೆ ಹೊರಟಿದ್ದ ಬೀಸಣಿಗೆಯುವನಿಂದ ರಾಜನು ಸತ್ತ ಸುದ್ದಿ ರಾಕ್ಷಸನಿಗೆ ತಿಳಿಯಿತು. ಸ್ವಾಮಿಭಕ್ತನಾದ

ಆತನಿಗೆ ಈ ಪೆಟ್ಟನ್ನು ಸಹಿಸಿಕೊಳ್ಳಲಾಗಲಿಲ್ಲ. ಒಡನೆಯೇ ಅವನ ಕಣ್ಣುಗಳು ಹನಿಗೂಡಿದುವು. ರಾಜನಿಗೆ ದತ್ತುಮಗನನ್ನು ತಂದು, ನಂದರವಂಶವನ್ನು ಮುಂದುವರಿಸಬೇಕೆಂದಿದ್ದ ಅವನ ಆಶೆ ಬರಿದಾಯಿತು. ಚಿಂದಗಾಯಕ್ಕೆ ಸಾಸಿವೆಯನ್ನರೆದು ಬಳಿದಂತೆ, ವಿಷಕನ್ಯೆಯಿಂದ ಪರ್ವತರಾಜನ ಮರಣ, ಮಲಯಕೇತುವಿನ ಪಲಾಯನ ಇವು ಕ್ರಮವಾಗಿ ರಾಕ್ಷಸನಿಗೆ ತಿಳಿದುಬಂದುವು. ರಾಕ್ಷಸನು ತನ್ನ ಮನಸ್ಸಿನಲ್ಲೇ 'ಅಯ್ಯೋ, ನಾನು ಮಾಡಿದ ದೊಡ್ಡ ಪ್ರಯತ್ನ ಫಲಿಸದಾಯಿತು. ಅರ್ಜುನನನ್ನು ಕೊಲ್ಲಲು ಕರ್ಣನು ಇಂದ್ರನಿಂದ ಪಡೆದ ಶಕ್ತಿಗೆ ಘಟೋತ್ಕಚನನ್ನು ಗುರಿಪಡಿಸಿ ಕೃಷ್ಣನು ತನ್ನ ಭಕ್ತನನ್ನು ಕಾಪಾಡಿದಂತೆ ವಿಷಕನ್ಯೆಯಿಂದ ಪರ್ವತರಾಜನನ್ನು ಕೊಲ್ಲಿಸಿ, ಚಾಣಕ್ಯನು ಚಂದ್ರಗುಪ್ತನನ್ನು ಕಾಪಾಡಿದನು. ನನ್ನ ಮಹಾಪ್ರಯತ್ನವೇ ಈ ರೀತಿಯಾದ ಮೇಲೆ ಸಣ್ಣ ಪ್ರಯತ್ನಗಳು ಚಂದ್ರಗುಪ್ತನನ್ನು ಏನು ಮಾಡುವುವು? ಆದರೆ ಈಗಲೂ ಇನ್ನೂ ಕಾಲ ಮೀರಿಲ್ಲ. ಚಂದ್ರಗುಪ್ತನ ಹಗೆಯಾದ ಮಲಯಕೇತುವನ್ನು ಸೇರಿ, ಅವನನ್ನು ಪ್ರೋತ್ಸಾಹಿಸಿ ಅವನ ಸೇನೆಯನ್ನು ಕರೆತಂದು ಪಾಟಲೀಪುರವನ್ನು ಮುತ್ತುವೆನು. ಚಾಣಕ್ಯ ಚಂದ್ರಗುಪ್ತರ ಗರ್ವವನ್ನು ಮುರಿದು ಪರಲೋಕದಲ್ಲಿರುವ ಪ್ರಭುಗಳಿಗೆ ಸಂತೋಷವನ್ನುಂಟುಮಾಡುವೆನು. ಹಾಗಲ್ಲದೆ ಚಂದ್ರಗುಪ್ತನ ಏಳಿಗೆಯನ್ನು ಕಂಡು ಸಹಿಸೆನು' ಎಂದು ಚಿಂತಿಸಿ, ಆ ಚಾರನೊಡನೆ ಪರ್ವತರಾಜ್ಯದ ಕಡೆಗೆ ಹೊರಟನು. ಆ ರಾಜ್ಯದ ರಮಣೀಯತೆ ರಾಕ್ಷಸನ ಮನಸ್ಸನ್ನು ಸೆರೆಹಿಡಿಯಿತು.

ರಾಜಧಾನಿಯ ಉಪವನದಲ್ಲಿ ರಾಕ್ಷಸನು ಬಂದಿಳಿದಿರುವುದು ದೂತರಿಂದ ಭಾಗುರಾಯಣನಿಗೆ ತಿಳಿಯಿತು. ಅವನು ತನ್ನ ಮನಸ್ಸಿನಲ್ಲಿ ಈ ರೀತಿ ಚಿಂತಿಸಿದನು: 'ಚಾಣಕ್ಯರ ಊಹೆ ನಿಜವಾಯಿತು. ರಾಕ್ಷಸನು ಈಗ ಮಲಯಕೇತುವನ್ನು ಆಶ್ರಯಿಸುವನು. ರಾಕ್ಷಸನಲ್ಲಿ ಇಲ್ಲದ ದೋಷವನ್ನು ಈಗಲೇ ಹೊರಿಸಕೂಡದು. ಹಾಗೆ ಮಾಡಿದರೆ ರಾಕ್ಷಸನು ಮತ್ತೊಬ್ಬ ರಾಜನನ್ನು ಆಶ್ರಯಿಸುವನು. ಇದರಿಂದ ರಾಜಕಾರ್ಯ ಕೆಡುವುದು. ಚಂದ್ರಗುಪ್ತನ ಮೇಲೆ ರಾಕ್ಷಸನು ರಾಜಕಾರ್ಯ ನಡೆಸಲಿ. ಸಮಯವರಿತು ಮಲಯಕೇತುವಿಗೆ ಬೋಧಿಸಿ ಬೆಕ್ಕನ್ನು

ನಯದಿಂದ ಹತ್ತಿರಕ್ಕೆ ಕರೆದು ಆಮೇಲೆ ಬಿಸಿನೀರನ್ನೆರಚಿ ಅಟ್ಟುವಂತೆ, ರಾಕ್ಷಸನಲ್ಲಿ ರಾಜಕುಮಾರನಿಗೆ ಕೋಪ ಬರುವಂತೆ ಮಾಡಿ ಇಲ್ಲಿಂದ ಅಟ್ಟುವೆನು.'

ಭಾಗುರಾಯಣನು ಮಲಯಕೇತುವಿನ ಬಳಿಗೆ ಬರುವುದರೊಳಗಾಗಿ ರಾಕ್ಷಸನ ದೂತನು ರಾಜಕುಮಾರನ ಬಳಿಗೆ ಬಂದಿದ್ದನು. ರಾಕ್ಷಸನು ತನ್ನ ರಾಜಧಾನಿಗೆ ಬಂದಿರುವ ಸುದ್ದಿಯನ್ನು ಕೇಳಿ ಮಲಯಕೇತು ತನ್ನೊಳಗೆ 'ನಂದರ ಮಂತ್ರಿಯಾದ ರಾಕ್ಷಸನು ಇಲ್ಲಿಗೆ ಬರಲು ಕಾರಣವೇನು? ಚಂದ್ರಗುಪ್ತನಿಗೆ ಹೆದರಿ ಬಂದಿರಬಹುದೇ? ಇಲ್ಲವೆ ಅವನಲ್ಲಿ ಹಗೆ ಸಾಧಿಸುವುದು ಅಮಾತ್ಯನ ಗುರಿಯೆ? ವಿಚಾರಿಸಿ ನೋಡಬೇಕು. ರಾಕ್ಷಸನು ಕಾರ್ಯದಕ್ಷ, ಸತ್ಯವಂತ, ಬುದ್ಧಿಶಾಲಿ ಮತ್ತು ಪ್ರಜಾರಂಜಕ. ಈತನನ್ನು ನಮ್ಮ ತಂದೆ ಬಹುವಾಗಿ ಕೊಂಡಾಡುತ್ತಿದ್ದ. ಚಂದ್ರಗುಪ್ತನ ಮೇಲೆ ಹಗೆ ತೀರಿಸಿಕೊಳ್ಳಲು ಬಂದಿದ್ದರೆ, ರಾಕ್ಷಸನನ್ನು ಮುಖ್ಯ ಮಂತ್ರಿಯನ್ನಾಗಿ ಮಾಡಿ ನನ್ನ ಹಗೆಯನ್ನು ಸಾಧಿಸುವೆನು' ಎಂದು ಯೋಚಿಸಿದನು. ಅಷ್ಟರಲ್ಲೇ ಭಾಗುರಾಯಣನು ರಾಜಕುಮಾರನ ಬಳಿಗೆ ಬರಲು, ಮಲಯಕೇತು ರಾಕ್ಷಸನ ವಿಷಯದಲ್ಲಿ ಅವನ ಅಭಿಪ್ರಾಯವನ್ನು ಕೇಳಿದನು. ಅದಕ್ಕೆ ಭಾಗುರಾಯಣನು 'ರಾಕ್ಷಸನು ಬುದ್ಧಿವಂತ, ಒಳ್ಳೆಯ ಸೇನಾನಿ. ಅವನೇ ನಿನ್ನ ಬಳಿ ಬಂದಿರುವುದರಿಂದ ನಿನ್ನ ಕೆಲಸ ಕೈಗೂಡಿತು' ಎಂದು ರಾಕ್ಷಸನನ್ನು ಹೊಗಳಿದನು. ರಾಕ್ಷಸನನ್ನು ಗೌರವದಿಂದ ಮಲಯಕೇತುವಿನ ಬಳಿಗೆ ಕರೆತರುವ ಕಾರ್ಯ ಭಾಗುರಾಯಣನ ಪಾಲಿಗೆ ಬಂತು.

ತನ್ನನ್ನು ಕರೆತರಲು ಭಾಗುರಾಯಣನು ಬಂದುದನ್ನು ಕಂಡು ಅಮಾತ್ಯನಿಗೆ ಸೋಜಿಗವಾಯಿತು. ಮಲಯಕೇತುವಿನಲ್ಲಿಗೆ ಸೇನಾಪತಿ ಬರಲು ಕಾರಣವೇನೆಂದು ರಾಕ್ಷಸನು ಕೇಳಲು ಭಾಗುರಾಯಣನು ಹೇಳಿದನು—'ಅಮಾತ್ಯರೇ, ನಂದರು ಸತ್ತಮೇಲೆ ರಾಜಯೋಗ್ಯನಲ್ಲದ ಚಂದ್ರಗುಪ್ತನನ್ನು ಸೇವಿಸಲು ನನ್ನ ಮನಸ್ಸು ಒಡಂಬಡಲಿಲ್ಲ. ಪರ್ವತರಾಜನಲ್ಲಿಗೆ ಹೋಗಿ ಅವನನ್ನು ಸೇವಿಸಬೇಕೆಂಬ ಬಯಕೆಯಿಂದ ಚಂದ್ರಗುಪ್ತನಿಗೆ ಕಾಣಿಸಿಕೊಳ್ಳದೆ ಉದಾಸೀನದಿಂದಿದ್ದೆ. ಇಷ್ಟರಲ್ಲೇ ರಾಜಸಭೆಯಲ್ಲಿ ನನ್ನನ್ನು ಅವಮಾನಪಡಿಸಬೇಕೆಂದಿದ್ದ ಚಾಣಕ್ಯನ ಆಲೋ

ಚನೆ ನನಗೆ ತಿಳಿದುಬಂತು. ಹೀಗಿರುವಾಗ ನನ್ನ ಸೇನೆಯನ್ನು ತೆಗೆದುಕೊಂಡು ಕಾಳಗಕ್ಕೆ ಸಿದ್ಧನಾಗಿ ಪರ್ವತರಾಜನ ಗೂಡಾರದ ಪಶ್ಚಿಮಕ್ಕೆ ಹೋಗಿ ನಿಂತುಕೊಳ್ಳಬೇಕೆಂದು ಪ್ರಭುಗಳ ಅಪ್ಪಣೆಯಾಯಿತು. ಮಗನೊಡನೆ ಪರ್ವತರಾಜನಿಗೆ ಚಾಣಕ್ಯನು ಏನೋ ದ್ರೋಹ ಬಗೆಯುತ್ತಿರುವನೆಂದು ನನಗೆ ಅರಿವಾಯಿತು. ರಾಜನ ಗೂಡಾರದ ಬಳಿಗೆ ಬರುವಷ್ಟರಲ್ಲಿಯೇ ವಿಷಕನ್ಯೆಯಿಂದ ಪರ್ವತರಾಜನು ಸತ್ತ ಸಮಾಚಾರ ನನಗೆ ತಿಳಿಯಿತು. ಈ ವೇಳೆಗೆ ಸರಿಯಾಗಿ ಚಂದ್ರಗುಪ್ತನ ಸೇನೆ ದೂರದಲ್ಲಿ ಬರುತ್ತಿದ್ದುದು ಕಂಡುಬಂತು. ಇದನ್ನರಿತ ನಾನು ರಾಜಕುಮಾರನನ್ನು ವೈರಿಗಳಿಗೆ ಸಿಕ್ಕದಂತೆ ಕರೆತರಲು ಆ ಉಪಕಾರಕ್ಕಾಗಿ ನನ್ನನ್ನು ಮಲಯಕೇತು, ತನ್ನ ಬಳಿಯಲ್ಲಿಯೇ ಇಟ್ಟುಕೊಂಡಿದ್ದಾನೆ. ಈಗ ನೀವು ಬಂದುದರಿಂದ ಮಲಯಕೇತುವಿನ ಬಯಕೆ ಕೈಗೂಡಿತು. ತಾವು ರಾಜಸಭೆಗೆ ದಯವಿಟ್ಟು ಬರಬೇಕು. ಇದು ರಾಜಕುಮಾರನ ಕೋರಿಕೆ.'

ಭಾಗುರಾಯಣನ ಮಾತನ್ನು ಮನ್ನಿಸಿ, ರಾಕ್ಷಸನು ರಾಜಸಭೆಗೆ ಬರಲು, ಮಲಯಕೇತು ಆತನನ್ನು ವಿಶ್ವಾಸದಿಂದ ಕಂಡು ನಮಸ್ಕರಿಸಿದನು. ತನ್ನನ್ನು ಹರಸಿದ ರಾಕ್ಷಸನನ್ನು ಕುರಿತು ಮಲಯಕೇತು 'ಅಮಾತ್ಯರೇ, ನೀವು ನನ್ನಲ್ಲಿಗೆ ಬಂದುದರಿಂದ ನಾನು ಧನ್ಯನಾದೆ. ನನ್ನ ತಂದೆ ಸತ್ತ ಶೋಕ ಇಂದಿಗೆ ಕೊನೆಗಂಡಿತು. ನನ್ನನ್ನು ಮಮತೆಯಿಂದ ನಿಮ್ಮ ಮಗನಂತೆ ಕಂಡು ಸಹಾಯಮಾಡಬೇಕು. ಇನ್ನು ವಿಶ್ರಮಿಸಿಕೊಳ್ಳಿ' ಎಂದು ನುಡಿದು ಅವನಿಗೆ ಉಚಿತವಾದೆಡೆಯಲ್ಲಿ ಬೀಡಾರ ಮಾಡಿಸಿದನು.

ಮೂರನೆಯದಿನ ರಾಕ್ಷಸನು ಮಲಯಕೇತುವನ್ನು ಏಕಾಂತದಲ್ಲಿ ಕಂಡನು. ಅಮಾತ್ಯನು ರಾಜಕುಮಾರನಿಗೆ 'ಕುಮಾರ, ಚಾಣಕ್ಯನು ನಿಮ್ಮ ತಂದೆಯಿಂದ ಎಷ್ಟು ಉಪಕಾರ ಹೊಂದಿದನು! ಆದರೆ ಅದರ ಫಲ– ಮಿತ್ರದ್ರೋಹ! ರಾಜಾಧಿರಾಜನಿಗೆ ಎಂಥ ಸಾವು ಬಂತು! ಇಷ್ಟೆಲ್ಲ ಕಪಟವನ್ನೇಕೆ ಆಚರಿಸಿದ ಚಾಣಕ್ಯ?—ಅರ್ಧರಾಜ್ಯವನ್ನು ಉಳಿಸಿಕೊಳ್ಳುವುದಕ್ಕಾಗಿ. ಇದಕ್ಕಾಗಿ ನೀನು ಚಿಂತಿಸಬೇಡ. ನಂದರ ರಾಜ್ಯದಲ್ಲಿ ನನಗೆ ಪ್ರಜೆಗಳ ಬೆಂಬಲವಿದೆ. ನನ್ನ ಕಡೆಯವರು ಕಪಟ

ದಿಂದ ಚಂದ್ರಗುಪ್ತನನ್ನು ಕೊಲ್ಲಲು ಸಮಯ ನೋಡುತ್ತಿದ್ದಾರೆ. ಈ ವೇಳೆಯಲ್ಲಿ ನೀನು ಸುಮ್ಮನಿರದೆ ಧೈರ್ಯಮಾಡಿ ಸೇನೆಯನ್ನು ಜೊತೆಗೊಳಿಸು. ನಿನ್ನ ಸಹಾಯದಿಂದ ಪಾಟಲೀಪುರವನ್ನು ಮುತ್ತಿ, ಹೇಗಾದರೂ ಚಂದ್ರಗುಪ್ತನನ್ನು ಸಂಹರಿಸಿ ನಿನ್ನನ್ನು ಆ ಸಿಂಹಾಸನದಲ್ಲಿ ಕುಳ್ಳಿರಿಸುವೆನು. ನನಗೆ ರಾಜ್ಯದ ಮೇಲೆ ಆಸೆಯಿಲ್ಲ. ಸ್ವಾಮಿಭಕ್ತಿಯನ್ನು ಮೆರೆಯುವುದೇ ನನ್ನ ಗುರಿ' ಎಂದು ಅವನನ್ನು ಪ್ರೋತ್ಸಾಹಿಸಿದನು.

'ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ' ಎಂಬ ನಾಣ್ಣುಡಿಯಂತೆ ಮಲಯಕೇತುವಿನ ಆಸೆಯನ್ನೇ ಅಮಾತ್ಯನು ನುಡಿದನು. ರಾಕ್ಷಸನು ಮನಸ್ಸು ಮಾಡಿದರೆ ಅವನ ಮುಂದೆ ಚಾಣಕ್ಯನ ತಂತ್ರ ಎಷ್ಟು ಮಾತ್ರ! ಮಲಯಕೇತುವಿಗೆ ರಾಕ್ಷಸನಲ್ಲಿ ನಂಬಿಕೆಯುಂಟಾಗಿ, ತನ್ನೆಲ್ಲ ಅಧಿಕಾರಿಗಳ ಎದುರಿಗೆ ಅವನಿಗೆ ಸರ್ವಾಧಿಕಾರವನ್ನು ಕೊಟ್ಟನು. ರಾಕ್ಷಸನು ಕಾಲಕಳೆಯದೆ ಮುಂದಿನ ಕಾರ್ಯಗಳಿಗೆ ಗಮನಕೊಟ್ಟನು.

## ೨೨. ಆಶ್ರಯ

ಇತ್ತ ಪಾಟಲೀಪುರದಲ್ಲಿ ಚಾಣಕ್ಯನು ರಾಕ್ಷಸನ ಸಂಗ್ರಹಕ್ಕಾಗಿ ಎಲ್ಲ ಪ್ರಯತ್ನಗಳನ್ನೂ ನಡೆಸಿದನು. ಅಮಾತ್ಯನು ಮಲಯಕೇತುವಿನ ಆಶ್ರಯವನ್ನು ಸಂಪಾದಿಸಿದುದು ಸಮಿದ್ಧಾರ್ಥಕನೆಂಬ ಗೂಢಚಾರನಿಂದ ಚಾಣಕ್ಯನಿಗೆ ತಿಳಿಯಿತು. ಅವನು ತನ್ನ ಮನಸ್ಸಿನಲ್ಲಿ 'ಚಂದ್ರಗುಪ್ತನ ಮೇಲೆ ಹಗೆ ಸಾಧಿಸಲು ರಾಕ್ಷಸನು ಮಲಯಕೇತುವಿನೊಡನೆ ನಮ್ಮಮೇಲೆ ದಂಡೆತ್ತಿಬರಲಿ. ಅವನು ಪಾಟಲೀಪುರದ ಹತ್ತಿರಕ್ಕೆ ಬಂದೊಡನೆಯೇ ಆನೆಯನ್ನು ಉಪಾಯದಿಂದ ಹಿಡಿತರುವಂತೆ ಹಿಡಿತರುವೆನು' ಎಂದುಕೊಂಡು ರಾಕ್ಷಸನ ಬಳಿ ಎಚ್ಚರಿಕೆಯಿಂದಿರುವಂತೆ ಗೂಢಚಾರನಿಗೆ ಹೇಳಿ ಕಳುಹಿಸಿದನು.

ಮಾರನೆಯದಿನ ಚಾಣಕ್ಯನು ರಾಜಸಭೆಯಲ್ಲಿ ಕುಳಿತಿರಲು, ದೂತರು ಬಂದು ವೇತನಕ್ಕಾಗಿ ಭಾಗುರಾಯಣಾದಿಗಳು ಇನ್ನೂ ರಾಜಸನ್ನಿಧಿಗೆ ಬಂದಿಲ್ಲವೆಂಬ ಅಂಶವನ್ನು ಅವನಲ್ಲಿ ಅರಿಕೆಮಾಡಿದರು

ಆ ಮಾತನ್ನು ಕೇಳಿ ಚಾಣಕ್ಯನು ಸೇನಾಪತಿಗಳ ಮೇಲೆ ಕೋಪವನ್ನು ನಟಿಸಿ, ಬಳಿಯಿದ್ದ ಅಧಿಕಾರಿಗಳಿಗೆ 'ಭದ್ರಭಟಾದಿಗಳಿಗೆ ಚಂದ್ರಗುಪ್ತನ ಏಳಿಗೆಯನ್ನು ನೋಡಿ ಸಹಿಸದೆಂದು ತೋರುತ್ತದೆ. ಅವರು ಮನಸ್ಸಿನಲ್ಲಿ ಏನನ್ನು ಯೋಚಿಸಿರುವರೋ ದೇವರೇ ಬಲ್ಲ! ನಮ್ಮನ್ನು ಕಂಡರೆ ಅವರಿಗೆ ಉದಾಸೀನಭಾವ. ಈ ಅಧಿಕಾರಿಗಳು ಕೊಬ್ಬಿ ಹೋಗಿದ್ದಾರೆ. ಇವರನ್ನು ಅಧಿಕಾರದಿಂದ ತೆಗೆದುಹಾಕಿದೆ. ಇವರಿಂದಾಗುವ ಕೆಲಸವನ್ನು ನಾವೇ ನೋಡಿಕೊಳ್ಳುತ್ತೇವೆ. ನಮ್ಮ ನಗರದಿಂದ ಇವರನ್ನು ಈಗಲೇ ಹೊರಡಿಸಿ. ಇಲ್ಲವಾದರೆ ಸೇನಾಪತಿಗಳು ರಾಜನ ಕೋಪಕ್ಕೆ ಗುರಿಯಾಗಬೇಕಾದೀತು. ನಮ್ಮ ಆಜ್ಞೆಯನ್ನು ಅವರಿಗೆ ಕೂಡಲೇ ತಿಳಿಸಿ' ಎಂದು ಅಪ್ಪಣೆಮಾಡಿದನು. ಅಧಿಕಾರಿಗಳು ಹೊರಟುಹೋದ ಮೇಲೆ ಸಿದ್ಧಾರ್ಥಕನನ್ನು ಕರೆದು, 'ಭದ್ರಭಟಾದಿಗಳು ಮಲಯಕೇತುವಿನಲ್ಲಿ ಹೋಗಿ ಆಶ್ರಯ ಪಡೆಯಲಿ. ಸೇನೆಯೊಡನೆ ಅವರು ಅಲ್ಲಿದ್ದು ಚಂದ್ರಗುಪ್ತನ ಕಾರ್ಯವನ್ನು ಸಾಧಿಸಲಿ. ಸೇನಾಪತಿಗಳಿಗೆ ಈ ಲೇಖನವನ್ನೂ ಬೇಕಾದಷ್ಟು ಧನವನ್ನೂ ಕೊಟ್ಟು ನಮ್ಮ ಅಪ್ಪಣೆಯನ್ನು ಅವರಿಗೆ ತಿಳಿಸು' ಎಂದು ಚಾಣಕ್ಯನು ಹೇಳಿ ಕಳುಹಿಸಿದನು. ರಾಜಾಜ್ಞೆಗೆ ತಲೆಬಾಗಿ ಭದ್ರಭಟಾದಿಗಳು ತಮ್ಮ ಸೇನೆಗಳೊಡನೆ ನಗರವನ್ನು ಬಿಟ್ಟರು.

ಕೆಲವು ದಿನಗಳಾದ ಮೇಲೆ ಭದ್ರಭಟಾದಿಗಳು ಮಲಯಕೇತುವಿನ ರಾಜಧಾನಿಗೆ ಬಂದು ಶೇಖರ ಭಾಗುರಾಯಣಾದಿಗಳನ್ನು ಕಾಣಿಸಿಕೊಂಡರು. ಅವರ ಒಪ್ಪಿಗೆಯನ್ನು ಪಡೆದು ಮಾರನೆಯ ದಿನ ಮಲಯಕೇತುವನ್ನು ಕಂಡು ಕಾಣಿಕೆಕೊಟ್ಟು ಚಂದ್ರಗುಪ್ತನು ತಮ್ಮನ್ನು ಅಧಿಕಾರದಿಂದ ತೆಗೆದುಹಾಕಿದ ಬಗೆಯನ್ನು ಆತನಿಗೆ ವಿವರಿಸಿದರು. ಇವರ ಮಾತನ್ನು ಕೇಳಿ ರಾಜಕುಮಾರನು ಭಾಗುರಾಯಣನ ಮುಖವನ್ನು ನೋಡಲು ಅವನು 'ಇವರ ಹೇಳಿಕೆ ನಿಜವಾದರೆ ಚಂದ್ರಗುಪ್ತನು ನಮ್ಮ ಕೈವಶನಾದನೆಂದೇ ಹೇಳಬೇಕು. ಇವರಾಗಿಯೇ ನಮ್ಮಲ್ಲಿಗೆ ಬಂದಿರುವ ಕಾರಣ ಇವರಿಂದ ನಮ್ಮ ಕಾರ್ಯಕ್ಕೆ ಬಹುಮಟ್ಟಿನ ಅನುಕೂಲವಾಯಿತು. ಇವರೆಲ್ಲ ಶೂರರು' ಎಂದು ನುಡಿದನು. ಭಾಗುರಾಯಣನ ಮಾತು ಮಲಯಕೇತುವಿಗೆ ಸೋಜಿಗವೆನಿಸಿತು. ಹಿಂದೆ

ಭದ್ರಭಟಾದಿಗಳು ಚಂದ್ರಗುಪ್ತನಿಗೆ ಬರೆದುಕೊಟ್ಟ ಕಾಗದವನ್ನು ರಾಜಕುಮಾರನು ಸೇನಾಪತಿಗೆ ಕೊಡಲು ಭಾಗುರಾಯಣನು ಅದನ್ನು ನೋಡಿಕೊಂಡು, ‘ ಕುಮಾರ, ಇದು ನಾವು ಚಂದ್ರಗುಪ್ತನಿಗೆ ಬರೆದುಕೊಟ್ಟ ಒಪ್ಪಿಗೆಯ ಪತ್ರ, ನಿಜ. ಆದರೆ ಧರ್ಮಕಾರ್ಯಕ್ಕಾಗಿ ನಾವು ಬರೆದುಕೊಟ್ಟ ಈ ಲೇಖನವನ್ನು ಚಂದ್ರಗುಪ್ತನು ರಾಜಕಾರ್ಯಕ್ಕಾಗಿ ಉಪಯೋಗಿಸಿಕೊಂಡಿದ್ದಾನೆ. ಕತ್ತರಿಸಿರುವ ಇದರ ಭಾಗವೇ ನನ್ನ ಮಾತಿಗೆ ಸಾಕ್ಷಿ. ಇದು ಚಾಣಕ್ಯನ ತಂತ್ರ’ ಎಂದು ಮಲಯಕೇತುವಿಗೆ ಸಮಾಧಾನ ಹೇಳಿದನು. ಚಾಣಕ್ಯನು ಮಹಾಕಪಟಿ. ಅವನು ಏನನ್ನು ತಾನೇ ಮಾಡಿರಲಾರ? ಎಂದುಕೊಂಡು ಮಲಯಕೇತು ಸೇನಾಪತಿಗಳಿಗೆ ಆಶ್ರಯಕೊಡಲು ಒಪ್ಪಿದನು.

ಈ ಸಮಯಕ್ಕೆ ಸರಿಯಾಗಿ ರಾಕ್ಷಸನು ರಾಜಸಭೆಗೆ ಬಂದನು. ಸೇನಾಪತಿಗಳು ಅಮಾತ್ಯನ ಬರುವಿಕೆಯನ್ನೇ ಗಮನಿಸದೆ, ಮಲಯಕೇತುವಿನ ಬಳಿ ನಿಂತಿದ್ದರು. ರಾಕ್ಷಸನು ತನ್ನ ಮನಸ್ಸಿನಲ್ಲಿ ‘ ಭದ್ರಭಟಾದಿಗಳು ಇಲ್ಲಿಗೆ ಬರಲು ಕಾರಣವೇನು? ಚಂದ್ರಗುಪ್ತನಲ್ಲಿ ಇವರಿಗೆ ನಿಜವಾದ ಕೋಪವುಂಟೇ? ಇಲ್ಲವೇ ಇದು ಚಾಣಕ್ಯನ ಮತ್ತೊಂದು ಕಪಟವೋ ತಿಳಿಯದು. ಇವರನ್ನು ಇಲ್ಲಿಂದ ಕಳುಹಿಸಕೂಡದು. ಏಕೆಂದರೆ ಇವರು ಇನ್ನೊಬ್ಬ ರಾಜನನ್ನು ಆಶ್ರಯಿಸಿದರೆ ನಮಗೆ ನಷ್ಟ. ಚಂದ್ರಗುಪ್ತನನ್ನೇ ಮತ್ತೆ ಕೂಡಿಕೊಂಡರೆ ಇನ್ನೂ ಕಷ್ಟ. ಅವರು ನನ್ನನ್ನು ಲಕ್ಷಿಸದೆ ಶೇಖರಭಾಗುರಾಯಣರನ್ನು ಆಶ್ರಯಿಸಿದ್ದಾರೆ. ಆದರೇನಂತೆ? ಹೆಚ್ಚಾಗಿ ಸ್ವಾತಂತ್ರ್ಯವನ್ನು ಕೊಡದೆ ಇವರನ್ನು ಇಲ್ಲಿಯೇ ಇಟ್ಟುಕೊಳ್ಳುತ್ತೇನೆ’ ಎಂದು ಯೋಚಿಸುತ್ತಿದ್ದನು. ಅಷ್ಟರಲ್ಲೇ ಮಲಯಕೇತು ಅಮಾತ್ಯನನ್ನು ಸೇನಾಪತಿಗಳ ವಿಷಯವಾಗಿ ಆತನ ಅಭಿಪ್ರಾಯವೇನೆಂದು ಕೇಳಲು, ರಾಕ್ಷಸನು ‘ ಕುಮಾರ, ಈ ಸೇನಾಪತಿಗಳು ಶೂರರು. ಇವರಿಂದ ನಮ್ಮ ಕಾರ್ಯಕ್ಕೆ ಅನುಕೂಲವಾಗುತ್ತದೆ. ಇವರಿಗೆ ತಕ್ಕ ಕೆಲಸಗಳನ್ನು ನಾನೇ ನಿಯಮಿಸುತ್ತೇನೆ’ ಎಂದನು. ಮಲಯಕೇತು ಅಮಾತ್ಯನ ಮಾತನ್ನು ಒಪ್ಪಿದನು.

ಅವರಿಗೆ ಅನುಕೂಲವಲ್ಲದ ಕಾರ್ಯಗಳಲ್ಲಿ ಸೇನಾಪತಿಗಳನ್ನು ರಾಕ್ಷಸನು ನಿಯಮಿಸಲು, ಮುಂದಿನ ಕಾರ್ಯಸಾಧನೆಗಾಗಿ, ಸೇನಾ

ಪತಿಗಳು ಮನವಲ್ಲದ ಮನಸ್ಸಿನಿಂದ ಕಾಲಕಳೆಯುತ್ತ ಮಲಯಕೇತು ವಿನ ಬಳಿ ಇದ್ದರು.

## ೨೩. ರಾಕ್ಷಸನ ಮುದ್ರಿಕೆ

ರಾಜಧಾನಿಯಲ್ಲಿ ಅಮಾತ್ಯರಾಕ್ಷಸನ ಮನೆಯ ಜನರಿರುವ ಸ್ಥಳ ವನ್ನು ತಿಳಿದುಬಂದು ಹೇಳುವಂತೆ ನಿಯಮಿತರಾಗಿದ್ದ ಗೂಢಚಾರರಲ್ಲಿ ಮರಾಳನೆಂಬುವನು ಚಿತ್ರಪಟಗಳನ್ನು ತನ್ನೊಡನೆ ತೆಗೆದುಕೊಂಡು ತನ್ನ ಕಾರ್ಯಕ್ಕೆ ಉಚಿತವಾದ ವೇಷವನ್ನು ಧರಿಸಿ ಗಾನಮಾಡುತ್ತ ಒಂದು ದಿನ ಬೀದಿಯಲ್ಲಿ ಬರುತ್ತಿದ್ದನು. ಅಲ್ಲಲ್ಲಿ ಗುಂಪುಕೂಡಿ ಚಿತ್ರ ಪಟಗಳನ್ನು ನೋಡುವುದಕ್ಕೆ ಬಂದ ಜನರಿಗೆ ಅವುಗಳನ್ನು ತೋರಿಸುತ್ತ ‘ ಇದು ಸ್ವರ್ಗ ; ಪುಣ್ಯವಂತರ ನೆಲೆವೀಡು. ಧರ್ಮಮೂರ್ತಿ ಸ್ವರ್ಗದ ಅಧಿಪತಿ. ಇದು ನರಕ ; ಪಾಪಿಗಳನ್ನು ದಂಡಿಸುವುದು ಇಲ್ಲೇ. ಯಮ ಮೂರ್ತಿ ನರಕದ ನಿಯಾಮಕ. ಈ ಮಾತು ಸತ್ಯ. ಆದ್ದರಿಂದ ನೀವೆಲ್ಲರೂ ಸತ್ಯವನ್ನು ನುಡಿಯಿರಿ ; ಧರ್ಮವನ್ನು ಆಚರಿಸಿ ’ ಎಂದು ಬೋಧಿಸುತ್ತಿದ್ದನು. ಹೀಗೆ ಬೋಧಿಸುತ್ತ ಪ್ರತಿಮನೆಯನ್ನೂ ಹೊಕ್ಕು ತನ್ನ ಗಾನದಿಂದ ಜನರನ್ನು ತೃಪ್ತಿಪಡಿಸುತ್ತ ಮನೆಯವರು ಕೊಟ್ಟು ದನ್ನು ಸ್ವೀಕರಿಸುತ್ತಿದ್ದನು. ಕೊನೆಗೆ ಅವನು ಚಂದನದಾಸನೆಂಬ ರತ್ನಪಡಿ ವ್ಯಾಪಾರಿಯ ಮನೆಗೆ ಬಂದು ಅಲ್ಲಿಯೂ ಮನೆಯವರಿಗೆ ಚಿತ್ರ ಪಟಗಳನ್ನು ತೋರಿಸಿ, ಗಾನದಿಂದ ಅವರನ್ನು ಸಂತೋಷಪಡಿಸಿ ಅಲ್ಲಿನ ವಿದ್ಯಮಾನವನ್ನು ಚೆನ್ನಾಗಿ ಸಂಗ್ರಹಿಸಿಕೊಂಡು ಚಾಣಕ್ಯನ ಆಶ್ರಮಕ್ಕೆ ಬಂದನು.

ಚಾಣಕ್ಯನ ಆಶ್ರಮಕ್ಕೆ ಬಂದ ಮರಾಳನು ಬಾಗಿಲಲ್ಲಿ ನಿಂತಿದ್ದ ಶಿಷ್ಯನನ್ನು ನೋಡಿ ‘ ಅಯ್ಯಾ ಬ್ರಾಹ್ಮಣ, ಬ್ರಹ್ಮಲೋಕದಲ್ಲಿರುವ ಮರಾಳಪಕ್ಷಿಯ ಭಾವಚಿತ್ರ ನನ್ನಲ್ಲಿ ಉಂಟು. ಇದನ್ನು ನೋಡಿ ಇದರ ಅಭಿಪ್ರಾಯವನ್ನು ತಿಳಿದು ಹೇಳುವ ಪ್ರಾಜ್ಞರು ಈ ಆಶ್ರಮದಲ್ಲಿ ಉಂಟೇ ? ’ ಎಂದನು.

ಶಿಷ್ಯ—ಅಯ್ಯಾ ಚಿತ್ರಪಟಧಾರಿ, ಈ ವಿಷಯವನ್ನು ನಮ್ಮ ಗುರು ಗಳಲ್ಲಿ ಬಿನ್ನೈಸಿಬರುವೆನು. ಅಲ್ಲಿಯವರೆಗೆ ಸ್ವಲ್ಪ ನೀನು ಇಲ್ಲಿಯೇ ಇರು.

ಹೀಗೆಂದು ಹೇಳಿ ಶಿಷ್ಯನು ಆಶ್ರಮದ ಒಳಹೊಕ್ಕು ಈ ವಿಷಯವನ್ನು ಚಾಣಕ್ಯನಿಗೆ ತಿಳಿಸಿದನು. ಚಾಣಕ್ಯನು ಮರಾಳನ ಮಾತಿನ ಭಾವವನ್ನು ಗ್ರಹಿಸಿ ಅವನು ತನ್ನ ಗೂಢಚಾರನಾಗಿರಬೇಕೆಂದು ಊಹಿಸಿ ಅವನನ್ನು ಒಳಕ್ಕೆ ಕರೆಸಿಕೊಂಡನು. ಮರಾಳನು ಒಳಕ್ಕೆ ಬರಲು ಚಾಣಕ್ಯನು ಅವನನ್ನು ನೋಡಿ ಈ ರೀತಿ ಹೇಳಿದನು: 'ಅಯ್ಯಾ ಮರಾಳ, ಇಷ್ಟು ದಿನಗಳವರೆಗೆ ನೀನು ಯಾವ ಕಾರ್ಯವನ್ನು ನೋಡುತ್ತಿದ್ದೆ ? ಈ ಪಟ್ಟಣದಲ್ಲಿ ಚಂದ್ರಗುಪ್ತನಲ್ಲಿ ಯಾರಿಗೆ ಅನುರಾಗವಿದೆ? ಯಾರಿಗೆ ದ್ವೇಷವುಂಟು ? '

ಮರಾಳ—ಪೂಜ್ಯರೆ, ಈ ಪಟ್ಟಣದಲ್ಲಿ ಮೂವರು ಹೊರತಾಗಿ ಉಳಿದ ಪ್ರಜೆಗಳೆಲ್ಲರೂ ಚಂದ್ರಗುಪ್ತನಲ್ಲಿ ಅನುರಕ್ತರಾಗಿರುವರು.

ಚಾಣಕ್ಯ—ಆ ಮೂವರು ಯಾರು ?

ಮರಾಳ—ಆರ್ಯರೇ, ರಾಕ್ಷಸನಿಗೆ ಮಿತ್ರನಾಗಿ ಚಂದ್ರಗುಪ್ತನ ಅಭ್ಯುದಯವನ್ನು ನೋಡಿ ಸಹಿಸಲಾರದೆ ಹಿಂದೆಮುಂದೆ ಆಡಿಕೊಳ್ಳುತ್ತಿರುವ ಕ್ಷಪಣಕ ಜೀವಸಿದ್ಧಿಯೊಬ್ಬ. ಅಮಾತ್ಯರಾಕ್ಷಸನಿಗೆ ಆಪ್ತರಾಯಸದವನಾದ ಶಕಟದಾಸನು ಮತ್ತೊಬ್ಬ. ಇವರಿಬ್ಬರಿಗೂ ಮಿಗಿಲಾಗಿ ರಾಕ್ಷಸನ ಎರಡನೆಯ ಹೃದಯದಂತಿರುವ ರತ್ನಪಡಿ ವ್ಯಾಪಾರಿ ಚಂದನದಾಸ ಮೂರನೆಯವನು. ರಾಕ್ಷಸನು ಈ ನಗರವನ್ನು ಬಿಟ್ಟು ಹೋಗುವಾಗ ತನ್ನ ಹೆಂಡತಿ ಮಕ್ಕಳನ್ನು ಚಂದನದಾಸನ ಮನೆಯಲ್ಲಿ ಬಿಟ್ಟು ಹೋಗಿರುವಂತೆ ಕಾಣುತ್ತದೆ.

ಚಾಣಕ್ಯ—ಈ ವಿಷಯ ನಿನಗೆ ತಿಳಿದ ಬಗೆ ಹೇಗೆ?

ಮರಾಳ—ಪೂಜ್ಯರೇ, ಈ ದಿನ ನಾನು ಚಿತ್ರಪಟಗಳನ್ನು ತೆಗೆದುಕೊಂಡು ಗಾನಮಾಡುತ್ತ, ಪ್ರತಿಮನೆಯಲ್ಲಿಯೂ ಈ ಪಟಗಳನ್ನು ತೋರಿಸುತ್ತ ಮನೆಯವರು ಕೊಟ್ಟುದನ್ನು ಸ್ವೀಕರಿಸುತ್ತ ಚಂದನದಾಸನ ಮನೆಗೆ ಬಂದನು. ಅಲ್ಲಿ ಚಿತ್ರಪಟಗಳನ್ನು ತೋರಿಸುತ್ತಿರುವಾಗ ಅಮಾತ್ಯರಾಕ್ಷಸನ ಹೋಲಿಕೆಯುಳ್ಳ ರೂಪವಂತನಾದ ಐದುವರುಷದ ಒಬ್ಬ ಹುಡುಗನು ನನ್ನ ಸಂಗೀತವನ್ನು ಕೇಳಿ ಹುಡುಗತನದ ಚಾಪಲ್ಯಕ್ಕೆ ಒಳಗಾಗಿ ಪಟಗಳನ್ನು ನೋಡಲು ಒಳಗಿನಿಂದ ಓಡಿಬಂದು ನನ್ನ ಬಳಿ ನಿಂತನು. ಆ ಮಗುವನ್ನು ನೋಡಿ ನನ್ನ ಮನಸ್ಸಿಗೆ ಏನೋ

ಸಂಶಯವುಂಟಾಗಿ ಆ ಮಗುವನ್ನೇ ಚೆನ್ನಾಗಿ ನೋಡುತ್ತಿದ್ದೆ. ಆ ಸಮಯದಲ್ಲಿ ಆ ಹುಡುಗನು ಓಡಿಬಂದ ಒಳಮನೆಯಿಂದ ಹೆಂಗಸೊಬ್ಬಳು ಹೆದರಿದ ಧ್ವನಿಯಿಂದ ಒಳಗೆ ಬರುವಂತೆ ಮಗುವನ್ನು ಕರೆಯತೊಡಗಿದಳು. ಇಲ್ಲಿ ಏನೋ ವಿಶೇಷವಿರಬೇಕೆಂದು ನಾನು ನಂದರ ಭಾವಚಿತ್ರಗಳನ್ನು ಹರಡಿಕೊಂಡು ಅಲ್ಲಿ ನೆರೆದಿದ್ದವರಿಗೆ ಅವುಗಳನ್ನು ತೋರಿಸುತ್ತ ನಡುನಡುವೆ ಅಮಾತ್ಯರಾಕ್ಷಸನ ಭಾವಚಿತ್ರವನ್ನು ತೆಗೆದು ತೋರಿಸುತ್ತ ಅವನ ಗುಣಗಾನವನ್ನು ಮಾಡುತ್ತಿದ್ದೆನು. ಆಗ ಆ ಹೆಂಗಸು ಒಳಗಡೆ ಬಾಗಿಲ ಬಳಿ ಬಂದುನಿಂತು ಸನ್ನೆಮಾಡಿ ಅನೇಕಬಾರಿ ಕರೆದರೂ ಮಗು ಒಳಗೆ ಹೋಗದೆ ಪಟದ ಬಳಿಯಲ್ಲೇ ನಿಂತಿತ್ತು. ಆಗ ಆಕೆ ಬೇಗ ಬಂದು ಮಗುವನ್ನು ಗದರಿಸಿ ಅದರ ಭುಜವನ್ನು ಹಿಡಿದೆಳೆದರೂ ಮಗು ಆ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಸಮೀಪದಲ್ಲೇ ಇದ್ದ ನಂದರ ಮತ್ತು ಅಮಾತ್ಯರ ಭಾವಚಿತ್ರಗಳನ್ನು ನೋಡಿ ಆಕೆ ಕಣ್ಣೀರು ತುಂಬಿದಳು. ಮುತ್ತಿನಂತೆ ಬೀಳುತ್ತಿದ್ದ ಕಂಬನಿಗಳನ್ನು ಸೆರಗಿನಿಂದೊರಸಿಕೊಳ್ಳುತ್ತ, ಮಗುವನ್ನು ಒಂದು ಕೈಯಿಂದ ಬಲವಂತವಾಗಿ ಸೆಳೆದುಕೊಂಡು ಹೋಗುತ್ತಿರಲು ಆಕೆಯ ಕೈಯಲ್ಲಿ ಪುರುಷನು ಧರಿಸತಕ್ಕ, ಅಕ್ಷರಗಳಿಂದ ಕೂಡಿದ ಅಷ್ಟಕೋಣಾಕಾರದ ಮುದ್ರಿಕೆಯೊಂದನ್ನು ಕಂಡೆನು. ಪೂರ್ಣಗರ್ಭವನ್ನು ಧರಿಸಿದ ಆಕೆ ಮೆಲ್ಲನೆ ಒಳಕ್ಕೆ ತೆರಳಿದುದರಿಂದ ಅವಳ ಸೌಂದರ್ಯಲಕ್ಷಣಗಳು ನನಗೆ ಚೆನ್ನಾಗಿ ತಿಳಿದುಬಂದುವು. ಇದೆಲ್ಲವನ್ನೂ ನೋಡಿದರೆ ರಾಕ್ಷಸನ ಹೆಂಡತಿ ಮಕ್ಕಳು ಚಂದನದಾಸನ ಮನೆಯಲ್ಲಿ ಮರೆಯಾಗಿರುವಂತೆ ತೋರುತ್ತದೆ.

ಚಾಣಕ್ಯ (ಮನಸ್ಸಿನಲ್ಲಿ)—ಇವನು ಹೇಳಿದುದೆಲ್ಲ ಸರಿಯೆಂದೇ ತೋರುತ್ತದೆ. ಆ ಹೆಂಗಸಿನ ಕೈಯಲ್ಲಿರುವ ಮುದ್ರಿಕೆ ರಾಕ್ಷಸನದಾಗಿರಬಹುದು. ಅದು ನಮ್ಮ ಕೈಸೇರಿದರೆ ಅನೇಕ ಕಾರ್ಯಗಳಿಗೆ ಉಪಯೋಗವಾಗಬಹುದು. (ಪ್ರಕಾಶವಾಗಿ) ಎಲೈ ಮರಾಳ, ನೀನು ಹೇಳಿದ ಅಭಿಪ್ರಾಯ ನಮ್ಮ ಮನಸ್ಸಿಗೆ ಬಂತು. ಚಂದ್ರಗುಪ್ತನ ಏಳಿಗೆಯಲ್ಲಿ ಅಸಹನೆಯುಳ್ಳ ಕ್ಷಪಣಕನೇ ಮುಂತಾದವರಿಗೆ ತಕ್ಕುದನ್ನು ಮಾಡಿಸುವೆವು. ನೀನು ನಿನ್ನ ಕೆಲಸದಲ್ಲಿ ಜಾಗರೂಕನಾಗಿರು.

ಮರಾಳನು ಹೊರಟುಹೋದ ಮೇಲೆ ಚಾಣಕ್ಯನು ರಾಕ್ಷಸನ

ಮುದ್ರಿಕೆಯನ್ನು ಸಂಗ್ರಹಿಸುವ ಉಪಾಯವನ್ನು ನೆನೆದು ಸಿದ್ಧಾರ್ಥಕನನ್ನು ತನ್ನಲ್ಲಿಗೆ ಕರೆಸಿಕೊಂಡನು.

ತನ್ನಲ್ಲಿಗೆ ಬಂದ ಸಿದ್ಧಾರ್ಥಕನಿಗೆ ಚಾಣಕ್ಯನು 'ಸಿದ್ಧಾರ್ಥಕ, ಚಂದನದಾಸನೆಂಬ ವರ್ತಕನ ಮನೆಯಲ್ಲಿ ರಾಕ್ಷಸನ ಹೆಂಡತಿ ಮಕ್ಕಳಿದ್ದಾರೆ. ಅಮಾತ್ಯನ ಹೆಂಡತಿಯ ಕೈಯಲ್ಲಿ ಆತನ ಮುದ್ರೆಯುಂಗುರವಿದೆ. ಅದನ್ನು ಈ ರೀತಿಯಲ್ಲಿ ತರಿಸು' ಎಂದು ಹೇಳಿ ಅವನ ಕಿವಿಯಲ್ಲಿ ಗುಟ್ಟಾಗಿ ಏನನ್ನೋ ಹೇಳಿದನು. ಆ ಬಳಿಕ ರಾಯಸದವರ ಬಳಿಯಲ್ಲಿದ್ದ ರಾಕ್ಷಸನ ಮುದ್ರೆಯ ಕಾಗದವನ್ನು ತರಿಸಿ ಅದನ್ನು ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು ಕಳುಹಿಸಿದನು.

ಚಾಣಕ್ಯನ ಅಪ್ಪಣೆಯಂತೆ ಸಿದ್ಧಾರ್ಥಕನು ಆ ಕಾಗದದಲ್ಲಿ ಒತ್ತಿದ ಮುದ್ರಿಕೆಯಂತೆ ಬೇರೊಂದು ಸ್ವರ್ಣಮುದ್ರಿಕೆಯನ್ನು ಮಾಡಿಸಿ, ಹೇಳಿದ ಕೆಲಸವನ್ನು ಮಾಡುವುದರಲ್ಲಿ ನಿಪುಣೆಯಾದ ಓರ್ವ ಸೂಲಗಿತ್ತಿಯನ್ನು ತನ್ನಲ್ಲಿಗೆ ಕರೆಸಿಕೊಂಡು ಬಹುಮಾನಪೂರ್ವಕವಾಗಿ ಅವಳ ಕೈಯಲ್ಲಿ ಆ ಮುದ್ರಿಕೆಯನ್ನು ಕೊಟ್ಟು 'ಅಮಾತ್ಯರಾಕ್ಷಸನ ಹೆಂಡತಿಯ ಬಳಿಯಿರುವ ರಾಕ್ಷಸನ ಮುದ್ರಿಕೆಯನ್ನು ಈ ರೀತಿಯಿಂದ ತೆಗೆದುಕೊಂಡು ಬಾ' ಎಂದು ಹೇಳಿ ಅವಳನ್ನು ಕಳುಹಿಸಿಕೊಟ್ಟನು. ಆ ಬಳಿಕ ನಗರದ ತಳವಾರನನ್ನು ಬರಮಾಡಿಕೊಂಡು 'ನೀನು ಈ ದಿನ ಚಾಣಕ್ಯರ ಮುಂದೆ ಹೇಳುವ ವರ್ತಮಾನದೊಡನೆ ಈ ವಿಷಯವನ್ನು ಬಿನ್ನೈಸು' ಎಂದು ಅವನಿಗೊಂದು ವಿಷಯವನ್ನು ಹೇಳಿ ಅವನನ್ನು ಬೀಳ್ಕೊಟ್ಟನು.

ಆ ದಿನ ಚಾಣಕ್ಯನು ಆಸ್ಥಾನದಲ್ಲಿ ಕುಳಿತಿದ್ದಾಗ, ತಳವಾರನು ಬಂದು ಎಂದಿನಂತೆ ದಿನದ ಸಮಾಚಾರವನ್ನು ತಿಳಿಸಿದ ಮೇಲೆ 'ಪೂಜ್ಯರೇ, ಈ ದಿನ ಬ್ರಾಹ್ಮಣ ಸ್ತ್ರೀಯೊಬ್ಬಳ ಹೆರಿಗೆಯ ಸಮಯದಲ್ಲಿ ಓರ್ವ ಸೂಲಗಿತ್ತಿ—ಅದೇನು ಹೊಟ್ಟೆಯುರಿಯಿಂದಲೋ ತಿಳಿಯದು—ಮಗುವನ್ನು ಕೊಂದು, ಮನೆಯವರನ್ನು ಮೋಸಗೊಳಿಸಿ ಓಡಿಹೋದಳು' ಎಂದು ಬಿನ್ನೈಸಿದನು. ತಳವಾರನ ಮಾತನ್ನು ಕೇಳಿ ಚಾಣಕ್ಯನು ಕೋಪಗೊಂಡವನಂತೆ ನಟಿಸಿ 'ಆಹಾ! ಈ ಪಟ್ಟಣದಲ್ಲಿ ಇಂಥ ಅಕಾರ್ಯ ಎಷ್ಟು ನಡೆದಿರುವುದೋ! ತಿಳಿಯದು. ಈ ನಗರದ ಸೂಲಗಿತ್ತಿಯರನ್ನೆಲ್ಲ ಹಿಡಿದುತಂದು, ವಿಚಾರಿಸಿ, ದಂಡಿಸಿ, ಮುಂದೆ ಈ

ತೆರನಾದ ಅಕಾರ್ಯ ನಡೆಯದಂತೆ ನೋಡಿಕೊಳ್ಳಿ ’ ಎಂದು ಅಪ್ಪಣೆ ಮಾಡಿದನು.

ಚಾಣಕ್ಯನ ಅಪ್ಪಣೆಯಂತೆ ತಳವಾರರು ಸೂಲಗಿತ್ತಿಯರನ್ನು ಬೀದಿ ಬೀದಿಗಳಲ್ಲಿ ಹುಡುಕಿ, ಹಿಡಿದುಕೊಂಡು ಹೋಗಲು ಮೊದಲು ಮಾಡಿದರು. ಆ ಸಮಯದಲ್ಲಿ ಸಿದ್ಧಾರ್ಥಕನಿಂದ ನಿಯಮಿತಳಾದ ಸೂಲಗಿತ್ತಿ ಬೇಗ ಹೋಗಿ ಚಂದನದಾಸನ ನಡುಮನೆಯ ಬಾಗಿಲ ಹಿಂದೆ ಹೆದರಿಕೆಯಿಂದ ನಡುಗುವವಳಂತೆ ನಿಂತುಕೊಂಡಳು. ಅವಳನ್ನು ನೋಡಿ ಆ ಮನೆಯ ಜನರು ‘ ನೀನು ಯಾರು ? ಇಲ್ಲಿಗೇಕೆ ಬಂದೆ ?’ ಎಂದು ಪ್ರಶ್ನಿಸಿದರು. ಆಕೆ ಮನೆಯವರ ಕಾಲನ್ನು ಹಿಡಿದುಕೊಂಡು ‘ ತಾಯಂದಿರಾ, ಅರಮನೆಯವರು ಈ ನಗರದ ಸೂಲಗಿತ್ತಿಯರನ್ನು ಹಿಡಿದು ದೇಶಾಂತರಕ್ಕೆ ಕಳುಹಿಸುತ್ತಿದ್ದಾರೆ. ನಾನು ನಾಲ್ಕು ಮಕ್ಕಳುಳ್ಳವಳು. ಈ ಅವಾಂತರ ಮುಗಿಯುವವರೆಗೆ ನಾಲ್ಕು ದಿನ ಮರೆಯಾಗಿ ನಿಮ್ಮಲ್ಲಿಯೇ ಇರುವೆನು. ದಯವಿಟ್ಟು ಇದಕ್ಕೆ ಅವಕಾಶ ಕೊಡಿ. ಇದರಿಂದ ನಿಮಗೆ ಪುಣ್ಯಬರುವುದು ’ ಎಂದು ಬೇಡಿಕೊಂಡಳು. ಸೂಲಗಿತ್ತಿಯ ಮಾತನ್ನು ಕೇಳಿ ಚಂದನದಾಸನ ಹೆಂಡತಿ ‘ ನಮ್ಮ ಅಮಾತ್ಯರ ಹೆಂಡತಿಗೆ ಹೆರಿಗೆಯ ಕಾಲ ಹತ್ತಿರವಾಗಿದೆಯಷ್ಟೆ. ಆ ಸಮಯಕ್ಕೆ ಸೂಲಗಿತ್ತಿಯರು ದೊರಕುವರೋ ಇಲ್ಲವೋ, ಬಲ್ಲವರಾರು ? ಆದ್ದರಿಂದ ಇವಳನ್ನು ಇಲ್ಲಿಯೇ ಇರಿಸಿಕೊಳ್ಳಬೇಕು ’ ಎಂದು ಯೋಚಿಸಿ ಅವಳಿಗೆ ‘ ನಿನ್ನಿಂದ ನಮಗೆ ಕೆಲಸವುಂಟು. ನೀನು ಬೇರೆ ಕಡೆಗೆ ಹೋಗದೆ ನಮ್ಮಲ್ಲಿಯೇ ಇರು ’ ಎಂದು ಹೇಳಿದಳು. ಅದಕ್ಕೆ ಸೂಲಗಿತ್ತಿ ‘ ನಮ್ಮವ್ವ, ನಾನು ಬದುಕಿದೆ. ಇಲ್ಲಿಯೇ ಇರುತ್ತೇನೆ’ ಎಂದು ಚಂದನದಾಸನ ಮನೆಯಲ್ಲೇ ಇದ್ದುಬಿಟ್ಟಳು.

ಹೀಗಿರಲು ಒಂದು ದಿವಸ ರಾಕ್ಷಸನ ಹೆಂಡತಿಗೆ ಹೆರಿಗೆಯ ಸಮಯ ಸಮೀಪಿಸಲು, ಆಗ ಸಿದ್ಧಾರ್ಥಕನಿಂದ ನಿಯಮಿತಳಾಗಿದ್ದ ಸೂಲಗಿತ್ತಿ ರಾಕ್ಷಸನ ಹೆಂಡತಿ ತೆಗೆದಿಟ್ಟಿದ್ದ ವಸ್ತ್ರಾಭರಣಗಳಲ್ಲಿ ರಾಕ್ಷಸನ ಮುದ್ರಿಕೆಯನ್ನು ತೆಗೆದುಕೊಂಡು ಸಿದ್ಧಾರ್ಥಕನು ಕೊಟ್ಟ ಮುದ್ರಿಕೆಯನ್ನು ಅದರ ಸ್ಥಳದಲ್ಲಿಟ್ಟಳು. ಹೆರಿಗೆಯ ಕೆಲಸ ಮುಗಿದ ಮೇಲೆ ಆ ವಸ್ತ್ರಾಭರಣಗಳನ್ನು ರಾಕ್ಷಸನ ಹೆಂಡತಿಗೆ ಒಪ್ಪಿಸಿ, ಚಂದನದಾಸನ

ಹೆಂಡತಿಯ ಅಪ್ಪಣೆಯನ್ನು ಪಡೆದು ಮನೆಗೆ ಬಂದು ಆ ಮುದ್ರಿಕೆಯನ್ನು ಸಿದ್ಧಾರ್ಥಕನಿಗೆ ಒಪ್ಪಿಸಿದಳು. ಅವನು ಅದನ್ನು ಚಾಣಕ್ಯನಿಗೆ ತಂದುಕೊಡಲು, ರಾಕ್ಷಸನ ಹೆಸರುಳ್ಳ ಪುರಾತನವಾದ ಎಂಟುಮೂಲೆಯ ಆ ಮುದ್ರಿಕೆಯನ್ನು ರಾಕ್ಷಸನದೆಂದೇ ಚಾಣಕ್ಯನು ನಿರ್ಧರಿಸಿದನು. ಆ ಮುದ್ರಿಕೆ ಸಿಕ್ಕಿದುದರಿಂದ ರಾಕ್ಷಸನೇ ಚಂದ್ರಗುಪ್ತನ ಬಳಿಗೆ ಬಂದಂತಾಯಿತೆಂದುಕೊಂಡನು ಚಾಣಕ್ಯ. ಮಲಯಕೇತುವಿನಿಂದ ತಿರಸ್ಕೃತನಾಗಿ ರಾಕ್ಷಸನು ತಮ್ಮಲ್ಲಿಗೆ ಬರುವವರೆಗೂ ಮಾಡತಕ್ಕ ಕಾರ್ಯವನ್ನು ನಿಶ್ಚೈಸಿ, ಯಾರ ಹೆಸರೂ ಇಲ್ಲದ ಒಂದು ಲೇಖನವನ್ನು ಬರೆದು ಸಿದ್ಧಾರ್ಥಕನಿಗೆ 'ಸಿದ್ಧಾರ್ಥಕ, ಯಾವುದೋ ಒಂದು ಕೆಲಸಕ್ಕಾಗಿ ವೈದಿಕಲಿಪಿಯಲ್ಲಿ ಬರೆದಿರುವ ಈ ಪತ್ರಿಕೆಯನ್ನು ನಿನಗೆ ಪರಿಚಿತನಾದ ಶಕಟದಾಸನ ಅಕ್ಷರದಲ್ಲಿ ಸ್ಫುಟವಾಗಿ ಬರೆಸಿಕೊಂಡು ಬಾ' ಎಂದು ಹೇಳಿ ಕಳುಹಿಸಿದನು.

ಈ ಲೇಖನವನ್ನು ತೆಗೆದುಕೊಂಡು ಶಕಟದಾಸನಲ್ಲಿಗೆ ಬರುತ್ತ ಸಿದ್ಧಾರ್ಥಕನು ಅದನ್ನು ನೋಡಿಕೊಂಡು ಈ ರೀತಿ ಯೋಚಿಸಿದನು: 'ಚಾಣಕ್ಯರು ಏನೋ ಮಹತ್ಕಾರ್ಯವನ್ನು ಯೋಚಿಸಿ ಈ ಲೇಖನವನ್ನು ಬರೆದಿದ್ದಾರೆ. ಇದರ ಫಲವನ್ನು ಕಾರ್ಯಾಂತದಲ್ಲೇ ತಿಳಿಯಬೇಕು'. ಶಕಟದಾಸನ ಮನೆಗೆ ಬಂದಮೇಲೆ ಸಿದ್ಧಾರ್ಥಕನು ಅವನೊಡನೆ ಆ ಮಾತು ಈ ಮಾತು ಆಡುತ್ತ ಆಮೇಲೆ ತನ್ನ ಬಳಿಯಿದ್ದ ಕಾಗದವನ್ನು ಕೊಟ್ಟು ಈ ರೀತಿ ಹೇಳಿದನು: 'ಅಯ್ಯಾ ಶಕಟದಾಸ, ಈ ಪತ್ರದಲ್ಲಿ ಒಂದು ಸೋಜಿಗವುಂಟು. ಇದನ್ನು ಪ್ರಾಕೃತವಾಕ್ಯಗಳಲ್ಲಿ ಬರೆದಿದ್ದರೂ ಇದರ ಅಕ್ಷರಗಳನ್ನು ವ್ಯತ್ಯಾಸಮಾಡಿ ಪ್ರಯೋಗಿಸಿದರೆ ಸಂಸ್ಕೃತಶ್ಲೋಕಗಳಾಗುತ್ತವೆ. ಆ ಶ್ಲೋಕಗಳನ್ನು ಪ್ರತಿಲೋಮವಾಗಿ ಬರೆದರೆ ಚಿತ್ರಬಂಧಗಳಾಗುತ್ತವೆ. ಆದ್ದರಿಂದ ಸ್ಫುಟವಾಗಿ ಇದರ ಇನ್ನೊಂದು ಪ್ರತಿಯನ್ನು ಬರೆದುಕೊಡು. ಈ ಪತ್ರ ವೈದಿಕಲಿಪಿಯಲ್ಲಿದೆ. ಒಬ್ಬ ಕವೀಶ್ವರನು ಇದರ ಪದ್ಧತಿಯನ್ನು ಹೇಳಿದನು.' ತನ್ನ ಹೆಂಡತಿಗೆ ಹಿಡಿದ ಪಿಶಾಚಿಯನ್ನು ಬಿಡಿಸಿದಂದಿನಿಂದ ಸಿದ್ಧಾರ್ಥಕನಲ್ಲಿ ತುಂಬ ನಂಬಿಕೆಯನ್ನಿಟ್ಟುಕೊಂಡಿದ್ದ ಶಕಟದಾಸನು ಆ ಲೇಖನದ ಇನ್ನೊಂದು ಪ್ರತಿಯನ್ನು ತನ್ನ ಕೈಯಿಂದಲೇ ಮಾಡಿ

ಕೊಟ್ಟು ಅದರ ಪದ್ಧತಿಯನ್ನು ವಿವರಿಸುವಂತೆ ಸಿದ್ಧಾರ್ಥಕನನ್ನು ಕೇಳಿದನು. ಸಿದ್ಧಾರ್ಥಕನು ಸ್ವಲ್ಪ ಯೋಚಿಸುತ್ತಿದ್ದವನಂತೆ ನಟಿಸಿ, 'ಅಯ್ಯಾ, ಕವೀಶ್ವರನು ಹೇಳಿದ ಕ್ರಮ ಸ್ವಲ್ಪ ಮರೆತುಹೋಗಿದೆ. ಇದನ್ನು ಇನ್ನೊಂದುವೇಳೆ ತಿಳಿದುಹೇಳುವೆನು' ಎಂದು ಹೇಳಿ ಅಲ್ಲಿಂದ ಹೊರಟು ಅದನ್ನು ಚಾಣಕ್ಯನ ಕೈಯಲ್ಲಿ ತಂದುಕೊಟ್ಟನು.

ಲೇಖನವನ್ನು ಓದಿಕೊಂಡು ಅದರ ಅಕ್ಷರಗಳನ್ನು ಮೆಚ್ಚಿ ಅದಕ್ಕೆ ರಾಕ್ಷಸನ ಮುದ್ರಿಕೆಯಿಂದಲೇ ಮುದ್ರೆಯನ್ನೊತ್ತಿ ಸಿದ್ಧಾರ್ಥಕನನ್ನು ಕುರಿತು ಚಾಣಕ್ಯನು 'ಪ್ರಿಯ ಸಿದ್ಧಾರ್ಥಕ, ಚಂದ್ರಗುಪ್ತನ ಕಾರ್ಯ ನಿನ್ನಿಂದ ಈವರೆಗೆ ಬಹಳ ಅನುಕೂಲವಾಯಿತು. ಈಗ ನಿನ್ನಿಂದ ಒಂದು ದೊಡ್ಡ ಕೆಲಸವಾಗಬೇಕಾಗಿದೆ. ಅದನ್ನು ಈ ರೀತಿ ಮಾಡು' ಎಂದು ಅವನ ಕಿವಿಯಲ್ಲಿ ಕೆಲವು ರಹಸ್ಯವಾದ ಮಾತುಗಳನ್ನು ಹೇಳಿ ಆ ಲೇಖನವನ್ನೂ ರಾಕ್ಷಸನ ಮುದ್ರಿಕೆಯನ್ನೂ ಅವನೊಡನೆ ಕೊಟ್ಟು ಕಳುಹಿಸಿದನು.

ಆ ದಿನಕ್ಕೆ ಸರಿಯಾಗಿ ಪರ್ವತರಾಜನ ಪರಲೋಕಕ್ರಿಯೆಗಳು ಮುಗಿದುವು. ಬೊಕ್ಕಸದಲ್ಲಿದ್ದ ಆತನ ಆಭರಣಗಳನ್ನೇನು ಮಾಡಬೇಕೆಂದು ಚಾಣಕ್ಯನಿಗೆ ಚಂದ್ರಗುಪ್ತನು ಕಂಚುಕಿಯೊಡನೆ ಹೇಳಿ ಕಳುಹಿಸಿದನು. ಅದೇ ವಿಷಯವನ್ನು ಚಿಂತಿಸುತ್ತಿದ್ದ ಚಾಣಕ್ಯನು ಕಂಚುಕಿಗೆ 'ಶೋಣಕ, ಪರ್ವತರಾಜನ ಆಭರಣಗಳು ಅಮೂಲ್ಯವಾದುವು. ಅವನ್ನು ಪಡೆಯಲು ತಕ್ಕ ಬ್ರಾಹ್ಮಣರನ್ನು ನಾವೇ ನೋಡಿ ಕಳುಹಿಸುತ್ತೇವೆ. ಅವರಿಗೆ ಅವುಗಳನ್ನು ಕೊಟ್ಟರೆ ಅದರಿಂದ ರಾಜನಿಗೆ ಮುಂದೆ ಮಹಾಫಲ ಉಂಟಾಗುತ್ತದೆ. ಅಲ್ಲದೆ ಇನ್ನುಮುಂದೆ ಸ್ವರಾಷ್ಟ್ರದ ವಿಷಯವನ್ನು ತಾನೇ ನೋಡಿಕೊಳ್ಳುತ್ತ, ಪರರಾಷ್ಟ್ರದ ವಿಷಯವನ್ನು ಮಾತ್ರ ನಮಗೆ ತಿಳಿಸುವಂತೆ ರಾಜನಿಗೆ ಹೇಳು' ಎಂದು ಹೇಳಿದನು. ಕಂಚುಕಿ ಹೊರಟುಹೋದಮೇಲೆ ತನಗೆ ಅನುಕೂಲರಾದ ವಿಶ್ವಾವಸುವೇ ಮೊದಲಾದ ಮೂವರು ಬ್ರಾಹ್ಮಣರನ್ನು ಕರೆಸಿ ಅವರಿಗೆ ಚಾಣಕ್ಯನು 'ಬ್ರಾಹ್ಮಣರೇ, ಚಂದ್ರಗುಪ್ತನಿಂದ ನಿಮಗೆ ದಾನವಾಗಿ ದೊರಕುವ ಆಭರಣಗಳನ್ನು ವರ್ತಕವೇಷದಿಂದ ಮಲಯಕೇತುವಿನ ಬಳಿಯಿರುವ ರಾಕ್ಷಸನಲ್ಲಿಗೆ ಹೋಗಿ ಅವನ್ನು ಅವನಿಗೆ ಮಾರಿ,

ಆ ವಿಷಯವನ್ನು ನಮಗೆ ಬಂದು ತಿಳಿಸಿ' ಎಂದು ಅಪ್ಪಣೆಮಾಡಿ ಕಳುಹಿದನು.

ಇದಾದಮೇಲೆ ಪರ್ವತರಾಜನನ್ನು ಕೊಲ್ಲಿಸಿದ ಜೀವಸಿದ್ಧಿಯನ್ನು ಅವಮಾನಪಡಿಸಿ ರಾಜಧಾನಿಯಿಂದ ಹೊರಡಿಸಲು, ದಾರುವರ್ಮಾದಿಗಳಿಗೆ ಸಹಾಯಕನಾಗಿದ್ದ ರಾಜದ್ರೋಹಿ ಶಕಟದಾಸನನ್ನು ಶೂಲಕ್ಕೇರಿಸಲು ಚಾಣಕ್ಯನು ಏರ್ಪಾಟು ಮಾಡಿದನು. ಅವನ ಮತ್ತೊಬ್ಬ ಶಿಷ್ಯನು ಚಂದನದಾಸನಲ್ಲಿಗೆ ಓಡಿದನು.

## ೨೪. ಮಿತ್ರಪ್ರೇಮಿ ಚಂದನದಾಸ

ಚಾಣಕ್ಯನ ಶಿಷ್ಯ ಶೀಘ್ರಕಾರಿ, ಬಳೆಗಾರಸೆಟ್ಟಿ ಚಂದನದಾಸನಲ್ಲಿಗೆ ಬಂದು ಅವನಿಗೆ ಚಾಣಕ್ಯನ ಅಪ್ಪಣೆಯನ್ನು ತಿಳಿಸಿದನು. ಆ ಸೆಟ್ಟಿ ತನ್ನ ಮನಸ್ಸಿನಲ್ಲಿ 'ವಜ್ರಚಿತ್ತನಾದ ಚಾಣಕ್ಯನನ್ನು ಕಂಡರೆ ನಿರಪರಾಧಿಯೂ ಭಯಪಡುವನು. ನಾನಾದರೋ ಚಂದ್ರಗುಪ್ತನ ವಿಷಯದಲ್ಲಿ ಮಹಾಪರಾಧಿ. ಚಾಣಕ್ಯನನ್ನು ಕಂಡಬಳಿಕ ನನಗೇನು ವಿಪತ್ತು ಬರುವುದೋ! ಒಳ್ಳೆಯದು. ಒಂದುವೇಳೆ ಮಿತ್ರಕಾರ್ಯಕ್ಕಾಗಿ ಹಾಗೆ ವಿಪತ್ತು ಬಂದರೂ ಬರಲಿ. ಆದರೆ ರಾಕ್ಷಸನ ಮನೆಯವರನ್ನು ಮಾತ್ರ ಚಾಣಕ್ಯನಿಗೆ ಸಿಕ್ಕದಂತೆ ಮಾಡಿದರೆ ಅದೇ ನನಗೆ ಪರಮ ಲಾಭ' ಎಂದುಕೊಂಡು ಮುಂದಿನ ಕೆಲಸವನ್ನು ನಿರ್ಧರಿಸಿಕೊಂಡನು.

ಆ ಬಳಿಕ ಚಂದನದಾಸನು ಚಾಣಕ್ಯನ ಶಿಷ್ಯನನ್ನು ಕುರಿತು, 'ಅಯ್ಯಾ ಬ್ರಾಹ್ಮಣ, ನಾನು ಉಟ್ಟಿರುವ ಬಟ್ಟೆಗಳು ಕೊಳೆಯಾಗಿವೆ. ದೊಡ್ಡವರನ್ನು ಕಾಣಲು ಬೇರೆ ಮಡಿಬಟ್ಟೆಗಳನ್ನುಟ್ಟುಕೊಂಡು ಬರುವೆನು. ಅವರೆಗೂ ನೀನು ಈ ಪೀಠದ ಮೇಲೆ ಕುಳಿತಿರಬಹುದು' ಎಂದು ಹೇಳಿ ಒಳಕ್ಕೆ ಹೋದನು.

ಚಂದನದಾಸನು ಒಳಗಡೆ ಹೋಗಿ ತನಗೆ ಆಪ್ತನಾದ ಧನಸೇನನನ್ನು ಕರೆದು, 'ಮಿತ್ರನೇ, ಕ್ರೂರನಾದ ಚಾಣಕ್ಯನು ನನ್ನನ್ನು ಕರೆಕಳುಹಿಸಿದ್ದಾನೆ. ಅವನ ಬಳಿಗೆ ಹೋದ ಬಳಿಕ ಏನಾಗುವುದೋ ತಿಳಿಯದು. ನೀನು ಮಾತ್ರ ಅಮಾತ್ಯರ ಕುಟುಂಬದವರನ್ನು ಮತ್ತೊಂದು ಗುಟ್ಟಾದ ಸ್ಥಳದಲ್ಲಿ ಇರಿಸಿ ಕಾದುಕೊಂಡಿರು' ಎಂದು ನೇಮಿಸಿ ಮಡಿ

ಬಟ್ಟೆಗಳನ್ನುಟ್ಟುಕೊಂಡು ಹೊರಟುಬಂದು ಚಾಣಕ್ಯನನ್ನು ಕಂಡು ಕೈಮುಗಿದನು.

ಚಾಣಕ್ಯ—ಚಂದನದಾಸನೇ, ನಿನಗೆ ಕ್ಷೇಮವೇ? ನೀವು ಮಾಡುವ ವ್ಯಾಪಾರಗಳು ಯಾವ ಅಡ್ಡಿಯೂ ಇಲ್ಲದೆ ನಡೆಯುತ್ತಿವೆಯೇ? ಈ ಪೀಠದ ಮೇಲೆ ಕುಳಿತುಕೋ.

ಚಂದನದಾಸ—(ಮತ್ತೊಮ್ಮೆ ನಮಸ್ಕರಿಸಿ, ಕುಳಿತುಕೊಂಡು) ಸ್ವಾಮಿ, ತಮ್ಮ ಕೃಪೆಯಿಂದ ನಮ್ಮ ವ್ಯಾಪಾರ ಕುಂದಿಲ್ಲದೆ ಸಾಗುತ್ತಿದೆ.

ಚಾಣಕ್ಯ—ಅಯ್ಯಾ ಚಂದನದಾಸ, ಪ್ರಜೆಗಳು ಚಂದ್ರಗುಪ್ತ ನನ್ನು ಒಳ್ಳೆಯವನೆಂದು ಹೇಳುವರೋ? ಇಲ್ಲವೆ ನಂದರನ್ನೇ ಉತ್ತಮ ರೆಂದು ಹೊಗಳಿಕೊಳ್ಳುವರೋ?

ಚಂದನದಾಸ—ಪೂಜ್ಯರೆ, ಶರತ್ಕಾಲದ ಚಂದ್ರನನ್ನು ಕಂಡ ನೈದಿಲೆಗಳಂತೆ ಪ್ರಜೆಗಳು ಚಂದ್ರಗುಪ್ತ ಮಹಾರಾಜನನ್ನೇ ಅಪೇಕ್ಷಿಸು ತ್ತಿದ್ದಾರೆ.

ಚಾಣಕ್ಯ—ಅಯ್ಯಾ ಸೆಟ್ಟಿ, ಸಂತೃಪ್ತರಾದ ಪ್ರಜೆಗಳಿಂದ ಅರಸರು ಪ್ರತಿಫಲವನ್ನು ಬಯಸುವುದು ಪೂರ್ವಮರ್ಯಾದೆ.

ಚಂದನದಾಸ—ಸ್ವಾಮಿಯವರ ಅಪ್ಪಣೆಯಾದಂತೆ ಸರ್ವರೂ ತಮ್ಮ ಶಕ್ತಿಯನ್ನು ಮೀರಿ ನಡೆದುಕೊಂಡಾರು.

ಚಾಣಕ್ಯ—ಎಲೈ ಚಂದನದಾಸ, ನಿರಪರಾಧಿಗಳಾದ ರಾಷ್ಟ್ರವಾಸಿ ಗಳಿಂದ ದಂಡವನ್ನು ಸ್ವೀಕರಿಸುವುದಕ್ಕೆ ಇದು ನಂದರ ಪ್ರಭುತ್ವವಲ್ಲ. ನೀವೆಲ್ಲರೂ ಸುಖಿಗಳಾಗಿದ್ದರೆ ಅದೇ ಚಂದ್ರಗುಪ್ತನಿಗೆ ಮಹಾಭ್ಯುದಯ.

ಚಂದನದಾಸ—ಸ್ವಾಮಿ, ಅದೇ ರೀತಿಯಲ್ಲಿ ತಾವು ನಮ್ಮೆಲ್ಲ ರನ್ನೂ ರಕ್ಷಿಸಬೇಕು.

ಚಾಣಕ್ಯ—ಅಯ್ಯಾ ಸೆಟ್ಟಿ, ಈ ಸುಖವಾದ ಬದುಕು ಹೇಗೆ ಒದ ಗಬಹುದೆಂದು ನೀನು ನಮ್ಮನ್ನು ಕೇಳಬೇಡವೇ?

ಚಂದನದಾಸ—ಪೂಜ್ಯರು ಅಪ್ಪಣೆ ಕೊಡಿಸಬೇಕು.

ಚಾಣಕ್ಯ—ಸಂಗ್ರಹವಾಗಿ ಹೇಳಬಹುದಾದರೆ, ರಾಜನಿಗೆ ಎದುರು ಬೀಳದಂತೆ ನಡೆದುಕೊಳ್ಳಬೇಕು.

ಚಂದನದಾಸ—ಮಹಾರಾಜರಿಗೆ ಎದುರುಬಿದ್ದವನೆಂದು ತಾವು ಭಾವಿಸುವ ಆ ನಿರ್ಭಾಗ್ಯ ಯಾರಿರಬಹುದು?

ಚಾಣಕ್ಯ—ಅಯ್ಯಾ ಸೆಟ್ಟಿ, ನೀನೇ ಮೊಟ್ಟಮೊದಲ ರಾಜ ದ್ರೋಹಿ.

ಚಂದನದಾಸ (ಕಿವಿಗಳನ್ನು ಮುಚ್ಚಿಕೊಂಡು) — ಶಾಂತಂ ಪಾಪಂ! ಶಾಂತಂ ಪಾಪಂ! ಆರ್ಯರೆ, ಬೆಂಕಿಯೊಡನೆ ಹುಲ್ಲುಕಡ್ಡಿಗೆ ಎಂಥ ಸರಸ!

ಚಾಣಕ್ಯ—ಎಲಾ ಸೆಟ್ಟಿ! ರಾಜಾಪರಾಧಿಯಾದ ರಾಕ್ಷಸನ ಕುಟುಂಬದವರನ್ನು ನಿನ್ನ ಮನೆಯಲ್ಲಿ ಮರೆಯಾಗಿರಿಸಿಕೊಂಡು ಇದು ವರೆಗೂ ಪ್ರಭುವಿಗೆ ಬಿನ್ನೈಸದಿರುವುದು ನಿನ್ನಲ್ಲಿ ಅಪರಾಧವಲ್ಲವೇ?

ಚಂದನದಾಸ—ಪೂಜ್ಯರೇ, ತಮ್ಮೊಡನೆ ಯಾರೋ ಸುಳ್ಳನ್ನು ನುಡಿದಿರಬೇಕು. ಈ ವಿಷಯವನ್ನೇ ನಾನು ಕಂಡರಿಯೆ.

ಚಾಣಕ್ಯ—ಈ ಸಂಗತಿಯನ್ನು ನೀನು ಕಂಡುದುಂಟಾದರೆ ನಿನ್ನ ಸರ್ವಸ್ವವನ್ನೂ ಅರಮನೆಗೆ ತೆಗೆದುಕೊಂಡು ನಿನಗೆ ಕ್ರೂರವಾದ ದಂಡನೆ ಯನ್ನು ವಿಧಿಸಬಹುದೇ?

ಚಂದನದಾಸ—ಪೂಜ್ಯರೇ, ರಾಕ್ಷಸನು ಹೋಗುವ ಸಮಯದಲ್ಲಿ ತನ್ನ ಮನೆಯ ಜನರನ್ನು ನನ್ನ ಮನೆಯಲ್ಲಿ ಇರಿಸಿದುದುಂಟು. ಆ ಬಳಿಕ ಅವರು ನನ್ನನ್ನು ವಂಚಿಸಿ ಎಲ್ಲಿಯೋ ಹೊರಟುಹೋದುದರಿಂದ ಈ ವಿಷಯವನ್ನು ತಮ್ಮಲ್ಲಿ ವಿಜ್ಞಾಪಿಸಿಕೊಳ್ಳುವುದಕ್ಕೆ ಭಯ ಪಡುತ್ತಿದ್ದೆ.

ಚಾಣಕ್ಯ—ಎಲಾ ಸೆಟ್ಟಿ, ಮೊದಲು ಕಾಣೆನೆಂದು ಹೇಳಿ, ಈಗ ಕಂಡುದುಂಟು, ಎಲ್ಲಿಯೋ ಹೋದರು ಎಂದು ಎರಡು ಮಾತುಗಳನ್ನು ಹೇಳಬಹುದೇ?

ಚಂದನದಾಸ—ಪೂಜ್ಯರೇ, ಭಯದಿಂದ ಬಾಯಿತಪ್ಪಿ ಹಾಗೆ ಹೇಳಿದೆ.

ಚಾಣಕ್ಯ (ನಕ್ಕು) - ಎಲಾ ವ್ಯಾಪಾರಿ, ಚಂದ್ರಗುಪ್ತನ ಪ್ರಭುತ್ವ ದಲ್ಲಿ ಬಾಯಿತಪ್ಪೂ ಬರಕೂಡದು. ಸುಮ್ಮನೆ ರಾಕ್ಷಸನ ಕುಟುಂಬದವ ರನ್ನು ತಂದೊಪ್ಪಿಸಿ ಬಿಡು. ನಿನ್ನ ತಪ್ಪು ಸರಿಹೋಗುತ್ತದೆ.

ಚಂದನದಾಸ (ಮನಸ್ಸಿನಲ್ಲಿ)—ಈಗ ನೆತ್ತಿಯ ಮೇಲೆ ಸರ್ಪ, ಹಿಮಾಲಯದಲ್ಲಿ ಅದಕ್ಕೆ ಔಷಧಯೆಂದ ಹಾಗಾಯಿತು. ಏನೋ ದೊಡ್ಡ ಆಪತ್ತು ಬಂತು!

ಚಾಣಕ್ಯ ಚಂದನದಾಸರು ಮಾತನಾಡುತ್ತಿದ್ದಾಗ ಹೊರಗಡೆ ಕಲಕಲ ಧ್ವನಿ ಕೇಳಿ ಬಂತು.

ಚಾಣಕ್ಯ (ಶಿಷ್ಯನಿಗೆ)—ಹೊರಗಡೆ ಏನು ಗದ್ದಲ? ತಿಳಿದು ಬಾ.

ಶಿಷ್ಯ (ಹೋಗಿ ಬಂದು)—ಉಪಾಧ್ಯಾಯರೇ, ವಿಷಕನ್ಯೆಯ ಮೂಲಕ ಪರ್ವತರಾಜನನ್ನು ಕೊಲ್ಲಿಸಿದ ದೋಷವನ್ನು ಬಯಲಿಗೆಳೆದು, ದೂತರು ಜೀವಸಿದ್ಧಿಯೆಂಬ ಕ್ಷಪಣಕನನ್ನು ಚಂದ್ರಗುಪ್ತನ ಅಪ್ಪಣೆಯಂತೆ ತುಂಬ ಅವಮಾನಪಡಿಸಿ ಊರಿನಲ್ಲಿ ಮೆರವಣಿಗೆ ಮಾಡಿಸಿ ಹೊರಕ್ಕೆ ತಳ್ಳುತ್ತಿದ್ದಾರೆ.

ಚಾಣಕ್ಯ—ತಾನು ಮಾಡಿದುದಕ್ಕೆ ತಕ್ಕ ಫಲವನ್ನು ಅನುಭವಿಸಲಿ! (ಚಂದನದಾಸನ ಕಡೆಗೆ ತಿರುಗಿ) ಚಂದನದಾಸಸೆಟ್ಟಿ, ರಾಜದ್ರೋಹಿಗಳಿಗೆ ಹೀಗಾಗುವುದು ಸಹಜ. ಆದ್ದರಿಂದ ವಂಚಿಸದೆ ರಾಕ್ಷಸನ ಕುಟುಂಬವನ್ನು ತಂದೊಪ್ಪಿಸು.

ಚಂದನದಾಸ—ಪೂಜ್ಯರೇ, ನನ್ನ ಮನೆಯಲ್ಲಿ ರಾಕ್ಷಸನ ಕುಟುಂಬ ಖಂಡಿತವಾಗಿ ಇಲ್ಲ.

ಅಷ್ಟರಲ್ಲೇ ಬೀದಿಯಲ್ಲಿ ಮತ್ತೆ ಕೋಲಾಹಲ ಕೇಳಿ ಬಂತು.

ಚಾಣಕ್ಯ—(ಶಿಷ್ಯನಿಗೆ) ಅದೇನು ಮತ್ತೆ ಗದ್ದಲ? ನೋಡಿ ಬಾ.

ಶಿಷ್ಯ (ಹೋಗಿ ಬಂದು)—ಉಪಾಧ್ಯಾಯರೇ, ರಾಜದ್ರೋಹಿಯಾದ ಶಕಟದಾಸನನ್ನು ರಾಜನ ಅಪ್ಪಣೆಯಂತೆ ಶೂಲಕ್ಕೆ ಹಾಕುವುದೆಂದು ಸಾರಿಕೊಂಡು ವಧ್ಯಸ್ಥಾನಕ್ಕೆ ಕರೆದೊಯ್ಯುತ್ತಿದ್ದಾರೆ.

ಚಾಣಕ್ಯ (ಚಂದನದಾಸನಿಗೆ)—ಅಯ್ಯಾ ಸೆಟ್ಟಿ, ರಾಜಾಪರಾಧಿಗಳಿಗೆ ಹೀಗೆ ಕಠಿಣದಂಡನೆಯಾಗುತ್ತಿರುವುದನ್ನು ಕಂಡೂ, ಇನ್ನೂ ಅರಿಯೆನೆಂದು ಹೇಳುತ್ತಿರುವೆಯಾ? ನಿನ್ನ ಹೆಂಡತಿ ಮಕ್ಕಳು ಸುಖವಾಗಿ ಬದುಕಿರಬೇಕೆಂದಿದ್ದರೆ ರಾಕ್ಷಸನ ಮನೆಯವರನ್ನು ತಂದೊಪ್ಪಿಸು.

ಚಂದನದಾಸ—ಪೂಜ್ಯರೇ, ಸುಮ್ಮನೆ ನನ್ನನ್ನೇಕೆ ಬೆದರಿಸುತ್ತಿ

ರುವಿರಿ? ಅಮಾತ್ಯನ ಕುಟುಂಬದವರನ್ನು ಇದ್ದರೂ ನಾನು ಒಪ್ಪಿಸ ತಕ್ಕವನಲ್ಲ; ಇಲ್ಲದಿರುವಾಗ ಮತ್ತೇನು?

ಚಾಣಕ್ಯ—ಚಂದನದಾಸ, ಇದೇ ನಿನ್ನ ನಿಶ್ಚಯವೋ?

ಚಂದನದಾಸ—ಆರ್ಯರೆ, ಇದೇ ನನ್ನ ನಿಶ್ಚಯ; ನಿಸ್ಸಂದೇಹ ವಾಗಿ.

ಚಾಣಕ್ಯ—(ಮನಸ್ಸಿನಲ್ಲಿ)-ಈ ಸೆಟ್ಟಿ ಸತ್ಯವಂತ. ಮಿತ್ರಕಾರ್ಯ ಕ್ಕಾಗಿ ತನ್ನ ಪ್ರಾಣವನ್ನಾದರೂ ಒಪ್ಪಿಸತಕ್ಕವನು. (ಪ್ರಕಾಶವಾಗಿ ಕೋಪವನ್ನು ನಟಿಸಿ, ಹುಬ್ಬನ್ನು ಗಂಟಿಕ್ಕಿ) ಎಲಾ ದುರುಳ ವರ್ತಕ, ನೀನು ಮಾಡಿರುವ ದ್ರೋಹಕ್ಕೆ ತಕ್ಕ ಫಲವನ್ನು ಅನುಭವಿಸು.

ಚಂದನದಾಸ—ಸಿದ್ಧನಾಗಿದ್ದೇನೆ. ತಮ್ಮ ಅಧಿಕಾರಕ್ಕೆ ಅನುಗುಣ ವಾಗಿ ತಾವು ನನಗೆ ಶಿಕ್ಷೆಯನ್ನು ವಿಧಿಸಬಹುದು.

ಚಾಣಕ್ಯ—(ಶಿಷ್ಯನನ್ನು ಕರೆದು)—ಎಲಾ ಶೀಘ್ರಕಾರಿ,ಈ ದುಷ್ಟ ವರ್ತಕನ ಮನೆಯ ಪದಾರ್ಥವೆಲ್ಲವನ್ನೂ ರಾಜಭಂಡಾರಕ್ಕೆ ತೆಗೆದು ಕೊಂಡು ಸ್ವಜನಸಮೇತನಾಗಿ ಇವನನ್ನು ಕಾವಲಿನಲ್ಲಿರಿಸುವಂತೆ ದುರ್ಗ ಪಾಲಕನಿಗೆ ಹೇಳು. ನಾನೇ ಚಂದ್ರಗುಪ್ತನಿಗೆ ತಿಳಿಸಿ ಇವನಿಗೆ ಕ್ರೂರ ವಾದ ದಂಡನೆಯನ್ನು ಮಾಡಿಸುವೆನು.

ಶೀಘ್ರಕಾರಿ ಚಂದನದಾಸನನ್ನು ಕರೆದುಕೊಂಡು ಹೊರಟು ಹೋದನು. ಚಾಣಕ್ಯನು ತನ್ನ ಮನಸ್ಸಿನಲ್ಲಿ 'ಈ ಚಂದನದಾಸನು ತನ್ನ ಮಿತ್ರನಾದ ರಾಕ್ಷಸನಿಗಾಗಿ ತನ್ನ ಪ್ರಾಣವನ್ನಾದರೂ ಕೊಟ್ಟು ಆತನ ಕುಟುಂಬದವರನ್ನು ರಕ್ಷಿಸುವೆನೆಂದು ಹೇಗೆ ನಿಶ್ಚೈಸಿರುವನೋ ಹಾಗೆಯೇ ರಾಕ್ಷಸನೂ ಚಂದನದಾಸನಿಗೆ ಬಂದ ವಿಪತ್ತನ್ನು ಪರಿಹರಿ ಸಲು ತನ್ನ ಪ್ರಾಣವನ್ನಾದರೂ ಕೊಟ್ಟು ಈ ಚಂದನದಾಸನನ್ನು ಬಿಡಿ ಸಲು ಬರುವನು. ಕರುವಿದ್ದೆಡೆಗೆ ಹಸು ತಾನಾಗಿಯೇ ಬರುವುದಲ್ಲವೇ? ಶಕಟದಾಸನನ್ನು ಶೂಲಸ್ಥಾನಕ್ಕೆ ಕಳುಹಿಸಿದಂತೆ ಸಮಯವರಿತು ಈ ಸೆಟ್ಟಿಯನ್ನು ಶೂಲಕ್ಕೆ ಕಳುಹಿಸಬೇಕು.' ಎಂದು ನಿರ್ಧರಿಸಿಕೊಂಡನು.

ಇತ್ತ ಸಿದ್ಧಾರ್ಥಕನು ಈ ಮೊದಲು ಚಾಣಕ್ಯನು ತನ್ನ ಕಿವಿಯಲ್ಲಿ ಹೇಳಿದಂತೆ ಚಂಡಾಲರು ಶಕಟದಾಸನನ್ನು ವಧ್ಯಸ್ಥಾನಕ್ಕೆ ಕರೆತರುವು ದಕ್ಕೆ ಮುಂಚಿತವಾಗಿಯೇ, ಹಿರಿದ ಕತ್ತಿಯೊಡನೆ ಅಲ್ಲಿಗೆ ಬಂದು ಮರೆ

ಯಲ್ಲಿ ಕಾದಿದ್ದನು. ಕಟುಕರು ಶಕಟದಾಸನನ್ನು ಶೂಲಕ್ಕೇರಿಸುವ ಸ್ಥಳಕ್ಕೆ ಕರೆತಂದು ನಿಲ್ಲಿಸುವುದನ್ನು ನೋಡಿ, ಸಿದ್ಧಾರ್ಥಕನು ಕತ್ತಿಯನ್ನು ಝಳಪಿಸುತ್ತ ಆ ಘಾತುಕರನ್ನು ಅಟ್ಟಿಕೊಂಡು ಬಂದು, ಮೇಲೆ ಬಿದ್ದು ಮೊರೆಯುತ್ತ ಅವರಿಗೆ ಕಣ್ಣುಸನ್ನೆ ಮಾಡಿದನು. ಅದನ್ನರಿತ ಕಟುಕರು ಅವನ ರಭಸಕ್ಕೆ ಹೆದರಿದವರಂತೆ ನಟಿಸುತ್ತ ಶಕಟದಾಸನನ್ನು ಬಿಟ್ಟು ದಿಕ್ಕುದಿಕ್ಕಿಗೆ ಓಡಿಹೋದರು. ಆಗ ಸಿದ್ಧಾರ್ಥಕನು ಶಕಟದಾಸನ ಬಳಿಗೆ ಬಂದು, ಅವನ ಕಟ್ಟುಗಳನ್ನು ಬಿಚ್ಚಿ, ಚಾಣಕ್ಯ ಚಂದ್ರಗುಪ್ತರನ್ನು ನಿಂದಿಸುತ್ತ ‘ ಮಿತ್ರ, ಬಾ ಹೆದರಬೇಡ. ಈ ಹಾಳು ಚಾಣಕ್ಯ ಚಂದ್ರಗುಪ್ತರಿರುವ ಸ್ಥಳವನ್ನು ಬಿಟ್ಟು ಬೇರೆ ಎಲ್ಲಿಗಾದರೂ ಹೋಗೋಣ, ನಡೆ.’ ಎಂದು ಪರ್ವತರಾಜ್ಯಾಭಿಮುಖವಾಗಿ ಹೊರಟು ಹೋದರು.

ಚಾಣಕ್ಯನ ಶಿಷ್ಯನು ಈ ವರ್ತಮಾನವನ್ನು ತಿಳಿದುಬಂದು ‘ ಉಪಾಧ್ಯಾಯರೇ, ಶಕಟದಾಸನನ್ನು ಶೂಲಕ್ಕೇರಿಸುವ ಸಮಯದಲ್ಲಿ ಸಿದ್ಧಾರ್ಥಕನು ಹಿರಿದ ಕತ್ತಿಯೊಡನೆ ಬಂದು ಚಂಡಾಲರನ್ನು ಹೆದರಿಸಿ ಓಡಿಸಿ ಶಕಟದಾಸನನ್ನು ಕರೆದುಕೊಂಡು ಎಲ್ಲಿಗೋ ಪಲಾಯನ ಮಾಡಿದನಂತೆ.’ ಎಂದು ತಿಳಿಸಿದನು.

ಶಿಷ್ಯನ ಮಾತನ್ನು ಕೇಳಿ ಚಾಣಕ್ಯನು ತನ್ನ ಮನಸ್ಸಿನಲ್ಲಿ ‘ಶಕಟದಾಸನೊಡನೆ ಸಿದ್ಧಾರ್ಥಕನು ಹೊರಟು ಹೋದುದು ಉತ್ತಮವಾಯಿತು. ಇಲ್ಲಿದ್ದ ಸೇನಾಪತಿಗಳನ್ನು ಹೊರಡಿಸಿ ಕಳುಹಿಸಿದುದಕ್ಕೆ ಪುರಜನರು ಏನೆಂದು ಹೇಳಿಕೊಳ್ಳುತ್ತಿರುವರೋ ಅದನ್ನು ತಿಳಿಯಬೇಕು’ ಎಂದು ಯೋಚಿಸಿ, ಶಿಷ್ಯನನ್ನು ಕುರಿತು ‘ ವತ್ಸ ಭಾಗಪುಚ್ಛ, ಶಕಟದಾಸ ಸಿದ್ಧಾರ್ಥಕರನ್ನು ಹಿಡಿದು ತರುವಂತೆ ಭಾಗುರಾಯಣನಿಗೆ ಹೇಳಿ ಬಾ.’ ಎಂದು ಅಪ್ಪಣೆಮಾಡಿ ಕಳುಹಿಸಿದನು.

ಶಿಷ್ಯನು ಹೋಗಿ ವಿಷಯವನ್ನು ತಿಳಿದುಬಂದು ‘ಉಪಾಧ್ಯಾಯರೇ, ಭಾಗುರಾಯಣನು ಮಲಯಕೇತುವಿನೊಡನೆ ಅಂದೇ ಹೊರಟುಹೋದನಂತೆ’ ಎಂದು ತಿಳಿಸಿದನು.

ಚಾಣಕ್ಯ—ಆ ವಂಚಕನಾದ ಭಾಗುರಾಯಣನನ್ನು ಹಿಡಿದು ತರುವಂತೆ ಭದ್ರಭಟಾದಿಸೇನಾನಾಯಕರಿಗೆ ತಿಳಿಸಿ ಬಾ.

ಶಿಷ್ಯನು ಹೋಗಿ ವಿಚಾರಿಸಿ ಬಂದು 'ಓಹೋ! ಉಪಾಧ್ಯಾಯರೇ, ನಿಮ್ಮ ಕೆಲಸವೆಲ್ಲ ಕೆಟ್ಟುಹೋಯಿತು. ನೀವು ಆಸ್ಥಾನದಲ್ಲಿ ಕುಳಿತು ಕೋಪ ಮಾಡಿದುದರಿಂದ ನಿಮ್ಮ ಮೇಲೆ ರಾಜಕಾರ್ಯ ಮಾಡುವುದಕ್ಕಾಗಿ ಭದ್ರಭಟಾದಿಸೇನಾಪತಿಗಳು ತಮ್ಮ ಬಲಸಮೇತರಾಗಿ ಇಲ್ಲಿಂದ ಹೋಗಿ ಪರರಾಜರನ್ನು ಕಟ್ಟಿಕೊಂಡು ದಂಡೆತ್ತಿ ಬರುತ್ತಿದ್ದಾರಂತೆ. ಈ ವಿಷಯವನ್ನು ಜನರು ಆಡಲು ಅಂಜಿ ಗುಸುಗುಟ್ಟುತ್ತಿದ್ದಾರೆ. ತಾವು ಮಹಾಚತುರರು. ಆದ್ದರಿಂದ ಆ ಶತ್ರುಗಳ ಸೈನ್ಯಕ್ಕೆ ಸಿಕ್ಕದೆ ತಪ್ಪಿಸಿಕೊಂಡೀರಿ. ಅನಾಥರಾಗಿರುವ ನಮ್ಮನ್ನು ಹಿಡಿದು ನಿಮ್ಮ ಗುರುಗಳೆಲ್ಲಿ? ಎಂದು ವೈರಿಗಳು ನಿರ್ಬಂಧಪಡಿಸಿದರೆ ಬ್ರಾಹ್ಮಣರು ಸುಳ್ಳನ್ನು ಹೇಳಬಾರದಷ್ಟೆ. ಆದ್ದರಿಂದ ನೀವು ಹೋಗತಕ್ಕ ಸ್ಥಳವನ್ನು ಈಗಲೇ ತಿಳಿಸಿದ್ದರೆ ಒಳ್ಳೆಯದು' ಎಂದು ನಮ್ರವಾಗಿ ನುಡಿದನು.

ಚಾಣಕ್ಯ (ನಸುನಗುತ್ತ)—ಎಲಾ ವಟುವೇ, ದಸ್ಯುಗಳಿಗೆ ನಮ್ಮನ್ನು ತೋರಿಸುವೆಯಾ? ಹಾಗಾದರೆ ನಾವು ರಾಮೇಶ್ವರಕ್ಕೆ ಹೋಗಿ ಅಲ್ಲಿರುವೆವು.

ಶಿಷ್ಯ—ಪೂಜ್ಯರೆ, ರಾಮೇಶ್ವರವಿರುವದೆಲ್ಲಿ?

ಚಾಣಕ್ಯ—ವತ್ಸ ರಾಮೇಶ್ವರ ರಾಮಸೇತು ಇದ್ದಲ್ಲಿ ಇರುವುದು.

ಶಿಷ್ಯ— ಗುರುಗಳೇ, ರಾಮದೇವರು ತನ್ನ ಪಟ್ಟಣದ ಸರಯೂ ನದಿಯಲ್ಲಿ ಸೇತುವೆಯನ್ನು ರಚಿಸಿರುವನೋ, ಇಲ್ಲವೇ ಯಮುನಾ ನದಿಯಲ್ಲಿ ರಚಿಸಿರುವನೋ?

ಚಾಣಕ್ಯ—ವತ್ಸ, ಲವಣಸಮುದ್ರಕ್ಕೆ.

ಶಿಷ್ಯ—ಆರ್ಯರೇ, ಲವಣಖಂಡವೇ ಸಮುದ್ರವಾದರೆ ಸಂಚರಿಸುವ ಜನರ ಪಾದಗಳಿಗೆ ಕ್ಷಾರತಗುಲದಿರುವುದಕ್ಕಾಗಿ ಸೇತುಬಂಧವೋ?

ವಟುವಿನ ಮಾತನ್ನು ಕೇಳಿ ಕೋಪಗೊಂಡ ಶಾರ್ಙ್ಗರವನು 'ಎಲಾ ವಟುವೇ, ಏನು ಅಸಂಬದ್ಧವಾಗಿ ಕೇಳುತ್ತಿರುವೆ. ಶತ್ರುಬಾಧೆಯುಂಟಾದರೆ ಮೊದಲು ನಿನ್ನನ್ನು ದಾಟಿಸುವೆವು; ಭಯಪಡಬೇಡ ಹೋಗು. ಕಂದಮೂಲಗಳನ್ನು ತೊಳೆದು ಸಿದ್ಧಮಾಡು. ಮೊದಲು ಹೋದವರೆಲ್ಲ ಹೋಗಲಿ. ಮುಂದೆ ಹೋಗಬೇಕೆಂದಿರುವವರೂ ಈ

ನಗರವನ್ನು ಬಿಟ್ಟುಹೋಗಲಿ. ಆದರೆ ನಮ್ಮ ಗುರುಗಳ ಕಾರ್ಯೋತ್ಸಾಹ ಮಾತ್ರ ತಗ್ಗದಿರಲಿ. ಅದೊಂದರಿಂದ ಸಕಲವೂ ಸಾಧ್ಯವಾಗುವುದು' ಎಂದು ನುಡಿದು ಭಾಗಪುಚ್ಛನನ್ನು ಆಚೆಗೆ ಕಳುಹಿಸಿದನು.

## ೨೫. ಪ್ರತೀಕಾರ

ಮಲಯಕೇತುವಿನ ಬಳಿ ಸರ್ವಾಧಿಕಾರವನ್ನು ಪಡೆದ ರಾಕ್ಷಸನು ಕೈಕಟ್ಟಿಕೊಂಡು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಪಾಟಲೀಪುರದ ಮುತ್ತಿಗೆ, ಚಂದ್ರಗುಪ್ತನ ಸಂಹಾರ, ನಂದರಾಜ್ಯದಲ್ಲಿ ಮಲಯಕೇತುವಿನ ಪ್ರತಿಷ್ಠೆ—ಈ ಯೋಚನೆಗಳೇ ಈಗ ಅವನ ಮನಸ್ಸನ್ನು ಮುತ್ತಿದ್ದುವು. ಹಗಲಿರುಳು ಈ ಚಿಂತೆಯಿಂದ ರಾಕ್ಷಸನಿಗೆ ರಾತ್ರಿ ಸರಿಯಾಗಿ ನಿದ್ದೆಯಿಲ್ಲ; ಅನ್ನಾದಿಗಳು ರುಚಿಸವು. ಅಲಂಕಾರದ ಮೇಲೆ ನಿರಾಶೆ. ಹೀಗೆ ರಾಕ್ಷಸನು ಭೂಷಣರಹಿತನಾಗಿ ಒಂದೇ ಮನಸ್ಸಿನಿಂದ ರಾಜಕಾರ್ಯದಲ್ಲಿ ತೊಡಗಿರುವುದನ್ನು ಕಂಡು ರಾಜಕುಮಾರನಿಗೆ ಅಮಾತ್ಯನು ತನಗಾಗಿ ಎಷ್ಟು ತೊಂದರೆಪಡುತ್ತಿರುವನಲ್ಲಾ ಎಂದು ಮರುಕವುಂಟಾಯಿತು. ರಾಕ್ಷಸನಲ್ಲಿ ತನಗಿದ್ದ ಸಹಜವಾದ ಪ್ರೀತಿಯಿಂದ ಮಲಯಕೇತು ಆತನು ಧರಿಸಲು ತನ್ನ ಮೈಮೇಲಿನ ಆಭರಣಗಳನ್ನೇ ಕಳಚಿ ಕಂಚುಕಿಯೊಡನೆ ಅವನ್ನು ಅಮಾತ್ಯನಲ್ಲಿಗೆ ಕಳುಹಿಸಿದನು. ತನ್ನಲ್ಲಿಗೆ ಆಭರಣಗಳೊಡನೆ ಬಂದ ಕಂಚುಕಿಗೆ ರಾಕ್ಷಸನು 'ಆರ್ಯ ಜಾಜಲಿ, ಈ ಭೂಷಣಗಳಮೇಲೆ ನನಗೆ ಆಸೆಯಿಲ್ಲ. ಈಗ ನನಗಿರುವ ಬಯಕೆ ಒಂದೇ—ಅದು ಚಂದ್ರಗುಪ್ತನ ಸಂಹಾರ; ಪಾಟಲೀಪುರದ ಸಿಂಹಾಸನದಲ್ಲಿ ಕುಮಾರನ ಪ್ರತಿಷ್ಠೆ. ಈ ಕೆಲಸಗಳು ಕೈಗೂಡುವವರೆಗೆ ಈ ಭೂಷಣಗಳನ್ನು ಧರಿಸೆನು. ಈ ವಿಷಯವನ್ನು ವಿನಯದಿಂದ ಕುಮಾರನಿಗೆ ಬಿನ್ನೈಸು, ಎಂದನು. ಅಮಾತ್ಯನ ಮಾತಿಗೆ ಕಂಚುಕಿ 'ಆರ್ಯ, ರಾಜಕುಮಾರನ ಬಳಿ ಸರ್ವಾಧಿಕಾರ ಪಡೆದ ದಿನವೇ ನಮ್ಮ ವೈರಿಗಳು ಹತರಾದರು. ನೀವು ಭೂಷಣರಹಿತರಾಗಿರುವುದನ್ನು ಕಂಡು ಕುಮಾರನಿಗೆ ಸಮಾಧಾನವಿಲ್ಲ. ಈ ಅಲಂಕಾರಗಳನ್ನು ತಾವು ಧರಿಸಲೇಬೇಕು' ಎಂದು ಬಲವಂತಪಡಿಸಿದನು. ರಾಕ್ಷಸನು ಕಂಚುಕಿಯ ಮಾತಿಗೆ ಮನವಿಲ್ಲದ ಮನಸ್ಸಿನಲ್ಲಿ ಒಪ್ಪಿ

ಕೊಳ್ಳಲು ಜಾಜಲಿ ಅಮಾತ್ಯರಿಗೆ ತಾನೇ ಆಭರಣಗಳನ್ನು ತೊಡಿಸಿ ಹೊರಟುಹೋದನು.

ಕಂಚುಕಿ ಹೊರಟುಹೋದಮೇಲೆ ತನ್ನನ್ನು ಕಾಣಲು ಯಾರಾದರೂ ಹೊರಗೆ ಕಾದಿರುವರೇ ಎಂದು ರಾಕ್ಷಸನು ತನ್ನ ಚಾರನನ್ನು ಕೇಳಿದನು. ಆಗ ರಾಕ್ಷಸನ ಎಡಗಣ್ಣು ಅದುರಲು ಅಪಶಕುನದಿಂದ ರಾಕ್ಷಸನು ಬೆಚ್ಚಿದನು. ಚಾರನು 'ಅಮಾತ್ಯರೇ, ತಮ್ಮನ್ನು ಕಾಣಲು ಹಾವಾಡಿಗನೊಬ್ಬನು ಹೊರಗೆ ಕಾದಿದ್ದಾನೆ. ಎಷ್ಟು ಹೇಳಿದರೂ ಹೋಗಲೊಲ್ಲ. ತಮ್ಮನ್ನು ಕಾಣಲೇಬೇಕೆಂಬ ಹಟ ಅವನಿಗೆ. ಈ ಪದ್ಯವನ್ನು ಬೇರೆ ತಮಗೆ ಕಳುಹಿಸಿದ್ದಾನೆ' ಎಂದು ಬಿನ್ನೈಸಿದನು. ಮೊಟ್ಟಮೊದಲೇ ಹಾವುಗಳ ನೋಟ ಅಪಶಕುನ. ಮೇಲಾಗಿ ಹಾವಾಡಿಗನ ಪದ್ಯದ ಭಾವವೇನು? ದುಂಬಿ ಕುಸುಮದಿಂದ ಕುಸುಮಕ್ಕೆ ಹಾರಿ, ಅದರ ಸಾರವನ್ನು ಗ್ರಹಿಸಿ ಇನ್ನೊಬ್ಬರ ಉಪಯೋಗಕ್ಕಾಗಿ ಅದನ್ನು ಕಾರುವುದೆಂದು. ಇದರ ಭಾವವನ್ನು ಗ್ರಹಿಸಿ ಪಾಟಲೀಪುರದ ಸಮಾಚಾರವನ್ನು ತಂದ ಗೂಢಚಾರನಿವನೆಂದರಿತು ರಾಕ್ಷಸನು ಚಾರನಿಗೆ 'ಪ್ರಿಯಂವದಕ, ಹಾವಾಡಿಗನ ಸುಭಾಷಿತಗಳನ್ನು ಕೇಳಲು ನನಗಾಶೆಯಾಗಿದೆ. ಹಾವುಗಳನ್ನು ಹೊರಗಿಟ್ಟು ಸೌಮ್ಯವೇಷದಿಂದ ಅವನನ್ನು ಒಳಗೆ ಬರುವಂತೆ ಹೇಳು. ನಿನ್ನ ಕೆಲಸದಲ್ಲಿ ಎಚ್ಚರಿಕೆಯಿಂದಿರು' ಎಂದು ಅಪ್ಪಣೆ ಮಾಡಿದನು.

ಗೂಢಚಾರನು ಅಮಾತ್ಯನನ್ನು ಏಕಾಂತದಲ್ಲಿ ಕಂಡನು. ಗೂಢಚಾರನನ್ನುಆದರಿಸಿ ರಾಕ್ಷಸನು 'ದಾತ್ಯೂಹಕ, ಪಾಟಲೀಪುರದ ಸಮಾಚಾರವೇನು? ಚಂದ್ರಗುಪ್ತನ ವಧೆ ಕೈಗೂಡಿತೇ? ರಾಜಧಾನಿಯಲ್ಲಿ ನಮ್ಮವರು ಏನೇನು ಕೆಲಸಮಾಡುತ್ತಿದ್ದಾರೆ? ಎಲ್ಲವನ್ನೂ ವಿವರವಾಗಿ ತಿಳಿಸು' ಎಂದನು. ಚಾರನು ರಾಕ್ಷಸನ ಮಾತಿಗೆ ಉತ್ತರವಾಗಿ ಈ ರೀತಿ ಬಿನ್ನೈಸಿದನು. 'ಅಮಾತ್ಯರೇ, ಚಂದ್ರಗುಪ್ತನ ವಧೆಯೆಲ್ಲಿ ಬಂತು? ಚಾಣಕ್ಯನಿಗೆ ಮೈತುಂಬ ಕಣ್ಣು. ನಮ್ಮವರ ಕಪಟ ನಮ್ಮವರಿಗೇ ಸಾವನ್ನು ತಂದುವು. ಪರ್ವತರಾಜನು ತೀರಿಕೊಂಡ ಮೇಲೆ ಚಾಣಕ್ಯನು ಅವನ ತಮ್ಮ ವಿರೋಚನನನ್ನು ಕರೆಸಿಕೊಂಡು ಅವನಿಗೆ ಅರ್ಧರಾಜ್ಯಕೊಡುವ ಏರ್ಪಾಟನ್ನು ಮಾಡಿದನು. ಚಂದ್ರಗುಪ್ತನ

ಪಟ್ಟಾಭಿಷೇಕ, ಮೆರವಣಿಗೆಗಾಗಿ ಎಲ್ಲವೂ ಚಾಣಕ್ಯನ ಅಪ್ಪಣೆಯಂತೆ ಸಿದ್ಧವಾದುವು. ಎಲ್ಲರಿಗಿಂತಲೂ ಮೊದಲು ದಾರುವರ್ಮನು ರಾಜ ದ್ವಾರವನ್ನು ಸಿಂಗರಿಸಿ, ಚಾಣಕ್ಯನಲ್ಲಿಗೆ ಬಂದು ಬಹುಮಾನ ಬೇಡಿ ದನು. ಚಾಣಕ್ಯನಿಗೆ ಅನುಮಾನ ಬಂದು ಆ ಸ್ಥಳವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ, ಮನಸ್ಸಿನಲ್ಲಿ ಏನನ್ನೋ ಯೋಚಿಸಿಕೊಂಡು ಸುಮ್ಮ ನಾದನು. ಶಿಲ್ಪಿಯನ್ನು ಮತ್ತೊಂದು ದಿನ ಬರಹೇಳಿ, ವಿರೋಚನನನ್ನು ಕರೆಸಿಕೊಂಡು, ಅವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಕಮಾಡಿ ಅರ್ಧರಾಜ್ಯವನ್ನು ಕೊಟ್ಟನು. ಸರಿರಾತ್ರಿಯಲ್ಲಿ ವಿರೋಚನನ ಮೆರ ವಣಿಗೆ ರಾಜದ್ವಾರಕ್ಕೆ ಬರಲು, ಅವನನ್ನು ಚಂದ್ರಗುಪ್ತನೆಂದೇ ತಿಳಿದು ದಾರುವರ್ಮನು ಕೀಲನ್ನು ಸಡಿಲಿಸಿದನು. ಆ ಭಾರವಾದ ತೊಲೆಯಿಂದ ಪಟ್ಟದಾನೆಯ ಮಾವಟಿಗನು ಹತನಾದನು. ಅದನ್ನು ಕಂಡು ಕೆಲಸ ಕೆಟ್ಟತೆಂದು ತಿಳಿದು ದಾರುವರ್ಮನು ತನ್ನ ಕೊಡತಿಯಿಂದ ವಿರೋಚ ನನ ತಲೆಯೊಡೆಯಲು, ಭಲ್ಲೆಯುವರು ಶಿಲ್ಪಿಯನ್ನು ತಿವಿದುಕೊಂದರು. ಇನ್ನು ವೈದ್ಯನ ಸಂಗತಿಯನ್ನು ಹೇಳುವೆನು, ಕೇಳಿ. ಒಂದು ದಿನ ಚಂದ್ರಗುಪ್ತನಿಗೆ ತಲೆನೋವೆಂದು ಚಾಣಕ್ಯನು ರಾಜವೈದ್ಯನನ್ನು ಕರೆ ಸಿದನು. ವೈದ್ಯನು ಕೊಟ್ಟ ಚೂರ್ಣವನ್ನು ಚಿನ್ನದ ಬಟ್ಟಲಿಗೆ ಹಾಕಿಸಿ ಚಾಣಕ್ಯನು ಪರೀಕ್ಷಿಸಲು, ಅದರ ಬಣ್ಣ ಕೆಟ್ಟಿತು. ಔಷಧಿಯಲ್ಲಿ ವಿಷ ವಿದೆಯೆಂದು ತಿಳಿದು ಅದನ್ನು ಕುಡಿಯಕೂಡದೆಂದು ಚಾಣಕ್ಯನು ಚಂದ್ರಗುಪ್ತನಿಗೆ ಹೇಳಿದನು. ಅದೇ ಔಷಧಿಯನ್ನು ವೈದ್ಯನಿಗೆ ಕುಡಿ ಸಿದರು. ಅವನು ಸತ್ತುಹೋದನು.'

ಕಥೆಯನ್ನು ಹೇಳುತ್ತಾ ದಾತ್ಯೂಹಕನು ಕಣ್ಣೀರು ಮಿಡಿದನು. ರಾಕ್ಷಸನು ಎಲ್ಲವನ್ನೂ ಕೇಳುತ್ತ ಸುಮ್ಮನೆ ಕುಳಿತಿದ್ದನು. ನಡುನಡುವೆ ಅವನ ಕಣ್ಣುಗಳಿಂದ ಬಿಸಿನೀರು ಮುತ್ತಿನಂತೆ ಉದುರುತ್ತಿತ್ತು. ಕಥೆ ಮುಂದುವರಿಯಿತು. 'ಮಲಗುವ ಮನೆಯಲ್ಲಿ ಚಂದ್ರಗುಪ್ತನನ್ನು ಕೊಲ್ಲಲು ನೇಮಿಸಿದ್ದ ಪ್ರಮೋದಕನ ಗತಿಯೂ ಹೀಗೆಯೇ ಆಯಿತು. ನೀವು ಕೊಟ್ಟ ಹಣವನ್ನು ವಿವೇಕವಿಲ್ಲದೆ ವೆಚ್ಚಮಾಡಿ ಅವನು ಮೆರೆಯ ತೊಡಗಿದನು. ಅವನ ಬಟ್ಟೆಬರೆ, ಊಟ ಉಪಚಾರ, ವಿಲಾಸ ವಿಹಾರ ಇವಕ್ಕೆ ಮಿತಿಯೇ ಇರಲಿಲ್ಲ. ಚಾಣಕ್ಯನು ಅವನನ್ನು ಕರೆದು 'ನಿನ್ನ

ಸಂಬಳ ಸ್ವಲ್ಪ. ಈ ವಿಲಾಸಕ್ಕೆ ನಿನಗೆಲ್ಲಿ ಹಣ ಬಂತು?' ಎಂದು ಕೇಳಿದನು. ಪ್ರಮೋದಕನು ತಪ್ಪುತಪ್ಪಾಗಿ ಉತ್ತರಕೊಡಲು ಗುಟ್ಟು ರಟ್ಟಾಯಿತು. ಇದರ ಪರಿಣಾಮ, ಪ್ರಮೋದಕನಿಗೆ ಚಿತ್ರ ಹಿಂಸೆ. ಚಂದ್ರಗುಪ್ತನು ಮಲಗುವ ಮನೆಯ ಗೋಡೆಯಲ್ಲಿ ಅಡಗಿದ್ದ ಚೋರರ ಸುದ್ದಿಯಂತೂ ಕೇಳಲು ಬಲುಘೋರ. ಗೋಡೆಯ ಬಿರುಕಿನಲ್ಲಿ ಅನ್ನದ ಅಗುಳನ್ನು ಕಚ್ಚಿಕೊಂಡು ಒಯ್ಯುತ್ತಿದ್ದ ಇರುವೆಯ ಸಾಲು ಚಾಣಕ್ಯನ ಕಣ್ಣಿಗೆ ಬೀಳಲು ಅಲ್ಲಿ ಯಾರೋ ಇರುವರೆಂದು ಊಹಿಸಿ ಅವನು ಆ ಮನೆಗೆ ಬೆಂಕಿ ಇಡಿಸಿದನು. ಮನೆಯನ್ನೆಲ್ಲಾ ಹೊಗೆ ಸುತ್ತಿಕೊಳ್ಳಲು ಚೋರರು ಹೊರಗೆ ಬರಲು ಯತ್ನಿಸಿದರು. ಅವರಿಗೆ ಸುರಂಗದ ದಾರಿಯೂ ಕಾಣಿಸಲಿಲ್ಲ. ಹೆಗ್ಗಣಗಳಂತೆ ಅವರು ಒಳಗೇ ಸುಟ್ಟು ಬೂದಿಯಾದರು.'

ರಾಕ್ಷಸನು ಕಥೆಯನ್ನು ಮೈಯೆಲ್ಲ ಕಿವಿಯಾದವನಂತೆ ಕೇಳುತ್ತಿದ್ದನು. ದುಃಖದಿಂದ ಅವನ ಕೊರಳ ಸೆರೆಹಿಗ್ಗಿದುವು. ಸಂಕಟವನ್ನು ಸ್ವಲ್ಪ ಸೈರಿಸಿಕೊಂಡು ರಾಕ್ಷಸನು ಹೇಳಿದನು : ‹ ದಾತ್ಯೂಹಕ, ಚಂದ್ರಗುಪ್ತನಿಗಿರುವ ದೈವಸಹಾಯವನ್ನು ನೋಡು. ನನ್ನ ಪ್ರಯತ್ನಗಳೆಲ್ಲಾ ಹೇಗೆ ಹಾಳಾಗುತ್ತಿವೆ! ಅದಿರಲಿ : ರಾಜಧಾನಿಯಲ್ಲಿರುವ ನನ್ನ ಮಿತ್ರರಿಗೆ ಏನೂ ಕೇಡಾಗಲಿಲ್ಲವಷ್ಟೆ !' ರಾಕ್ಷಸನ ಮಾತಿಗೆ ಗೂಢಚಾರನು 'ಅಮಾತ್ಯರೇ, ಕಥೆಯೊಳರೆ ಮುಗಿದಿಲ್ಲ. ಈ ಘಟನೆಗಳಾದ ಮೇಲೆ ಚಾಣಕ್ಯನು ಚಂದ್ರಗುಪ್ತನನ್ನು ಎಚ್ಚರಿಕೆಯಿಂದ ನೋಡಿಕೊಳ್ಳತೊಡಗಿದನು. ರಾಕ್ಷಸನ ಮಾತಿನಂತೆ ವಿಷಕನ್ಯೆಯನ್ನು ಜೀವಸಿದ್ಧಿ, ಪರ್ವತರಾಜನಿಗೊಪ್ಪಿಸಿ ರಾಜನನ್ನು ಕೊಲ್ಲಿಸಿದನೆಂದು ಅವನನ್ನು ಅವಮಾನಪಡಿಸಿ ನಗರದಿಂದ ಹೊರಡಿಸಲಾಯಿತು. ರಾಜವೈದ್ಯ ಮುಂತಾದವರಿಂದ ಶಕಟದಾಸನು ಚಂದ್ರಗುಪ್ತನ ಸಾವಿಗೆ ಏರ್ಪಡಿಸಿದನೆಂದು ಅವನನ್ನು ಶೂಲಕ್ಕೇರಿಸಿದನು. ಅಮಾತ್ಯರ ಕುಟುಂಬದ ಸುಳಿವು ಚಂದನದಾಸ ಸೆಟ್ಟಿಯ ಮನೆಯಲ್ಲಿರುವುದು ಚಾಣಕ್ಯನಿಗೆ ತಿಳಿದು, ಅವನ ಆಸ್ತಿಯೆಲ್ಲವನ್ನು ತೆಗೆದುಕೊಂಡು, ಹೆಂಡತಿ ಮಕ್ಕಳೊಡನೆ ಅವನನ್ನು ಸೆರೆಮನೆಯಲ್ಲಿಟ್ಟಿದ್ದಾನೆ. ಗುಟ್ಟನ್ನು ರಟ್ಟುಮಾಡದಿದ್ದುದೇ ಅವನ ಅಪರಾಧ' ಎಂದು ಹೇಳಿ ಸುಮ್ಮನಾದನು.

ಈ ಸಮಾಚಾರವನ್ನು ಕೇಳಿ ಹೆಂಡತಿ ಮಕ್ಕಳೊಡನೆ ಚಾಣಕ್ಯನಿಗೆ ತಾನೇ ವಶವಾದಂತಾಯಿತೆಂದುಕೊಂಡನು ರಾಕ್ಷಸ. ಅಷ್ಟರಲ್ಲೇ ಚಾರನು ಬಂದು ಶಕಟದಾಸನು ಬಾಗಿಲಲ್ಲಿ ಕಾದಿರುವನೆಂದು ಬಿನ್ನೈಸಿದನು. ಇದೇನು ಸೋಜಿಗ? ಶೂಲಕ್ಕೇರಿದ ಶಕಟದಾಸನು ಬದುಕಿ ಬರುವುದೆಂದರೇನು? ಬದುಕತಕ್ಕವನನ್ನು ದೈವವೇ ಕಾಪಾಡಬಹುದಲ್ಲವೇ? ರಾಕ್ಷಸನ ಅಪ್ಪಣೆಯಂತೆ ಶಕಟದಾಸನು ಒಳಕ್ಕೆ ಬರಲು ಕೌಟಲ್ಯನ ದೃಷ್ಟಿಗೆ ಬಿದ್ದೂ ಬದುಕಿಬಂದ ಮಿತ್ರನನ್ನು ಅಮಾತ್ಯನು ಅಪ್ಪಿಕೊಂಡನು. ಈ ಆನಂದವನ್ನು ಒದಗಿಸಿದ ಶಕಟದಾಸನ ಮಿತ್ರನಾದ ಸಿದ್ಧಾರ್ಥಕನಿಗೆ ತನ್ನ ಮೈಮೇಲಿದ್ದ ಒಡವೆಗಳನ್ನು ಅಮಾತ್ಯನು ಕಳಚಿಕೊಟ್ಟನು.

ಆಗ ರಾಕ್ಷಸನ ಪಾದಕ್ಕೆ ಬಿದ್ದು ಸಿದ್ಧಾರ್ಥಕನು ಅವನಲ್ಲಿ ಈ ರೀತಿ ಬಿನ್ನೈಸಿಕೊಂಡನು. 'ಅಮಾತ್ಯರೇ, ಇದು ನನಗೆ ಹೊಸ ಊರು. ಇಲ್ಲಿ ಒಬ್ಬರ ಗುರುತೂ ನನಗಿಲ್ಲ. ಈ ಆಭರಣಗಳನ್ನು ಈ ಮುದ್ರಿಕೆಯಿಂದ ಮುದ್ರಿಸಿ ತಮ್ಮ ವಶದಲ್ಲೇ ಇಡಿಸಿಕೊಳ್ಳಬೇಕು. ನನಗೆ ಬೇಕಾದಾಗ ಅವನ್ನು ತೆಗೆದುಕೊಳ್ಳುತ್ತೇನೆ. ಅಲ್ಲದೆ ತಮ್ಮಲ್ಲಿ ಮತ್ತೊಂದು ಅರಿಕೆ. ಈಗ ನಾನು ಚಾಣಕ್ಯನಿಗೆ ಎದಿರುಬಿದ್ದಂತಾಗಿದೆ. ಆದ್ದರಿಂದ ರಾಜಧಾನಿಗೆ ಕಾಲಿಡುವಂತಿಲ್ಲ. ತಮ್ಮ ಪಾದಸೇವೆಯಲ್ಲಿ ಇಲ್ಲಿಯೇ ಇದ್ದು ಕಾಲಕಳೆಯಬೇಕೆಂಬುದು ನನ್ನ ಬಯಕೆ.'

ಸಿದ್ಧಾರ್ಥಕನು ಕೊಟ್ಟ ತನ್ನ ಮುದ್ರಿಕೆಯನ್ನು ನೋಡಿ ಹೆಂಡತಿಗೆ ಕೊಟ್ಟ ಈ ಮುದ್ರಿಕೆ ವೈರಿಗಳ ಕೈಗೆ ಬೀಳಲಿಲ್ಲವೆಂದು ಅಮಾತ್ಯನಿಗೆ ಹರುಷವಾಯಿತು. ಶತ್ರುಗಳ ಕೈಗೆ ಬಿದ್ದು ಬಂದ ತನ್ನ ಮುದ್ರಿಕೆ ಅದು ಎಂದರಿಯ ರಾಕ್ಷಸ. ಆ ಬಳಿಕ ಶಕಟದಾಸನನ್ನು ಕುರಿತು ರಾಕ್ಷಸನು 'ಶಕಟದಾಸ, ಸಿದ್ಧಾರ್ಥಕನು ನಮ್ಮ ಬಳಿಯಲ್ಲೇ ಇರಲಿ. ಈ ಮುದ್ರೆಯುಂಗುರದಿಂದಲೇ ನಿನ್ನ ರಾಯಸದ ಕೆಲಸವನ್ನು ಮಾಡುತ್ತಿರು. ಆಯಾಸಹೊಂದಿರುವ ನೀವು ಇನ್ನು ವಿಶ್ರಮಿಸಿಕೊಳ್ಳಿ' ಎಂದು ಹೇಳಿ ಅವರನ್ನು ಕಳುಹಿಸಿ ಕೊಟ್ಟನು.

ಶಕಟದಾಸನು ಹೊರಟುಹೋದ ಮೇಲೆ ಚಂದ್ರಗುಪ್ತನ ಆಸ್ಥಾನದ ನಡವಳಿಕೆಗಳೇನೆಂದು ದಾತ್ಯೂಹಕನನ್ನು ರಾಕ್ಷಸನು ಕೇಳಿದನು.

ಅದಕ್ಕೆ ಉತ್ತರವಾಗಿ ಅವನು ‘ ಅಮಾತ್ಯರೇ, ಚಂದ್ರಗುಪ್ತನ ಆಸ್ಥಾನದಲ್ಲಿ ನಿಮ್ಮ ಉಪಾಯ ಫಲಿಸುವಂತೆ ತೋರುತ್ತಿದೆ. ಮಲಯಕೇತುವನ್ನು ಓಡಿಹೋಗಲು ಅವಕಾಶಕೊಟ್ಟದ್ದು, ಆಗಾಗ ವಿಜಯದಿಂದ ಕೊಬ್ಬಿರುವ ಚಾಣಕ್ಯನು ಚಂದ್ರಗುಪ್ತನ ಅಪ್ಪಣೆಯನ್ನು ಮುರಿಯುತ್ತಿರುವುದು ಚಂದ್ರಗುಪ್ತನಿಗೆ ಅಸಮಾಧಾನವನ್ನು ತಂದಿದೆ’ ಎಂದು ಅರಳಿದ ಮುಖದಿಂದ ಹೇಳಿದನು.

ಚಂದ್ರಗುಪ್ತನಿಗೆ ಚಕ್ರವರ್ತಿಪದವಿಯ ದರ್ಪವಿದೆ. ಚಾಣಕ್ಯನು ಅಭಿಮಾನಿ. ಒಬ್ಬನಿಗೆ ರಾಜ್ಯ ಕೈವಶವಾಯಿತು. ಮತ್ತೊಬ್ಬನ ಪ್ರತಿಜ್ಞೆ ಕೈಗೂಡಿತು. ಹೀಗಿರುವಾಗ ಇವರಲ್ಲಿ ಅಸಮಾಧಾನ ಹುಟ್ಟಿರಬಹುದೆಂದು ಯೋಚಿಸಿ ರಾಕ್ಷಸನು ‘ ದಾತ್ಯೂಹಕ, ಇದೇ ವೇಷದಿಂದ ಮತ್ತೆ ಪಾಟಲೀಪುರಕ್ಕೆ ಹೋಗು. ಸಮಯವರಿತು ವೈತಾಳಿಕರಾದ ನಮ್ಮ ಕಲಶಕ ವಿಜಯರು ಚಂದ್ರಗುಪ್ತನನ್ನು ಹೊಗಳಿ, ಅವನಿಗೆ ಚಾಣಕ್ಯನ ಮೇಲೆ ಕೋಪ ಕೆರಳುವಂತೆ ಮಾಡಲಿ. ಅಲ್ಲಿನ ಗುಟ್ಟಾದ ಸುದ್ದಿಯನ್ನು ಕರಭಕನೊಡನೆ ನನಗೆ ಅವರು ಹೇಳಿ ಕಳುಹಿಸಲಿ’ ಎಂದು ಅವನನ್ನು ಕಳುಹಿಸಿಕೊಟ್ಟನು.

ಈ ವೇಳೆಗೆ ಪ್ರಿಯಂವದಕನು ಫ್ರಾಂವರು ವರ್ತಕರು ಮಾರಾಟಕ್ಕಾಗಿ ಆಭರಣದ ಪೆಟ್ಟಿಗೆಗಳನ್ನು ತಂದಿದ್ದಾರೆಂದು ವಿಜ್ಞಾಪಿಸಿ ಅವುಗಳನ್ನು ತಂದು ಅಮಾತ್ಯನಿಗೆ ತೋರಿಸಿದನು. ಆಭರಣಗಳು ಚೆನ್ನಾಗಿದ್ದುವು. ಅಲ್ಲದೆ ಮೈಮೇಲಿದ್ದ ಆಭರಣಗಳನ್ನು ಸಿದ್ಧಾರ್ಥಕನಿಗೆ ಉಚಿತವಾಗಿ ಕೊಟ್ಟಿದ್ದ ಕಾರಣ ರಾಕ್ಷಸನು ಆ ಪೆಟ್ಟಿಗೆಗಳನ್ನು ಮಾರಾಟಕ್ಕೆ ತೆಗೆದುಕೊಂಡನು. ಚಾಣಕ್ಯನ ತಂತ್ರ ಕೈಗೂಡಿತು.

## ೨೬. ಕಪಟಕಲಹ

ಚಾಣಕ್ಯನ ಅಪ್ಪಣೆಯಂತೆ ಚಂದ್ರಗುಪ್ತನು ರಾಜಕಾರ್ಯಗಳನ್ನು ತಾನೇ ನೋಡಿಕೊಳ್ಳುತ್ತಿರಲು ಮಳೆಗಾಲ ಕಳೆದು ಶರತ್ಕಾಲ ಸಾರಿಬಂತು. ತಿಳಿನೀಲಿಯಾಕಾಶದಲ್ಲಿ ಸಣ್ಣಸಣ್ಣ ಮರಳುಗುಪ್ಪೆಗಳಂತೆ ಮೋಡಗಳು ತೇಲಾಡಲಾರಂಭಿಸಿದುವು. ಬಿರಿದ ಜಾಜಿಯಲ್ಲಿ ದುಂಬಿಯ ಮೊರೆತ ಕೇಳಿ ಬರತೊಡಗಿತು. ಗಂಗಾನದಿಯ ಮೇಲೆ ಬೀಸಿ ಬರು

ತ್ತಿದ್ದ ತಂಗಾಳಿ ಹೂವಿನ ಕಂಪನ್ನು ಹೊತ್ತು ತಂದು ಜನರಿಗೆ ಆನಂದ ವನ್ನುಂಟುಮಾಡಲಾರಂಭಿಸಿತು. ಶರತ್ಕಾಲದ ಈ ರಾತ್ರಿಗಳಲ್ಲಂತೂ ಬೆಳುದಿಂಗಳ ಮಳೆಯೇ ಸುರಿದು ಭೂಮಿ ಆಕಾಶಗಳನ್ನೊಂದುಮಾಡಿ ನಗರಕ್ಕೆ ವಿಶೇಷವಾದ ಸೊಗಸನ್ನುಂಟುಮಾಡುತ್ತಿತ್ತು. ಲೋಕಕ್ಕೆ ಕಣ್ಣು ಬಂದಂತೆ ಬಂದ ಶರತ್ಕಾಲವನ್ನು ನೋಡಿ ಚಂದ್ರಗುಪ್ತನು 'ಈ ಶರತ್ಕಾಲ ಜನರಿಗೆ ಸಂತೋಷಕರವಾದ ಸಮಯ. ಅದರಲ್ಲೂ ಈ ರಾತ್ರಿ ಗಳಲ್ಲಿ ಕೌಮುದೀಮಹೋತ್ಸವ ಬಲು ಸೊಗಸು. ನಾನು ರಾಜನಾದ ಮೇಲೆ ಈ ನಗರದಲ್ಲಿ ವಿಶೇಷ ಮಹೋತ್ಸವಗಳು ಎಂದೂ ನಡೆದಿಲ್ಲ. ಈ ಹುಣ್ಣಿಮೆ ನಾನು ಹುಟ್ಟಿದ ದಿನವಾದುದರಿಂದ ಅಂದು ಕೌಮುದೀ ಮಹೋತ್ಸವವನ್ನು ಆಚರಿಸಿದರೆ, ನಂದರು ಮಡಿದ ದುಃಖ ಜನರಿಗೆ ಸ್ವಲ್ಪ ಕಡಿಮೆಯಾಗಿ ಅದರಿಂದ ಅವರಿಗೆ ಆನಂದವುಂಟಾಗಬಹುದು. ಆದ್ದರಿಂದ ಇಂದಿನಿಂದ ಮೊದಲ್ಗೊಂಡು ಇನ್ನು ಹದಿನೈದು ದಿನ ರಾಜ ಧಾನಿಯಲ್ಲಿ ಉತ್ಸವಮಾಡಿಸುವೆನು' ಎಂದು ನಿರ್ಧರಿಸಿಕೊಂಡು ಹತ್ತಿರ ದಲ್ಲಿದ್ದ ದೂತನನ್ನು ನೋಡಿ 'ಈದಿನ ಮೊದಲ್ಗೊಂಡು ಇನ್ನು ಹದಿನೈದು ದಿನಗಳು ನಗರದಲ್ಲಿ ಕೌಮುದೀಮಹೋತ್ಸವ ನಡೆಯಲಿ. ಈ ಉತ್ಸವ ಕ್ಕಾಗಿ ನಮ್ಮ ಪಟ್ಟಣ ಸಿಂಗಾರವಾಗಲಿ. ನಮ್ಮ ಪ್ರಜೆಗಳು ಉಟ್ಟು ತೊಟ್ಟು ಈಉತ್ಸವದಲ್ಲಿ ಭಾಗವಹಿಸಿ ನಲಿಯಲಿ. ಈ ಹುಣ್ಣಿಮೆಯ ಸಂಜೆ ಅಲಂಕೃತವಾದ ಸುಗಾಂಗವೆಂಬ ನಮ್ಮ ಅರಮನೆಯ ಪ್ರಾಸಾದದಲ್ಲಿ ನಾವು ಈ ಉತ್ಸವದಲ್ಲಿ ಭಾಗವಹಿಸುತ್ತೇವೆ. ಆದ್ದರಿಂದ ಪ್ರತಿಯೊಂದು ಏರ್ಪಾಟೂ ಎಚ್ಚರಿಕೆಯಿಂದ ನಡೆಯತಕ್ಕದ್ದು' ಎಂದು ಅಪ್ಪಣೆ ಮಾಡಿದನು.

ಅರಸಾಳುಗಳು ರಾಜನ ಅಪ್ಪಣೆಯನ್ನು ನಗರದಲ್ಲಿ ಸಾರುತ್ತ ಬಂದರು. ಈ ಉತ್ಸವದ ಸಮಾಚಾರವನ್ನು ಕೇಳಿದ ಚಾಣಕ್ಯನು ಕ್ಷಣ ಮಾತ್ರ ಯೋಚಿಸಿ ತನ್ನ ಶಿಷ್ಯನಿಗೆ 'ಶೀಘ್ರಕಾರಿ, ಈಗ ಈ ಉತ್ಸವ ವನ್ನು ಮಾಡ ಕೆಲಸವಿಲ್ಲ. ನಿಲ್ಲಿಸತಕ್ಕುದೆಂದು ಸಾರುವ ಭಟರಿಗೆ ನಾವು ಹೇಳಿದುದಾಗಿ ತಿಳಿಸಿ ಬಾ' ಎಂದು ಹೇಳಿಕಳುಹಿಸಿದನು. ಚಾಣಕ್ಯನ ಅಪ್ಪಣೆಯನ್ನು ಮೀರಿ ಬದುಕುವುದುಂಟೆ? ಆರ್ಯನ ಅಪ್ಪಣೆಯನ್ನು ಮೀರಿದರೆ ಅಪರಾಧಕ್ಕೆ ಪಾತ್ರರಾಗಬಹುದೆಂದು ಹೆದರಿ ಸಾರುವುದನ್ನು

ನಿಲ್ಲಿಸಿ ರಾಜಭಟರು ಹೊರಟುಹೋದರು. ಇದನ್ನು ನೋಡಿ ಚಾಣಕ್ಯ ಚಂದ್ರಗುಪ್ತರಿಗೆ ಮನಸ್ತಾಪವುಂಟಾಗಿದೆಯೆಂದು ಪಟ್ಟಣಿಗರು ಗುಟ್ಟಾಗಿ ಆಡಿಕೊಳ್ಳ ತೊಡಗಿದರು.

ಹುಣ್ಣಿಮೆಯ ಸಂಜೆ ಸಮೀಪಿಸಿತು. ಹಾಲು ಚೆಲ್ಲಿದಂತಿದ್ದ ಆ ಬೆಳುದಿಂಗಳ ರಾತ್ರಿಯಲ್ಲಿ, ಹುಳಿಯಲ್ಲಿ ತೊಳೆದ ಬಾಳ ಬಣ್ಣವನ್ನು ಹೋಲುತ್ತಿದ್ದ ಆಕಾಶವೆಂಬ ಮಡಕೆಯಲ್ಲಿಟ್ಟ ಹೊಸ ಬೆಣ್ಣೆಯ ಮುದ್ದೆಯಂತೆ ಚಂದ್ರನು ಕಾಣಿಸಿಕೊಂಡನು. ಆ ಸಮಯದಲ್ಲಿ ಚಂದ್ರಗುಪ್ತನು ತನ್ನ ಅಪ್ಪಣೆಯಂತೆ ಅಲಂಕೃತವಾದ ನಗರದ ಚೆಲುವನ್ನು ನೋಡ ಬಯಸಿ, ಸುಗಾಂಗವೆಂಬ ಪ್ರಾಸಾದಕ್ಕೆ ಮಿತಪರಿವಾರದೊಡನೆ ಬಂದು ರಾಜಾಸನದಲ್ಲಿ ಕುಳಿತನು. ನಾಲ್ಕು ದಿಕ್ಕುಗಳನ್ನೂ ನೋಡಲಾಗಿ ಪಟ್ಟಣದ ಬೀದಿಗಳು ಅಲಂಕೃತವಾಗದೆ ಹಾಳುಬಡಿಯುತ್ತಿರಲು ಸಮೀಪದಲ್ಲಿದ್ದ ಅವಸರದವನನ್ನು ನೋಡಿ—

ಚಂದ್ರಗುಪ್ತ—ಎಲೈ ವೈತಾಳಿಕನೆ, ಈ ಪಟ್ಟಣದಲ್ಲಿ ಕೌಮುದೀ ಮಹೋತ್ಸವವನ್ನು ನಡೆಸಬೇಕೆಂದು ನಾವು ಅಪ್ಪಣೆಮಾಡಿರಲಿಲ್ಲವೆ? ನಮ್ಮ ಅಪ್ಪಣೆಯಂತೆ ಒಂದೂ ನಡೆದಂತೆ ಕಾಣುವುದಿಲ್ಲ. ಬೀದಿಗಳನ್ನು ಸಿಂಗರಿಸಿ ಹೂವೆರಚಿಲ್ಲ. ಹೊಸ ತೋರಣಗಳನ್ನು ಕಟ್ಟಿಲ್ಲ. ಗಂಡು ಹೆಣ್ಣುಗಳು ನಾಚಿಕೆಯುಳಿದು ಬೀದಿಯಲ್ಲಿ ಸರಸವಾಡುತ್ತಿಲ್ಲ. ಒಟ್ಟಿನಲ್ಲಿ ಕೌಮುದೀಮಹೋತ್ಸವದ ಚಿನ್ಹೆಯೇ ಕಂಡು ಬರುವುದಿಲ್ಲ! ಈ ಪುರ ಜನರು ನಮ್ಮ ಅಪ್ಪಣೆಯಂತೆ ನಡೆದುಕೊಳ್ಳುವುದಿಲ್ಲವೇ?

ಕುಮುದುಕ—ಮಹಾಸ್ವಾಮಿಯವರ ಅಪ್ಪಣೆಯನ್ನು ಮೀರಿ ನಡೆಯುವುದಕ್ಕೆ ಮತ್ತೊಬ್ಬನಿಗೆ ಈ ಲೋಕದಲ್ಲಿ ಧೈರ್ಯವುಂಟೇ? ಆದರೆ ಈ ವಿಷಯವನ್ನು ತಮ್ಮಲ್ಲಿ ಬಿನ್ನೈಸಲು ಬಲು ಭಯವಾಗುತ್ತದೆ.

ಚಂದ್ರಗುಪ್ತ (ಆ ವಾಕ್ಯದ ಭಾವವನ್ನು ಗ್ರಹಿಸಿ) ಹಾಗಾದರೆ ಈ ಉತ್ಸವವನ್ನು ಮಾಡಕೆಲಸವಿಲ್ಲವೆಂದು ಆರ್ಯಚಾಣಕ್ಯರು ಅಪ್ಪಣೆ ಮಾಡಿದರೋ?

ಕುಮುದಕ—ಮಹಾಸ್ವಾಮಿಯವರ ಊಹೆ ಸತ್ಯ.

ಚಂದ್ರಗುಪ್ತ (ಮನಸ್ಸಿನಲ್ಲಿ) ಚಾಣಕ್ಯರು ಕೌಮುದೀಮಹೋತ್ಸವವನ್ನು ನಿಲ್ಲಿಸಲು ಕಾರಣವೇನು? ಅವರ ಅಪ್ಪಣೆಯಂತೆಯೇ ನಾನು

ರಾಜಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದೇನೆ. ಎಲ್ಲ ಆಶೆಗಳನ್ನೂ ತ್ಯಾಗಮಾಡಿ, ಮಾಡುವ ತಪಸ್ಸನ್ನೂ ನಿಲ್ಲಿಸಿ ನಾನು ಮಾಡುವ ರಾಜ್ಯ ವಿಚಾರವನ್ನು ನೋಡಿ ತಾವು ಕೈಕೊಂಡ ಕಾರ್ಯ ಸಫಲವಾಯಿತೆಂದು ಸಂತೋಷಪಡುವ ಅಭಿಜ್ಞರಾದ ಆರ್ಯರಿಗೆ ನನ್ನಲ್ಲಿ ಎಂದಿಗೂ ಅಸೂಯೆ ಉಂಟಾಗಿರಲಾರದು. ನನ್ನ ಆಜ್ಞೆಯನ್ನು ಭಂಗಪಡಿಸಿದು ದರಿಂದ ತಮಗೂ ನನಗೂ ಮನಸ್ತಾಪವುಂಟಾಗಿದೆಯೆಂಬ ವಾರ್ತೆ ಲೋಕದಲ್ಲಿ ಹರಡಿ ಅದು ಹಗೆಗಳಿಗೆ ತಿಳಿದು ರಾಕ್ಷಸನು ಮಲಯಕೇತು ವನ್ನು ಕಟ್ಟಿಕೊಂಡು ದಂಡೆತ್ತಿ ಬರುವಂತಾಗಲಿ. ಹಾಗೆ ಬಂದರೆ ಶತ್ರು ವನ್ನು ನಿಗ್ರಹಿಸುವ ಯೋಚನೆಯಿಂದ ಹೀಗೆ ಮಾಡಿರುವರೆಂದರೆ ಸೋತುಹೋದ ಶತ್ರುವನ್ನು ತನ್ನ ಮೇಲೆ ದಂಡೆತ್ತಿ ಬರುವಂತೆ ಮಾಡಿ ಕೊಳ್ಳುವ ಪುರುಷನು ಅಪ್ರಬುದ್ಧ. ಈ ಅಭಿಪ್ರಾಯ ಚಾಣಕ್ಯರ ಮನೋಗತವಲ್ಲ. ನನ್ನಿಂದ ತಿಳಿಯದೆ ಅಪರಾಧವೇನಾದರೂ ಉಂಟಾ ಗಿದ್ದ ಪಕ್ಷದಲ್ಲಿ ಗುಟ್ಟಾಗಿ ನನಗೆ ಬುದ್ಧಿಗಲಿಸುತ್ತಿದ್ದರಲ್ಲದೆ ಹೀಗೆ ಎಲ್ಲ ರಿಗೂ ತಿಳಿಯುವಂತೆ ನನ್ನ ಅಪ್ಪಣೆಯನ್ನು ಮುರಿಯುತ್ತಿರಲಿಲ್ಲ. ಆದರೂ ಆರ್ಯರ ಮನೋಭಿಪ್ರಾಯವನ್ನು ಈ ರೀತಿ ಗ್ರಹಿಸಬಹುದೇ? ಸುಲಭವಾಗಿ ಜಯಿಸಲಸಾಧ್ಯರಾದ ನಂದರನ್ನು ಅಲ್ಪ ಪ್ರಯತ್ನದಿಂ ದಲೇ ನಿಗ್ರಹಿಸಿದ ಚಾಣಕ್ಯರು ನನ್ನ ಹಗೆಗಳಾದ ಮಲಯಕೇತು ರಾಕ್ಷಸ ರನ್ನು ಜಯಿಸಬಯಸಿ, ನನಗೂ ತಮಗೂ ವಿರೋಧವುಂಟಾಗಿದೆಯೆಂಬ ವಾರ್ತೆಯನ್ನು ಹಗೆಗಳಲ್ಲಿ ಹರಡಿ, ಬಳಿಕ ಉಪಾಯವಾಗಿ ಶತ್ರುವನ್ನು ಗೆಲ್ಲುವ ಉದ್ದೇಶದಿಂದ ಉತ್ಸವವನ್ನು ನಿಲ್ಲಿಸಿರಬಹುದು. ಚಾಣಕ್ಯರು ಕೈಕೊಳ್ಳುವ ಕಾರ್ಯವೆಲ್ಲ ನನ್ನ ಉಪಯೋಗಕ್ಕಾಗಿ, ಕಲ್ಯಾಣಕ್ಕಾಗಿ. ಅವರ ಇಷ್ಟದಂತೆ ನಡೆದುಕೊಳ್ಳುವುದೇ ನನಗೆ ಶ್ರೇಯಸ್ಕರ. ಆದರೂ ಈ ವಿಷಯವನ್ನು ಅವರ ಬಾಯಿಂದಲೇ ತಿಳಿದುಕೊಳ್ಳುವೆನು. (ಕುಮು ದಕನನ್ನು ನೋಡಿ) ಕುಮುದಕ, ಆರ್ಯಚಾಣಕ್ಯರನ್ನು ನಾನು ನೋಡ ಬೇಕು. ಪೂಜ್ಯರಿಗೆ ನನ್ನ ನಮಸ್ಕಾರಗಳನ್ನು ತಿಳಿಸಿ ಕಾರ್ಯ ಗೌರವ ವಿಲ್ಲದಿದ್ದರೆ ಅವರನ್ನು ಇಲ್ಲಿಗೆ ಕರೆತರುವವನಾಗು.

ಚಂದ್ರಗುಪ್ತನ ಅಪ್ಪಣೆಯಂತೆ ಕುಮುದಕನು ಚಾಣಕ್ಯನ ಆಶ್ರ ಮಕ್ಕೆ ಬಂದನು. ಆಶ್ರಮದ ಹಳೆಯ ಗೋಡೆ ಆಗಲೇ ಬಿರುಕುಬಿಟ್ಟು

ಕುಸಿಯುತ್ತಿತ್ತು. ಸಮಿತ್ತನ್ನು ಹೇರಿ ಚಾವಣಿ ಬಗ್ಗಿಹೋಗಿತ್ತು. ಆಶ್ರಮದಲ್ಲಿ ಒಂದು ಕಡೆ ದರ್ಭೆಯ ಹೊರೆ; ಮತ್ತೊಂದು ಕಡೆ ಬೆರಣಿಯ ರಾಶಿ. ರಾಜಸಚಿವನ ಭವನವೇ ಇದು ಎನಿಸಿತು ಕುಮುದಕನಿಗೆ. ಪರ್ಣಶಾಲೆಯಲ್ಲಿ ಪ್ರಜ್ವಲಿಸುವ ಅಗ್ನಿಯಂತೆ ಕುಶಾಸನದಲ್ಲಿ ಕುಳಿತು ಶಿಷ್ಯರಿಗೆ ಧರ್ಮೋಪದೇಶ ಮಾಡುತ್ತಿದ್ದ ಚಾಣಕ್ಯನನ್ನು ಕಂಡು, ಕುಮುದಕನು ಕೈಮುಗಿದು ' ಪೂಜ್ಯರೇ, ಚಂದ್ರಗುಪ್ತ ಸಾರ್ವಭೌಮರು ತಮಗೆ ತಲೆಬಾಗಿ ನಮಸ್ಕರಿಸಿ, ಆರ್ಯರಿಗೆ ಬೇರಾವ ಕಾರ್ಯಗೌರವವಿರದಿದ್ದರೆ ರಾಜಸಭೆಗೆ ದಯಮಾಡಿಸಬೇಕೆಂದು ಕೇಳಿಕೊಳ್ಳುತ್ತಾರೆ.' ಎಂದು ಬಿನ್ನೈಸಿದನು.

ಚಾಣಕ್ಯ—ಆತನು ಮಾಡಿದ ನಮಸ್ಕಾರ ಈಶ್ವರನಿಗೆ ಅರ್ಪಿತವಾಗಲಿ. ಎಲೈ ವೈತಾಳಿಕನೆ, ವೃಷಲನು ನನ್ನನ್ನು ನೋಡಬಯಸುವನೇ? ಹಾಗಾದರೆ ನಾವು ಕೌಮುದೀಮಹೋತ್ಸವವನ್ನು ನಿಲ್ಲಿಸಿದುದು ಅರಸನ ಕಿವಿಗೆ ಬೀಳಲಿಲ್ಲವಷ್ಟೆ?

ಕುಮುದಕ—ಪೂಜ್ಯರೇ, ಅದನ್ನು ಅವರಿಗೆ ಯಾರೂ ಅರಿಕೆ ಮಾಡಲಿಲ್ಲ. ಸುಗಾಂಗಪ್ರಾಸಾದಕ್ಕೆ ಪ್ರಭುಗಳು ತಾವೇ ದಯಮಾಡಿಸಿ, ಉತ್ಸವರಹಿತವಾದ ನಗರವನ್ನು ನೋಡಿ, ತಮ್ಮ ಅಪ್ಪಣೆ ನಡೆಯದುದನ್ನು ತಾವೇ ತಿಳಿದುಕೊಂಡಂತೆ ತೋರುತ್ತದೆ.

ಚಾಣಕ್ಯ—ಆಮೇಲೆ ನೀವೆಲ್ಲರೂ ಪ್ರೋತ್ಸಾಹಿಸಿ ಅರಸನಿಗೆ ನನ್ನ ಮೇಲೆ ಕೋಪಕೆರಳುವಂತೆ ಮಾಡಿರಬೇಕು. ರಾಜಪರಿವಾರಕ್ಕೆ ನನ್ನ ಮೇಲೆಷ್ಟು ದ್ವೇಷ! ಇರಲಿ. ನಾನೇ ಹೋಗಿ ಈ ವಿಷಯವನ್ನು ವಿಚಾರಿಸುವೆನು.

ಚಾಣಕ್ಯನು ಪೀಠದಿಂದೆದ್ದು ಕುಮುದಕನೊಡನೆ ಸುಗಾಂಗ ಪ್ರಾಸಾದಕ್ಕೆ ಹೊರಟುಬಂದನು. ಸಾಮಂತರಾಜರಿಂದ ಸೇವೆಯನ್ನು ಕೈಕೊಳ್ಳುತ್ತ ಸಿಂಹಾಸನದಲ್ಲಿ ಮಂಡಿಸಿದ್ದ ಚಂದ್ರಗುಪ್ತನನ್ನು ದೂರದಿಂದಲೇ ನೋಡಿ ತಾನು ಕೈಕೊಂಡ ಕೆಲಸ ಸಫಲವಾಯಿತೆಂದು ಚಾಣಕ್ಯನಿಗೆ ಆನಂದವಾಯಿತು. ಗುರುಗಳನ್ನು ಕಾಣುತ್ತಲೇ ಚಂದ್ರಗುಪ್ತನು ಸಿಂಹಾಸನದಿಂದೆದ್ದು ಚಾಣಕ್ಯನಿಗೆ ನಮಸ್ಕರಿಸಿದನು.

ಚಾಣಕ್ಯ—ವತ್ಸ, ಏಳು. ಸಾಮಂತರಾಜರು ಎಲ್ಲ ಕಾಲ ದಲ್ಲಿಯೂ ನಿನ್ನನ್ನು ಇದೇ ರೀತಿ ಸೇವಿಸುತ್ತಿರಲಿ.

ಚಂದ್ರಗುಪ್ತ—ಪೂಜ್ಯರ ಆಶೀರ್ವಾದವನ್ನು ತಲೆಬಾಗಿ ಸ್ವೀಕರಿ ಸುವೆನು. ಆರ್ಯರು ಪೀಠವನ್ನಲಂಕರಿಸಬೇಕು.

ಚಾಣಕ್ಯ (ಪೀಠದಲ್ಲಿ ಕುಳಿತುಕೊಂಡು)—ಕುಮಾರ, ಈಗ ನಮ್ಮನ್ನು ಕರೆಸಿಕೊಳ್ಳಲು ಕಾರಣವೇನು ?

ಚಂದ್ರಗುಪ್ತ—ಆರ್ಯರ ದರ್ಶನದಿಂದ ಧನ್ಯನಾಗುವುದಕ್ಕೆ.

ಚಾಣಕ್ಯ—ಅತಿವಿನಯ ಹಾಗಿರಲಿ. ಪ್ರಭುವಾದವನು ಕಾರಣ ವಿಲ್ಲದೆ ಅಧಿಕಾರಿಗಳನ್ನು ಕರೆಸುವುದುಂಟೇ ?

ಚಂದ್ರಗುಪ್ತ—ಹಾಗಿದ್ದರೆ ವಿಷಯವನ್ನು ತಮ್ಮಲ್ಲಿ ಬಿನ್ನೈಸಿ ಕೊಳ್ಳುತ್ತೇನೆ. ಯಾವ ಪ್ರಯೋಜನಕ್ಕಾಗಿ ಆರ್ಯರು ಕೌಮುದೀ ಮಹೋತ್ಸವವನ್ನು ನಿಲ್ಲಿಸಿದಿರಿ ?

ಚಾಣಕ್ಯ—ಹಾಗಾದರೆ ಮುಖ್ಯವಾಗಿ ದೋಷವನ್ನು ಬೆದಕಲು ತಾನೆ ನಮ್ಮನ್ನು ಕರೆಸಿದ್ದು ?

ಚಂದ್ರಗುಪ್ತ—ಪೂಜ್ಯರೇ, ಅದಕ್ಕಲ್ಲ. ಗುರುಗಳಲ್ಲಿ ಅರಿಕೆಮಾಡಿ ಕೊಳ್ಳುವುದಕ್ಕೆ.

ಚಾಣಕ್ಯ—ಕನಸಿನಲ್ಲಿಯೂ ಪ್ರಯೋಜನವಿಲ್ಲದ ಕಾರ್ಯವನ್ನು ಈ ಚಾಣಕ್ಯನು ಮಾಡನೆಂಬ ಅರ್ಥ ನಿನಗೆ ತಿಳಿದೇ ಇರುವುದಷ್ಟೆ.

ಚಂದ್ರಗುಪ್ತ—ಆದ್ದರಿಂದಲೇ ಆ ಪ್ರಯೋಜನವನ್ನು ಕೇಳಬೇ ಕೆಂಬ ಕುತೂಹಲ ನನ್ನನ್ನು ಈಗ ಮಾತನಾಡಿಸುತ್ತಿದೆ.

ಚಾಣಕ್ಯ—ಹಾಗಾದರೆ ಹೇಳುವೆನು ಕೇಳು. ಅರ್ಥಶಾಸ್ತ್ರಕಾರರು ಪ್ರಭುಸಿದ್ಧಿಯನ್ನು ರಾಜಾಯತ್ತ, ಸಚಿವಾಯತ್ತ, ಉಭಯಾಯತ್ತ ಎಂದು ಮೂರು ತೆರನಾಗಿ ವಿಂಗಡಿಸುತ್ತಾರೆ. ಸಚಿವಾಯತ್ತ ಸಿದ್ಧಿಯುಳ್ಳ ನಿನಗೆ ಈ ವಿಚಾರದಿಂದ ಏನು ಪ್ರಯೋಜನ ? ಏನಿದ್ದರೂ ಅದನ್ನು ನಾವು ವಿಚಾರಿಸಿಕೊಳ್ಳುತ್ತೇವೆ.

ಚಾಣಕ್ಯನ ಮಾತನ್ನು ಕೇಳಿ ಚಂದ್ರಗುಪ್ತನು ಕೋಪದಿಂದ ಮುಖವನ್ನು ತಿರುಗಿಸಿಕೊಂಡನು. ಆಗ ಇದೇ ಸಮಯವೆಂದು ತಿಳಿದು

ರಾಕ್ಷಸನಿಂದ ನಿಯಮಿತರಾದ ಸ್ತುತಿಪಾಠಕರು ಮುಂದೆ ಬಂದು ಚಂದ್ರ ಗುಪ್ತನನ್ನು ಹೀಗೆ ಹೊಗಳಿದರು—

ವಿಜಯ—(ಗಟ್ಟಿಯಾಗಿ ವಾಚಿಸುವನು)

ಆಕಾಶದೊಳಗೆಲ್ಲ ಕಾಶಕುಸುಮದ ಬಿಳುಪು—
ಹರನ ದೇಹದ ಭಸ್ಮಲೇಪದಂತೆ,
ಮುಗಿಲ ಪಟಲಕೆ ಚಂದ್ರಕಿರಣಜಾಲದ ಹೆಣಿಗೆ—
ಹರನ ಕರಿಚರ್ಮದಾವರಣದಂತೆ,
ಬಿಳಿಯ ನೈದಿಲ ಸಾಲು—ರುಂಡಮಾಲಿಕೆಯಂತೆ,
ಅರಸಂಚೆ—ಅವನಟ್ಟಹಾಸದಂತೆ ;
ಇಂತಪೂರ್ವದ ಹರನ ತನುವಿನೊಲು ಶರದವಿದು
ತೊಲಗಿಸಲಿ ನಿಮ್ಮೆಲ್ಲ ಖೇದಗಳನು !

ಕಲಶಕ—(ಗಟ್ಟಿಯಾಗಿ ವಾಚಿಸುವನು)

ಸತ್ತ್ವದುತ್ಕರ್ಷವನು ಶೇಖರಿಸಿ ವಿಧಿಯೊಂದು
ನಿಧಿಯನೆಸಗಿರುವಂತೆ ಕಂಗೊಳಿಸುತ,
ಆತ್ಮತೇಜಶ್ರೀಯ ಬೇಗೆ ಮದಧಾರೆಯನು
ಹೀರುತಿರೆ ಸಲಗಗಳನೊಕ್ಕಲಿಕ್ಕಿ
ಗರ್ವದಲಿ ಗಾಡಿಯಲಿ ನಡೆವ ಮೃಗಪತಿ ತನ್ನ
ದಂಷ್ಟ್ರಾಭಿಘಾತವನು ಸೈರಿಸುವುದೆ !
ಅರಸ, ಸಹಿಸುವುದುಂಟೆ ಆಜ್ಞಾವಿಘಾತವನು
ನಿನ್ನ ಮಹಿಮೆಯ ಸಾರ್ವಭೌಮನೃಪರು !
ಉಡಿಗೆ ತೊಡಿಗೆಯನುಟ್ಟು ತೊಟ್ಟು ಮೆರೆವಷ್ಟರೊಳೆ
ಒಡೆಯನೆನಿಸನು ಒಡೆಯನು ;
ತಡೆಯದೊಲು ಹೆರರು ತನ್ನಾಜ್ಞೆಯನು ನಿನ್ನಂತೆ
ನಡೆಸುವನೆ ಒಡೆಯನಹನು !

ಚಾಣಕ್ಯ (ಮನಸ್ಸಿನಲ್ಲಿ)—ಮೊದಲನೆಯವನು ದೇವತಾಸ್ತುತಿಯ ನೆವದಿಂದ ಈಗ ಬಂದಿರುವ ಶರತ್ಕಾಲವನ್ನು ವರ್ಣಿಸಿದನು. ಎರಡನೆಯವನು ಹೇಳಿದ ಪದ್ಯದ ಭಾವವೇನು ? (ಯೋಚಿಸಿ) ಆಹಾ, ಇದು ರಾಕ್ಷಸನ ಪ್ರಯೋಗ! ರಾಕ್ಷಸ, ನಾನು ಎಚ್ಚೆತ್ತೇ ಇದ್ದೇನೆ.

ಚಂದ್ರಗುಪ್ತ—ಕುಮುದಕ, ಬುದ್ಧಿವಂತರಾದ ಈ ಸ್ತುತಿಪಾಠಕರಿಗೆ ಸಾವಿರ ಸಾವಿರ ದೀನಾರಗಳನ್ನು ಬೊಕ್ಕಸದಿಂದ ಕೊಡಿಸು.

ಚಾಣಕ್ಯ (ಹುಬ್ಬನ್ನು ಗಂಟಿಕ್ಕಿ) ಕುಮುದಕ, ನಿಲ್ಲು. ಈ ವಂದಿಗಳಿಗೆ ಇಷ್ಟೊಂದು ಹಣವನ್ನು ಕೊಡಕೆಲಸವಿಲ್ಲ.

ಚಂದ್ರಗುಪ್ತ—ಆರ್ಯರು ನನ್ನ ಯಾವ ಮಾತುಗಳನ್ನೂ ಹೀಗೆ ಸಾಗಿಸಲೀಯದೆ ಅಡ್ಡಿ ಪಡಿಸುತ್ತಿದ್ದರೆ, ಈ ದೊರೆತನವನ್ನು ಸೆರೆಮನೆಯ ವಾಸವೆಂದೆಣಿಸುತ್ತೇನೆ.

ಚಾಣಕ್ಯ—ಎಲಾ ವೃಷಲ, ಈ ರಾಜ್ಯವನ್ನು ನಿನ್ನ ತೋಳ್ ಬಲದಿಂದ ನೀನು ಗಳಿಸಲಿಲ್ಲವಾದಕಾರಣ ಈ ಅವಮಾನವನ್ನು ಸಹಿಸಲೇಬೇಕು. ಇಲ್ಲವಾದರೆ ಇನ್ನು ಮುಂದೆ ನೀನೇ ಅಧಿಕಾರವನ್ನು ವಹಿಸಿಕೊ.

ಚಂದ್ರಗುಪ್ತ—ಪೂಜ್ಯರೇ, ಹಾಗೇ ಆಗಲಿ. ಇಂದಿನಿಂದ ನನ್ನ ಕೆಲಸವನ್ನು ನಾನೇ ನೋಡಿಕೊಳ್ಳುತ್ತೇನೆ. ಆದರೆ ಒಂದು ಮಾತು. ಕೌಮುದೀಮಹೋತ್ಸವವನ್ನು ನಿಲ್ಲಿಸಿದುದಕ್ಕೆ ಪ್ರಯೋಜನವನ್ನು ಆರ್ಯರು ಅಪ್ಪಣೆ ಕೊಡಿಸಬೇಕು.

ಚಾಣಕ್ಯ—ಎಲಾ ವೃಷಲ, ನಿನ್ನ ಆಜ್ಞೆ ಸಾಗದಂತೆ ಮಾಡುವುದೇ ಉತ್ಸವವನ್ನು ನಿಲ್ಲಿಸಿದುದಕ್ಕೆ ಪ್ರಥಮ ಪ್ರಯೋಜನ. ಈ ಲೋಕದ ರಾಜರೆಲ್ಲ ಹೂಮಾಲೆಯಂತೆ ನಿನ್ನ ಆಜ್ಞೆಯನ್ನು ತಲೆಯಲ್ಲಿಟ್ಟು ನಡೆಯುತ್ತಾರೆ. ಆದರೆ ಆ ಆಜ್ಞೆ ಮಾತ್ರ ನನ್ನಲ್ಲಿ ಸಾಗದಿರುವುದರಿಂದ ಈ ನಿನ್ನ ಪ್ರಭುತ್ವ ವಿನಯದಿಂದಲಂಕೃತವಾಗಿ ನಿನಗೆ ಕೀರ್ತಿಯನ್ನುಂಟುಮಾಡುತ್ತಿದೆ. ಎರಡನೆಯದಾಗಿ ಮಲಯಕೇತುವಿನ ಬಳಿ ಇರುವ ಭದ್ರಭಟಾದಿಗಳ ಈ ಮೂದಲಿಕೆಯ ಪತ್ರವನ್ನು ನೀನೇ ನೋಡು. ವಿಷಯ ಸ್ಪಷ್ಟವಾಗುತ್ತದೆ (ಪತ್ರವನ್ನು ಕೊಡುವನು.)

ಚಂದ್ರಗುಪ್ತ (ಪತ್ರವನ್ನು ಮನಸ್ಸಿನಲ್ಲೇ ಓದಿಕೊಳ್ಳುವನು)

ಶ್ರೀಮತ್ ಚಂದ್ರಗುಪ್ತ ಮಹಾರಾಜರವರ ಸನ್ನಿಧಿಯಲ್ಲಿ ಭದ್ರಭಟಾದಿ ಸೇನಾನಾಯಕರು ವಿಜ್ಞಾಪಿಸಿಕೊಳ್ಳುವುದೇನೆಂದರೆ— ನಾವೆಲ್ಲರೂ ಕೋಪಿಸಿಕೊಂಡು ಹೋದವರಂತೆ ಈ ನಗರದಿಂದ ಹೊರಟು ಬೇರೊಂದು ದೇಶದಲ್ಲಿ ನಿಮ್ಮ ಕಾರ್ಯದಲ್ಲಿ ಎಚ್ಚರಿಕೆಯಿಂದಿರುವೆವು.

(ಪ್ರಕಾಶವಾಗಿ) ಆರ್ಯರೇ, ಈ ಸೇನಾಪತಿಗಳ ಅಸಮಾಧಾನಕ್ಕೆ ಏನುಕಾರಣ?

ಚಾಣಕ್ಯ—ಚಂದ್ರಗುಪ್ತ, ಹೇಳುವೆನು ಕೇಳು. ಗಜಾಧ್ಯಕ್ಷನಾದ ಭದ್ರಭಟ, ಅಶ್ವಾಧ್ಯಕ್ಷನಾದ ಪುರುಷದತ್ತ ಇವರಿಬ್ಬರೂ ಸ್ತ್ರೀಮದ್ಯ ಲೋಲರು. ಇವರು ತಮ್ಮ ಕೆಲಸವನ್ನು ಸರಿಯಾಗಿ ನೋಡಿಕೊಳ್ಳು ತ್ತಿರಲಿಲ್ಲವಾದ ಕಾರಣ ತಮ್ಮ ಅಧಿಕಾರವನ್ನು ಕಳೆದುಕೊಂಡರು. ಡಿಂಗಿರಾತ ಬಲಗುಪ್ತರಿಗೆ ತುಂಬ ಆಸೆ. ಆದ್ದರಿಂದ ಹೆಚ್ಚು ಸಂಬಳ ಕ್ಕಾಗಿ ಅವರು ಮಲಯಕೇತುವನ್ನು ಆಶ್ರಯಿಸಿದರು. ಭಾಗು ರಾಯಣನು ಮಲಯಕೇತುವಿಗೆ 'ಚಾಣಕ್ಯನು ನಿನ್ನ ತಂದೆಯನ್ನು ಕೊಲ್ಲಿಸಿದನು' ಎಂದು ಸುಳ್ಳು ಹೇಳಿ ಅವನ ಪ್ರೀತಿಗೆ ಪಾತ್ರನಾಗಿದ್ದಾನೆ. ಆಡಿದ ಮಾತು ಕೂಡಿ ಬಂದರೆ ಮನುಷ್ಯನು ಇದ್ದಂತೆಯೇ ಇರುವನೇ? ಇನ್ನುಳಿದ ಸೇನಾಪತಿಗಳ ದಾಯಾದಿಗಳಿಗೆ ನೀನು ಗೌರವವನ್ನು ತೋರಿದುದರಿಂದ ಅವರಿಗೆ ನಿನ್ನಲ್ಲಿ ಅಸೂಯೆ. ಆದ್ದರಿಂದ ಇವರೆಲ್ಲ ಮಲಯಕೇತುವಿನಲ್ಲಿಗೆ ಹೋಗಿ ಆಶ್ರಯಸಂಪಾದಿಸಿದ್ದಾರೆ.

ಚಂದ್ರಗುಪ್ತ— ಈ ಅಂಶಗಳನ್ನು ತಿಳಿದಿದ್ದರೂ, ಆರ್ಯರು ಇವುಗಳಿಗೆ ಪ್ರತೀಕಾರವನ್ನೇಕೆ ಕೈಗೊಳ್ಳಲಿಲ್ಲ? ನಿಮ್ಮಲ್ಲಿ ಶಕ್ತಿ ಇರ ಲಿಲ್ಲವೋ ಇಲ್ಲವೆ ಪ್ರಯೋಜನಕ್ಕಾಗಿಯೋ?

ಚಾಣಕ್ಯ—ಚಂದ್ರಗುಪ್ತ, ನಮ್ಮಲ್ಲಿ ಸಾಮರ್ಥ್ಯವಿಲ್ಲವೆಂದರೇನು? ಆದರೆ ಈ ವಿಷಯದಲ್ಲಿ ಪ್ರತೀಕಾರ ಸಾಧ್ಯವಾಗಲಿಲ್ಲ. ಅಲ್ಲದೆ ಇದರಿಂದ ಪ್ರಯೋಜನವೂ ಉಂಟು. ಅಧಿಕಾರವನ್ನು ಕಳೆದುಕೊಂಡ ಭದ್ರಭಟಾದಿ ಗಳಿಗೆ ತಿರುಗಿ ಅಧಿಕಾರ ಕೊಡುವುದುಂಟೇ? ಹಾಗೆ ಮಾಡಿದರೆ ನಮ್ಮ ಆನೆ ಮತ್ತು ಕುದುರೆಯ ಬಲ ಹಾಳಾಗುತ್ತದೆ. ಡಿಂಗಿರಾತಾದಿಗಳಿಗೆ ನಾಡಿನ ಒಡೆತನವನ್ನೇ ಕೊಟ್ಟರೂ ತೃಪ್ತಿ ಆಗದು. ಭಾಗುರಾಯಣನಿಗೆ ಬೇಕಾದದ್ದು ಮಲಯಕೇತುವಿನ ಅನುಗ್ರಹ. ತಮ್ಮ ದಾಯಾದಿಗಳ ವಿಷಯದಲ್ಲಿ ವಿಷಕಾರುತ್ತಿರುವ ವಿಜಯವರ್ಮಾದಿಗಳಿಗೆ ಯಾವ ಅನು ಗ್ರಹದಿಂದ ತಾನೆ ನಮ್ಮಲ್ಲಿ ಒಲವು ಉಂಟಾದೀತು? ಇವರನ್ನು ದಂಡಿಸಿ ದ್ದರೆ ಪ್ರಜೆಗಳಿಗೆ ನಮ್ಮಲ್ಲಿ ಅಪನಂಬಿಕೆ ಹುಟ್ಟುತ್ತಿತ್ತು. ಇವರೆಲ್ಲ ರಾಕ್ಷಸನೊಡಗೂಡಿ ನಮ್ಮ ಮೇಲೆ ದಂಡೆತ್ತಿ ಬರುತ್ತಿದ್ದಾರೆ. ಈಗ

ಕೋಟೆ ಕೊತ್ತಲುಗಳನ್ನು ಭದ್ರಪಡಿಸಬೇಕು. ಆದ್ದರಿಂದ ಇದು ಉತ್ಸವದ ಕಾಲವಲ್ಲವೆಂದು ತಿಳಿದು ಕೌಮುದೀಮಹೋತ್ಸವವನ್ನು ನಿಲ್ಲಿಸಿತು.

ಚಂದ್ರಗುಪ್ತ—ಈ ಎಲ್ಲ ಅನರ್ಥಕ್ಕೂ ಮೂಲಕಾರಣನಾದ ಮಲಯಕೇತು ಇಲ್ಲಿಂದ ತಪ್ಪಿಸಿಕೊಂಡು ಹೋಗದಂತೆ ನಿಗ್ರಹಿಸದೆ ಏಕೆ ಉಪೇಕ್ಷಿಸಿದಿರಿ?

ಚಾಣಕ್ಯ—ಮಲಯಕೇತುವನ್ನು ನಾವು ನಿಗ್ರಹಿಸಿದ್ದರೆ ಪರ್ವತ ರಾಜನನ್ನು ನಾವೇ ಕೊಲ್ಲಿಸಿದೆವೆಂಬ ಅಪವಾದ ನಮ್ಮ ತಲೆಗಟ್ಟುತ್ತಿತ್ತು. ಮಲಯಕೇತುವಿಗೆ ಅರ್ಧರಾಜ್ಯವನ್ನು ಕೊಟ್ಟಿದ್ದರೆ ಅನಾಯಾಸವಾಗಿ ಬಂದ ಭಾಗ್ಯಲಕ್ಷ್ಮಿಯನ್ನು ನಾವೇ ನೂಕಿದಂತಾಗುತ್ತಿತ್ತು. ಈ ಕಾರಣದಿಂದ ಓಡಿಹೋಗುತ್ತಿದ್ದ ಮಲಯಕೇತುವನ್ನು ಉಪೇಕ್ಷಿಸಿ ಬಿಟ್ಟೆವು.

ಚಂದ್ರಗುಪ್ತ—ಈ ವಿಷಯ ಹೀಗಾಯಿತು. ರಾಕ್ಷಸನು ಈ ನಗರದಲ್ಲೇ ಇದ್ದಾಗ ಪೂಜ್ಯರು ಅವನನ್ನು ಉಪೇಕ್ಷಿಸುದುದೇಕೆ?

ಚಾಣಕ್ಯ—ರಾಕ್ಷಸನು ಬುದ್ಧಿವಂತ, ಸ್ವಾಮಿಭಕ್ತ. ಮೇಲಾಗಿ ಆತನಿಗೆ ಇಲ್ಲಿ ಜನ, ಧನ ಸಹಾಯವುಂಟು. ಇದರೊಡನೆ ಆತನು ಪ್ರಯತ್ನಮಾಡಿದ್ದರೆ ಈ ನಗರದಲ್ಲಿ ದೊಡ್ಡ ದಂಗೆಯನ್ನೇ ಎಬ್ಬಿಸ ಬಹುದಾಗಿತ್ತು. ಆದ್ದರಿಂದ ದೂರದಲ್ಲಿ ಆತನಿದ್ದರೆ ಉಪಾಯದಿಂದ ಅವನನ್ನು ಸಂಗ್ರಹಿಸಬಹುದೆಂದು ದೂರ ಮಾಡಿದೆವು.

ಚಂದ್ರಗುಪ್ತ—ಪೂಜ್ಯರೇ, ಬಲವನ್ನು ಪ್ರಯೋಗಿಸಿಯಾದರೂ ಆತನನ್ನು ಹಿಡಿಯಬಹುದಾಗಿತ್ತಲ್ಲವೇ?

ಚಾಣಕ್ಯ—ಎಲಾ ವೃಷಲ, ಬಲವನ್ನು ಪ್ರಯೋಗಿಸಿ ಆತನನ್ನು ಹಿಡಿದಿದ್ದರೆ ಶೂರನಾದ ಆತನಿಂದ ನಮ್ಮ ಸೇನೆ ನಷ್ಟವಾಗುತ್ತಿತ್ತು. ಇಲ್ಲದಿದ್ದರೆ ಆತನಾದರೂ ಮಾನರಕ್ಷಣೆಗಾಗಿ ಪ್ರಾಣಬಿಡುತ್ತಿದ್ದನು. ಈ ಎರಡರಲ್ಲಿ ಯಾವುದಾದರೊಂದು ನಡೆದಿದ್ದರೂ ನಮಗೆ ಆ ತೆರನಾದ ಮನುಷ್ಯನು ಮತ್ತೆಲ್ಲಿ ದೊರೆತಾನು? ಕಾಡಾನೆಯನ್ನು ಹಿಡಿಯುವಂತೆ ಉಪಾಯದಿಂದಲೇ ಅವನನ್ನು ದಾರಿಗೆ ತರಬೇಕು.

ಚಂದ್ರಗುಪ್ತ—ಪೂಜ್ಯರೇ, ನೀವು ಲಕ್ಷವಿಧವಾಗಿಹೇಳಿದರೂ, ಅಮಾತ್ಯನೇ ರಾಕ್ಷಸನೇ ಬಹು ಬುದ್ಧಿಶಾಲಿ.

ಚಾಣಕ್ಯ—(ಕೋಪದಿಂದ) ಚಂದ್ರಗುಪ್ತ, ನೀನಲ್ಲವೆಂದು ನಿನ್ನ ಮಾತಿನ ಅರ್ಥ ತಾನೆ? ಬುದ್ಧಿವಂತನಾದ ಅವನು ಮಾಡಿದುದೇನು?

ಚಂದ್ರಗುಪ್ತ—ಆರ್ಯರು ಲಾಲಿಸಬೇಕು. ಈ ನಗರ ನಮ್ಮ ವಶವಾದ ಮೇಲೂ ಆತನು ತನ್ನ ಇಷ್ಟಬಂದಷ್ಟು ದಿನ ಇಲ್ಲಿದ್ದನು. ನಮ್ಮ ಮಿತ್ರನಾದ ಪರ್ವತರಾಜನನ್ನು ಕೊಲ್ಲಿಸಿದನು. ಅವನ ನೀತಿಯಿಂದ ನಮಗೆ ದಿಕ್ಕೇ ತೋರದಂತಾಗಿದೆ. ಗುಣಕ್ಕೆ ಮಾತ್ಸರ್ಯವುಂಟೇ? ಆತನು ಕಾರ್ಯದಕ್ಷ.

ಚಾಣಕ್ಯ—ಎಲಾ ವೃಷಲ, ನಂದರಾಜ್ಯದಲ್ಲಿ ನಿನ್ನನ್ನು ನಾನು ಸ್ಥಾಪಿಸದಂತೆ, ಮಲಯಕೇತುವನ್ನು ನಿನ್ನ ರಾಜ್ಯದಲ್ಲಿ ಸ್ಥಾಪಿಸಿದನೇ ಅವನು?

ಚಂದ್ರಗುಪ್ತ—ನನಗೆ ರಾಜ್ಯವನ್ನುಂಟುಮಾಡಿದವರು ಬೇರೆ, ತಾವಲ್ಲ.

ಚಾಣಕ್ಯ—ಎಲಾ ಚಂದ್ರಗುಪ್ತ, ರಾಕ್ಷಸನ ಎದುರಿನಲ್ಲೇ ನಂದರನ್ನು ಕೊಲ್ಲಿಸಿ ನನ್ನ ಜುಟ್ಟನ್ನು ಕಟ್ಟಲಿಲ್ಲವೇ ನಾನು? ಇದನ್ನು ಮಾಡಿದವರಾರು?

ಚಂದ್ರಗುಪ್ತ—ಈ ಕಾರ್ಯ ನಡೆದದ್ದು, ನಂದಕುಲವೈರಿಯಾದ ದೈವದಿಂದ.

ಚಾಣಕ್ಯ—ಮೂಢರು ದೈವವನ್ನು ನಂಬುವರು.

ಚಂದ್ರಗುಪ್ತ—ವಿದ್ವಾಂಸರು ಆತ್ಮಸ್ತುತಿಯನ್ನು ಮಾಡಿಕೊಳ್ಳರು.

ಚಾಣಕ್ಯ—ಎಲಾ ವೃಷಲ, ಸೇವಕರಂತೆ ನಮ್ಮನ್ನು ನುಡಿಸುತ್ತಿರುವೆ. ಕಟ್ಟಿದ ಜುಟ್ಟನ್ನು ಬಿಚ್ಚಲು ಈ ನನ್ನ ಕೈ ಮತ್ತೆ ತವಕಪಡುತ್ತಿದೆ. ದೈವಬಲಹೀನನಾದ ನೀನು ಮತ್ತೊಮ್ಮೆ ಪ್ರತಿಜ್ಞೆಮಾಡಲು ನನ್ನನ್ನು ಪ್ರೇರಿಸುತ್ತಿರುವೆ.

ಚಂದ್ರಗುಪ್ತ—(ತನ್ನಲ್ಲಿ) ಆರ್ಯರಿಗೆ ನಿಜವಾಗಿಯೂ ನನ್ನಲ್ಲಿ ಕೋಪವುಂಟಾಗಿರುವುದೇ?

ಚಾಣಕ್ಯ—(ಕೋಪವನ್ನು ಇಳಿಸಿ) ಚಂದ್ರಗುಪ್ತ, ಮಾತಿಗೆ ಮಾತು ಬೆಳೆಸುವುದರಿಂದ ಏನು ಪ್ರಯೋಜನ? ನಮಗಿಂತಲೂ ರಾಕ್ಷಸನೇ ಬುದ್ಧಿವಂತನೆಂದು ನೀನು ತಿಳಿದ ಬಳಿಕ, ಈ ಸಚಿವ ಶಸ್ತ್ರವನ್ನು ಅವನಿಗೇ ಕೊಟ್ಟು, ಅವನಿಂದಲೇ ರಾಜಕಾರ್ಯವನ್ನು ನಿರ್ವಾಹಮಾಡಿಕೊಳ್ಳುವವನಾಗು.

ಹೀಗೆಂದು ಸಚಿವಶಸ್ತ್ರವನ್ನು ನೆಲದ ಮೇಲೆಸೆದು ಚಾಣಕ್ಯನು ರಾಜಸಭೆಯಿಂದ ಹೊರಟುಹೋದನು. ಆಗ ಚಂದ್ರಗುಪ್ತನು 'ಕುಮುದಕ, ಇಂದಿನಿಂದ ಚಾಣಕ್ಯನನ್ನು ಮಂತ್ರಿಪದವಿಯಿಂದ ತೆಗೆದುಹಾಕಿದೆ. ಅಧಿಕಾರಿಗಳು ಚಾಣಕ್ಯನನ್ನು ಕಾಣಿಸಿಕೊಳ್ಳಬೇಕಾಗಿಲ್ಲವೆಂದು ರಾಜವೀಧಿಗಳಲ್ಲಿ ಸಾರಿಸು.' ಎಂದು ಅಪ್ಪಣೆಮಾಡಿದನು. ಇದನ್ನು ಕೇಳಿ ಕುಮುದಕನಿಗೆ ಸೋಜಿಗ. ಆರ್ಯ ಚಾಣಕ್ಯರು ಚಾಣಕ್ಯನಾಗಿ, ಅಧಿಕಾರ ಅವನ ಕೈಬಿಟ್ಟಿತೆಂದು. ಹೀಗೆ ಚಿಂತಿಸುತ್ತಿರುವ ಕುಮುದಕನ ಯೋಚನೆಗೆ ಕಾರಣವನ್ನು ಕೇಳಲು ಅದಕ್ಕೆ ಕುಮುದಕನು 'ಸ್ವಾಮಿ, ನನ್ನ ಚಿಂತೆಗೆ ಕಾರಣವೇನೂ ಇಲ್ಲ. ನಮ್ಮ ಪುಣ್ಯದಿಂದ ಇಂದು ನಿಜವಾಗಿಯೂ ತಾವು ಮಹಾರಾಜರಾದಿರಿ.' ಎಂದು ಉತ್ತರಕೊಟ್ಟನು. ಆ ಮಾತನ್ನು ಕೇಳಿ ಚಂದ್ರಗುಪ್ತನು ತನ್ನಲ್ಲಿಯೇ 'ಇವರೆಲ್ಲ ಹೀಗೆಯೇ ತಿಳಿದುಕೊಳ್ಳಲಿ. ಈ ಕಲಹದ ಮೂಲಕವೇ ಆರ್ಯರ ಬಯಕೆ ಕೈಗೂಡಲಿ.' ಎಂದು ಸುಮ್ಮನಿದ್ದನು. ಚಂದ್ರಗುಪ್ತನು ಚಾಣಕ್ಯನೊಡನೆ ಮಾತಿಗೆ ಮಾತು ಬೆಳೆಸಿದ್ದು ಚಾಣಕ್ಯನ ಇಷ್ಟದಂತೆ, ರಾಜಕಾರ್ಯಸಾಧನೆಗಾಗಿ. ಹೀಗಿರುವಲ್ಲಿ ಇನ್ನು ನಿಜವಾಗಿಯೂ ಗುರುನಿಂದೆ ಮಾಡಿದವನ ಮನಸ್ಸು ಹೇಗಿರಬೇಡ? ಈ ಯೋಚನೆಯೇ ಅರಸನ ಮನಸ್ಸನ್ನು ತುಂಬಿರಲು ವಿಶ್ರಾಂತಿಗಾಗಿ ಚಂದ್ರಗುಪ್ತನು ವೈತಾಳಿಕನೊಡನೆ ಅಂತಃಪುರದ ಕಡೆಗೆ ನಡೆದನು.

## ೨೭. ವಿಷ ಬೀಜ

ಇತ್ತ ಪಾಟಲೀಪುರದಲ್ಲಿದ್ದ ರಾಕ್ಷಸನ ಗೂಢಚಾರನಾದ ಕರಭಕನು, ತನ್ನೊಡೆಯನ ಅರಮನೆಯ ಬಾಗಿಲ ಬಳಿಗೆ ಬಂದ ಕಾಲದಲ್ಲಿ ರಾಕ್ಷ

ಸನು ಶಕಟದಾಸನೊಡನೆ ಈ ರೀತಿ ಮಾತನಾಡುತ್ತಿದ್ದನು : ' ಶಕಟ ದಾಸ, ನಾನು ಕೈಕೊಂಡ ಕೆಲಸಕ್ಕೆಲ್ಲ ದೈವ ಪ್ರತಿಕೂಲವಾಗುತ್ತಿದೆ. ಚಾಣಕ್ಯನು ನಮ್ಮ ಕೈಗೆ ಎಂದಿಗೆ ಸಿಕ್ಕುತ್ತಾನೆ; ಈಗ ನಾನು ಕೈಕೊಂಡ ಕಾರ್ಯ ಎಂದಿಗೆ ಕೊನೆಗಾಣುತ್ತದೆ ಎಂಬ ಚಿಂತೆಯೇ ಹಗಲಿರುಳು ನನ್ನನ್ನು ಪೀಡಿಸುತ್ತಿದೆ. ರಾತ್ರಿ ನನಗಂತೂ ನಿದ್ದೆಯೇ ಬಾರದು.' ಹೀಗೆ ನುಡಿಯುತ್ತಿರುವಾಗ ರಾಕ್ಷಸನ ಎಡಭುಜ ಅದುರಿತು. ಈ ಅಪ ಶಕುನದಿಂದ ರಾಕ್ಷಸನಿಗೆ ಸ್ವಲ್ಪ ಭಯವಾಯಿತು. ಅಷ್ಟರಲ್ಲೇ ದ್ವಾರ ಪಾಲಕನು ಪಾಟಲೀಪುರದಿಂದ ಕರಭಕನು ಬಂದಿರುವುದನ್ನು ಅಮಾತ್ಯ ನಿಗೆ ಅರುಹಿದನು. ರಾಕ್ಷಸನ ಅಪ್ಪಣೆಯಂತೆ ಕರಭಕನು ಒಳಗೆ ಬರಲು, ರಾಕ್ಷಸನು ಅವನಿಂದ ಪಾಟಲೀಪುರದ ಸಮಾಚಾರವನ್ನು ಕೇಳತೊಡಗಿದನು.

ರಾಜಕಾರ್ಯದಲ್ಲೇ ತೊಡಗಿದ್ದ ರಾಕ್ಷಸನು ನಾಲ್ಕಾರು ದಿನ ಗಳಿಂದ ತಲೆನೋವಿನಿಂದ ತೊಂದರೆಪಡುತ್ತಿದ್ದ ವಿಷಯ ರಾಜಕುಮಾರ, ಸೇನಾಪತಿಗಳಿಗೆ ತಿಳಿದು ಬಂದಿತ್ತು. ಈ ದಿನ ರಾಕ್ಷಸನಲ್ಲಿಗೆ ಪಾಟಲೀ ಪುರದ ಗೂಢಚಾರನು ಬೇರೆ ಬಂದಿದ್ದಾನೆ. ರಾಕ್ಷಸನಿಗೂ ಗೂಢಾ ಚಾರನಿಗೂ ಗುಟ್ಟಾಗಿ ನಡೆಯುವ ಮಾತುಕತೆಗಳನ್ನು ಕೇಳಲು ಭಾಗು ರಾಯಣನಿಗೆ ಆತುರವಿದ್ದುದರಿಂದ ಅವನು ರಾಕ್ಷಸನ ಮನೆಯ ಕಡೆಗೆ ಹೊರಟನು. ಈ ವೇಳೆಗೆ ರಾಜಕುಮಾರನೂ ರಾಕ್ಷಸನಲ್ಲಿಗೆ ಹೋಗಲು ಸಿದ್ಧನಾದನು. ತನ್ನ ಹಿಂದೆ ಬರುತ್ತಿದ್ದ ಸೇನಾಪತಿಗಳನ್ನು ನೋಡಿ ರಾಜಕುಮಾರನು ಅಮಾತ್ಯರ ಬಳಿಗೆ ತಾನೊಬ್ಬನೇ ಹೋಗುವೆನೆಂದೂ ಮಿಕ್ಕವರು ಹಿಂದೆಯೇ ನಿಲ್ಲಬೇಕೆಂದೂ ಅಪ್ಪಣೆ ಮಾಡಿದನು. ' ನಾವು ರಾಕ್ಷಸನ ಮೂಲಕ ತಮ್ಮನ್ನು ಆಶ್ರಯಿಸಲಿಲ್ಲ. ಶೇಖರನ ಮೂಲಕ ನಮಗೆ ತಮ್ಮಲ್ಲಿ ಆಶ್ರಯ ದೊರಕಿತು. ಆದ್ದರಿಂದ ತಮ್ಮ ಅಪ್ಪಣೆ ಯಂತೆ ನಾವು ಇಲ್ಲಿಯೇ ಇರುವೆವು ' ಎಂದು ಹೇಳಿ ಸೇನಾಪತಿಗಳು ಹಿಂದುಳಿದರು.

ಆಪ್ತನಾದ ಭಾಗುರಾಯಣನೊಡನೆ ರಾಕ್ಷಸನ ಮನೆಗೆ ಬರುತ್ತಿದ್ದ ಮಲಯಕೇತು, ಭದ್ರಭಟಾದಿಗಳು ಆಡಿದ ಮಾತಿನ ಭಾವವೇನೆಂದು ಸೇನಾಪತಿಯನ್ನು ಕೇಳಿದನು. ರಾಜಕುಮಾರನ ಮಾತಿಗೆ ಉತ್ತರ

ವಾಗಿ ಭಾಗುರಾಯಣನು 'ಕುಮಾರ, ಲೋಕದಲ್ಲಿ ಗುಣವಂತನಾದ ಪ್ರಭುವನ್ನು ಆತನ ಆಪ್ತಮಿತ್ರರ ಮೂಲಕ ಆಶ್ರಯಿಸಬೇಕು. ರಾಕ್ಷಸನು ನಮಗೆ ಮಿತ್ರನಲ್ಲವೇ? ಎಂದು ನೀನು ಕೇಳಬಹುದು. ಆ ಮಾತಿಗೆ ನಾನು ಹೇಳುವ ಸಮಾಧಾನವಿಷ್ಟು. ರಾಕ್ಷಸನಿಗೆ ಚಾಣಕ್ಯನಲ್ಲಿ ವೈರ, ಚಂದ್ರಗುಪ್ತನಲ್ಲಲ್ಲ. ವಿಜಯದಿಂದ ಕೊಬ್ಬಿರುವ ಚಾಣಕ್ಯನು ಈಗ ಚಂದ್ರಗುಪ್ತನನ್ನು ಲಕ್ಷಿಸದಿರಬಹುದು. ವಂಶಪಾರಂಪರ್ಯವಾಗಿ ಬಂದ ಪ್ರಜಾರಂಜಕನೂ, ದಕ್ಷನೂ ಆದ ರಾಕ್ಷಸನನ್ನೇ ನಂಬಿ, ಸಮಯಕಾದು ಚಂದ್ರಗುಪ್ತನು ಚಾಣಕ್ಯನನ್ನು ಮಂತ್ರಿಪದವಿಯಿಂದ ತೆಗೆದುಹಾಕಬಹುದು. ಚಂದ್ರಗುಪ್ತನು ನಂದರ ವಂಶದವನು. ಈಗ ನೋಡು, ರಾಕ್ಷಸನ ಮನೆಯವರು ಪಾಟಲೀಪುರದಲ್ಲಿದ್ದಾರೆ. ಆದ್ದರಿಂದ ಚಂದ್ರಗುಪ್ತ ರಾಕ್ಷಸರಿಬ್ಬರೂ ಸಂಧಿಗೆ ಒಡಂಬಡಬಹುದು. ಹಾಗಾದರೆ ಪಾಟಲೀಪುರದ ಜನರೆಲ್ಲ ದ್ರೋಹಿಗಳೆಂದು ನೀನು ತಿಳಿಯುವುದಿಲ್ಲವೇ? ಆದ್ದರಿಂದ ತಮಗೆ ನಿನ್ನ ಆಶ್ರಯ ತಪ್ಪಕೂಡದೆಂದು ನಿನ್ನಲ್ಲಿ ಈ ರೀತಿ ಅವರು ಮುಂಚೆಯೇ ಬಿನ್ನೈಸಿಕೊಂಡಿರಬಹುದು' ಎಂದು ನುಡಿದನು. ಎಷ್ಟಾದರೂ ಜನಗಳಿಗೆ ತಾಯ್ನಾಡಿನ ಮಮತೆ ತಪ್ಪುವುದೇ ಎಂದಂದುಕೊಂಡು ಮಲಯಕೇತು ರಾಕ್ಷಸನ ಮನೆಗೆ ಬಂದನು. ರಾಕ್ಷಸ ಮಲಯಕೇತು—ಇವರ ಸ್ನೇಹವನ್ನು ಕಳಚುವುದರಲ್ಲಿ ಭಾಗುರಾಯಣನು ಮೊದಲನೆಯ ಮೆಟ್ಟಿಲನ್ನೇರಿದನು.

ರಾಕ್ಷಸನೆದುರಿನಲ್ಲಿ ಪಾಟಲೀಪುರದ ಸಮಾಚಾರ ತನಗೆ ಪೂರ್ತಿಯಾಗಿ ತಿಳಿದುಬರದೆಂದು, ಮಲಯಕೇತು ಭಾಗುರಾಯಣನೊಡನೆ ಕರಭಕ ರಾಕ್ಷಸರ ಸಂವಾದವನ್ನು ಹೊರಗಡೆಯಲ್ಲಿಯೇ ಆಲಿಸುತ್ತ ನಿಂತನು. ಒಳಗಡೆ ಕರಭಕನು ಅಮಾತ್ಯನಿಗೆ ರಾಜಧಾನಿಯ ಸಮಾಚಾರಗಳನ್ನು ಕ್ರಮವಾಗಿ ಹೇಳತೊಡಗಿದನು. 'ಅಮಾತ್ಯರೇ, ತಮ್ಮ ಅಪ್ಪಣೆಯನ್ನು ಕಲಶಕ ವಿಜಯರಿಗೆ ತಿಳಿಸಿದೆನು. ನೀವು ನೆನೆಸಿದಂತೆ ಕಾರ್ಯ ಕೈಗೂಡಿತು. ಕೌಮುದೀಮಹೋತ್ಸವವನ್ನು ನಿಲ್ಲಿಸಲು ಕಾರಣವೇನೆಂದು ತುಂಬುಸಭೆಯಲ್ಲಿ ಚಂದ್ರಗುಪ್ತನು ಚಾಣಕ್ಯನನ್ನು ಆಕ್ಷೇಪಿಸಿದನು. ಇದೇ ಸಮಯವನ್ನು ಕಾದು ನಮ್ಮವರು ಚಂದ್ರಗುಪ್ತನನ್ನು ಬಾಯಿತುಂಬ ಹೊಗಳಿದರು. ಮಾತಿಗೆ ಮಾತು ಬೆಳೆದು

ಚಂದ್ರಗುಪ್ತನು, ಅಮಾತ್ಯರಿಗಿಂತಲೂ ಬುದ್ಧಿವಂತರುಂಟೇ? ಎಂದು ನಿಮ್ಮನ್ನು ಹೊಗಳಿದನು. ಕಥೆ ಇಷ್ಟಕ್ಕೇ ಮುಗಿಯಲಿಲ್ಲ. ಮಂತ್ರಿ ಪದವಿ ಚಾಣಕ್ಯನ ಕೈಬಿಟ್ಟಿತು. ಖಿನ್ನನಾಗಿ ಚಾಣಕ್ಯನು ಸಭೆ ಯಿಂದೆದ್ದು ಹೋದನು. ಇವರಿಬ್ಬರ ಅಸಮಾಧಾನಕ್ಕೆ ಕಾರಣ ಇಷ್ಟೇ ಅಲ್ಲ. ರಾಕ್ಷಸ ಮಲಯಕೇತು–ಇವರನ್ನು ನಗರದಿಂದ ತಪ್ಪಿಸಿಕೊಂಡು ಹೋಗಲು ಚಾಣಕ್ಯನು ಅವಕಾಶಕೊಟ್ಟದ್ದು ಚಂದ್ರಗುಪ್ತನಿಗೆ ತುಂಬ ಅಸಮಾಧಾನವನ್ನುಂಟುಮಾಡಿದೆ. ಇಷ್ಟರಲ್ಲೇ ಚಾಣಕ್ಯನು ತಪೋ ವನಕ್ಕೆ ಹೋಗುವನೆಂಬ ಸುದ್ದಿ ಎಲ್ಲ ಕಡೆ ಹರಡಿದೆ.'

ಕರಭಕನ ಮಾತನ್ನು ಕೇಳಿ ರಾಕ್ಷಸನಿಗೆ ಹಿಡಿಸಲಾರದಷ್ಟು ಸಂತೋಷವುಂಟಾಯಿತು. ಸಕಾಲದಲ್ಲಿ ಬಿತ್ತಿದ ಬೀಜ ಉತ್ತಮವಾದ ಫಲವನ್ನು ಕೊಟ್ಟೇಕೊಡುವುದಲ್ಲವೇ? ರಾಕ್ಷಸನು ಶಕಟದಾಸನಿಗೆ 'ಮಿತ್ರ, ಇನ್ನು ಚಂದ್ರಗುಪ್ತನು ನನ್ನ ಕೈವಶನಾದನೆಂದೇ ತಿಳಿ. ಚಂದನದಾಸನು ಬಿಡುಗಡೆ ಹೊಂದುತ್ತಾನೆ. ನೀನೂ ಹೆಂಡತಿ ಮಕ್ಕ ಳನ್ನು ಬೇಗ ನೋಡುವೆ. ಇದಲ್ಲದೆ ಚಾಣಕ್ಯನು ತಪೋವನಕ್ಕೆ ಹೊರಡು ವುದು ನಿಜವಿರಬಹುದು. ಅವನ ಈ ಒಂದು ಪ್ರತಿಜ್ಞೆ ಕೈಗೂಡುವುದೇ ಕಷ್ಟವಾಯಿತು. ಹೀಗಿರುವಾಗ ಮತ್ತೊಮ್ಮೆ ತಿಳಿದೂ ತಿಳಿದೂ ಅವನು ಹೇಗೆ ಪ್ರತಿಜ್ಞೆಮಾಡಿಯಾನು' ಎಂದನು. ಮಾತು ಮುಗಿದ ಮೇಲೆ ಕರಭಕನು ವಿಶ್ರಮಿಸಿಕೊಳ್ಳಲು ಹೊರಟುಹೋದನು.

ರಾಕ್ಷಸನ ಮಾತು ಮಲಯಕೇತುವಿನ ಸಂದೇಹವನ್ನು ಬಲ ಪಡಿಸಿತು. ಹೆಜ್ಜೆಹೆಜ್ಜೆಗೂ ರಾಕ್ಷಸನ ಬಣ್ಣ ಬದಲಾಯಿಸುತ್ತಿದೆ ಎನ್ನಿ ಸಿತು ರಾಜಕುಮಾರನಿಗೆ. ಗೋಮುಖದ ಈ ರಾಕ್ಷಸನನ್ನು ನಂಬುವು ದೆಂತು? ಅವನಿಗೆ ಸಂದೇಹವಿಲ್ಲದೆ ಚಂದ್ರಗುಪ್ತನಲ್ಲಿ ಅಭಿಮಾನವಿದೆ. ಅವನನ್ನು ಪರೀಕ್ಷಿಸದೆ ಮುಂದಿನ ಕೆಲಸಕ್ಕೆ ಕೈಹಾಕಕೂಡದೆಂದು ಕೊಂಡು ಮಲಯಕೇತು ಮುಂದೆ ಬಂದು ರಾಕ್ಷಸನಿಗೆ ಕಾಣಿಸಿ ಕೊಂಡನು.

ತನ್ನಲ್ಲಿಗೆ ಅಕಸ್ಮಾತ್ತಾಗಿ ಬಂದ ಕುಮಾರನನ್ನು ರಾಕ್ಷಸನು ಆದರದಿಂದ ಕಂಡನು. ಇದರಿಂದ ಸಂತೋಷಗೊಂಡ ಮಲಯಕೇತು 'ಅಮಾತ್ಯರೇ, ನಿಮಗೆ ತಲೆನೋವೆಂದು ಕೇಳಿದೆವು. ಈಗ ಅದು

ಹೇಗಿದೆ ? ವಿಜಯಯಾತ್ರೆಗೆ ಪ್ರಯಾಣಮಾಡಲು ಏನು ಅಡ್ಡಿ?' ಎಂದು ಕೇಳಿದನು.

ಮಲಯಕೇತುವಿಗೆ ಅಮಾತ್ಯನು 'ಕುಮಾರ, ಇನ್ನು ವಿಜಯ ಯಾತ್ರೆಗೆ ನಾವು ತೆರಳಬಹುದು. ಚಂದ್ರಗುಪ್ತನಿಂದ ಚಾಣಕ್ಯನು ದೂರನಾದ. ಚಂದ್ರಗುಪ್ತನಿಗೆ ಇದೊಂದು ದೊಡ್ಡ ನಷ್ಟವೆಂದು ತಿಳಿ. ಸ್ವಂತವಾಗಿ ಆತನು ಕಾರ್ಯನಿರ್ವಾಹಮಾಡಲಾರನು. ಮಂತ್ರಿಯಿಲ್ಲದ ಚಂದ್ರಗುಪ್ತ, ನಂದರಲ್ಲೇ ಅನುರಕ್ತರಾದ ಪ್ರಜೆ, ನನಗೆ ಪರಿಚಿತವಾದ ಪಾಟಲೀಪುತ್ರ, ನಿನ್ನನ್ನು ಆಶ್ರಯಿಸಿರುವ ನಾನು–ಇಷ್ಟೆಲ್ಲ ಅನುಕೂಲ ವಿರುವಾಗ ಕಾಲ ಕಳೆಯಕೂಡದು.' ಎಂದು ಅವನನ್ನು ಪ್ರೋತ್ಸಾಹಿಸಿದನು.

ಶುಭಲಗ್ನದಲ್ಲಿ ವಿಜಯಯಾತ್ರೆಗೆ ಪ್ರಯಾಣ ಬೆಳೆಸಬೇಕೆಂದು ಮಲಯಕೇತುವಿನ ಅಪ್ಪಣೆಯಾಯಿತು.

## ೨೮. ಫಲದ ಮಾರ್ಗದಲ್ಲಿ

ರಾಕ್ಷಸನ ಅಪ್ಪಣೆಯಂತೆ ವಿಜಯಯಾತ್ರೆಗೆ ಎಲ್ಲವೂ ಅಣಿಯಾಯಿತು. ಶುಭಲಗ್ನವನ್ನು ನಿಶ್ಚೈಸಿ ಪ್ರಯಾಣ ಬೆಳೆಸುವುದೊಂದೇ ಇನ್ನು ಉಳಿದಿರುವ ಕೆಲಸ. ಆ ಸಮಯದಲ್ಲಿ ಚಂದ್ರಗುಪ್ತನಿಂದ ಅವಮಾನ ಹೊಂದಿದ ಜೀವಸಿದ್ಧಿ ರಾಕ್ಷಸನ ಅರಮನೆಯ ಬಾಗಿಲ ಬಳಿ ಬಂದು ನಿಂತನು. ಆಗ ರಾಕ್ಷಸನು ಪ್ರಯಾಣದ ಲಗ್ನವನ್ನು ನಿಶ್ಚಯ ಮಾಡುವದಕ್ಕಾಗಿ ಹೊರಗೆ ಯಾರಾದರೂ ಜ್ಯೋತಿಷ್ಕರಿದ್ದಾರೆಯೇ ನೋಡಿ ಬಾ ಎಂದು ದೂತನಿಗೆ ಅಪ್ಪಣೆಮಾಡಲು, ದೂತನು ಹೊರಗೆ ಹೋಗಿ ಬಂದು 'ಅಮಾತ್ಯರೇ, ಹೊರಗಡೆ ಯಾವ ಜ್ಯೋತಿಷ್ಕರೂ ಕಾಣಿಸಲಿಲ್ಲ. ಕ್ಷಪಣಕ ಜೀವಸಿದ್ಧಿ ಮಾತ್ರ ಬಂದು ನಿಂತಿದ್ದಾನೆ.' ಎಂದು ಬಿನ್ನೈಸಿದನು.

ಮೊಟ್ಟಮೊದಲು ಕ್ಷಪಣಕನ ದರ್ಶನ ಅಪಶಕುನ. ಆದರೆ ತನಗಾಗಿ ಅವಮಾನ ಹೊಂದಿ ಕಷ್ಟಪಟ್ಟಿರುವ ಈತನನ್ನು ಹಿಂದಕ್ಕೆ ಕಳುಹಿಸಿ ಬಿಡುವುದುಚಿತವಲ್ಲವೆಂದುಕೊಂಡು ರಾಕ್ಷಸನು ಜೀವಸಿದ್ಧಿಯನ್ನು

ಸೌಮ್ಯವೇಷದಿಂದ ಒಳಗೆ ಕರೆಸಿಕೊಂಡನು. ಜೀವಸಿದ್ಧಿ ಅಮಾತ್ಯನಿಗೆ ಹರಸಿ ಕುಳಿತುಕೊಳ್ಳಲು—

ರಾಕ್ಷಸ—ಕ್ಷಪಣಕರೇ, ಈಗ ರಾಜಕಾರ್ಯ ಬಲವಾಗಿದೆ. ಉಳಿದ ವಿಷಯವನ್ನು ಆಮೇಲೆ ವಿಚಾರಿಸುತ್ತೇನೆ. ಈಗ ವಿಜಯ ಯಾತ್ರೆಗೆ ಸರಿಯಾದ ಲಗ್ನವನ್ನು ನೋಡಿ ಹೇಳಿ.

ಕ್ಷಪಣಕ—ಅಮಾತ್ಯರೇ, ಈ ದಿನ ಮಧ್ಯಾಹ್ನವಾದ ಮೇಲೆ ಹುಣ್ಣಿಮೆಯ ತಿಥಿ ಬರುತ್ತದೆ. ಉತ್ತರದಿಂದ ದಕ್ಷಿಣಕ್ಕೆ ಹೋಗಲು ಬಯಸಿರುವ ನಿಮಗೆ ನಕ್ಷತ್ರ ವಾಮಭಾಗಕ್ಕೆ ಆಗುತ್ತದೆ. ಸಂಜೆಯಾಗುತ್ತಲೇ ಪೂರ್ಣಚಂದ್ರ ಬುಧನೊಡನೆ ಉದಯಿಸುತ್ತಾನೆ. ಕೇತು ಎದ್ದು ಮುಳುಗುತ್ತಾನೆ. ನಿಮಗೆ ಚಂದ್ರಬಲ ಒದಗಿ ಒಳ್ಳೆಯ ಸಿದ್ಧಿ ದೊರೆಯುವುದು.

ರಾಕ್ಷಸನಿಗೆ ಹಿಂದಿನದನ್ನು ನೆನೆದು, ಸ್ವಲ್ಪ ಸಂಶಯಹುಟ್ಟಿ 'ಕ್ಷಪಣಕರೇ, ಬೇರೆ ಜೋತಿಷ್ಕರನ್ನು ವಿಚಾರಿಸಿ ಸ್ವಲ್ಪ ಸರಿಯಾಗಿ ಹೇಳಿ' ಎಂದನು. ಅದಕ್ಕೆ ಕ್ಷಪಣಕನು 'ತಾವೇ ಬೇರೆಯವರನ್ನು ವಿಚಾರಿಸಬಹುದು. ನಿನ್ನಲ್ಲಿ ನನಗೆ ಕೋಪವಿಲ್ಲ. ನಿನ್ನವರನ್ನು ಬಿಟ್ಟು ಪರರನ್ನು ನೆಚ್ಚಿಕೊಂಡಿರುವ ನಿನ್ನಲ್ಲಿ ದೈವವೇ ಕೋಪಗೊಂಡಿದೆ.' ಎಂದು ಹೇಳಿ ಅಲ್ಲಿಂದ ಹೊರಟುಹೋದನು. ಅಧಿಕಾರ, ಐಶ್ವರ್ಯಗಳು ಕೈಬಿಟ್ಟಾಗ ಆಶ್ರಿತರು ದೂರವಾಗುವುದು ಹೀಗೆಯೇ ಎಂದೆನಿಸಿತು ಅಮಾತ್ಯನಿಗೆ.

ಅಮಾತ್ಯನ ಅಪ್ಪಣೆಯಂತೆ ಮಲಯಕೇತುವಿನ ಸೈನ್ಯ ವಿಜಯ ಯಾತ್ರೆಗೆ ಹೊರಟು ಪಾಟಲೀಪುರವನ್ನು ಸಮೀಪಿಸಿತು. ಆಗ ಸೇನಾಪತಿಗಳು ಮಲಯಕೇತುವಿನ ಬಳಿ ರಾಕ್ಷಸನಿಗಿರುವ ಆಶ್ರಯವನ್ನು ತಪ್ಪಿಸಿ, ಮೃಗವನ್ನು ಹಿಡಿಯಲು ಸಿದ್ಧರಾದರು. ಇತ್ತ ಸಿದ್ಧಾರ್ಥಕನು ಶಕಟದಾಸನ ಬಳಿಗೆ ಬಂದು 'ತೌರೂರಿನಲ್ಲಿರುವ ನನ್ನ ಹೆಂಡತಿಗೆ ಅಮಾತ್ಯರು ಕೊಟ್ಟ ಆಭರಣಗಳನ್ನು ತೋರಿಬರುತ್ತೇನೆ. ಅವುಗಳನ್ನು ಕೊಡು.' ಎಂದು ಹೇಳಿ ಅವನಿಂದ ಆಭರಣದ ಪೆಟ್ಟಿಗೆಯನ್ನು ತೆಗೆದುಕೊಂಡು, ಚಾಣಕ್ಯನು ತನಗೆ ಹಿಂದೆ ಕೊಟ್ಟಿದ್ದ ಲೇಖನದೊಡನೆ ಭಾಗುರಾಯಣನು ಉಂಡಿಗೆಯನ್ನು ಕೊಡುತ್ತಿದ್ದ ಉಕ್ಕಡದ ಮಾರ್ಗವಾಗಿ

ಬರುತ್ತಿದ್ದನು. ಆಗ ಅವನೆದುರಿಗೆ ಕ್ಷಪಣಕನು ಬರಲು 'ಕ್ಷಪಣಕನು ನೋಟ ಅಪಶಕುನವಾದರೂ ನನಗೆ ಒಳ್ಳೆಯದು. ಎಷ್ಟಾದರೂ ಇವನು ನಮ್ಮವನಲ್ಲವೆ?' ಎಂದುಕೊಂಡು ಅವನನ್ನು ಈ ರೀತಿ ಕೇಳಿದನು.

ಸಿದ್ಧಾರ್ಥಕ—ಸ್ವಾಮಿ ಕ್ಷಪಣಕರೇ, ನಮಸ್ಕಾರ. ಎಲ್ಲಿಂದ ಬಂದಿರಿ? ಎಲ್ಲಿಗೆ ಪ್ರಯಾಣ?

ಕ್ಷಪಣಕ—ನನ್ನ ಮಾತು ಹಾಗಿರಲಿ. ನೀನು ಎಲ್ಲಿಗೋ ಹೊರಟಿರುವಂತಿದೆ!

ಸಿದ್ಧಾರ್ಥಕ—ಕ್ಷಪಣಕರೇ, ತಾವು ಜ್ಯೋತಿಷ್ಯವನ್ನು ಬಲ್ಲವರು. ತಮಗೆ ಹೇಳತಕ್ಕದ್ದೇನಿದೆ?

ಕ್ಷಪಣಕ—ಸಿದ್ಧಾರ್ಥಕ, ನಿನ್ನಲ್ಲಿರುವ ಪತ್ರವೇ ನಿನ್ನ ಪ್ರಯಾಣ ವನ್ನು ಸೂಚಿಸುತ್ತಿದೆ.

ಸಿದ್ಧಾರ್ಥಕ—ನನ್ನ ಗುಟ್ಟನ್ನು ತಾವು ಕಂಡುಕೊಂಡುಬಿಟ್ಟಿರಿ! ನಾನು ಮತ್ತೊಂದು ದೇಶಕ್ಕೆ ಪ್ರಯಾಣ ಹೊರಟಿರುತ್ತೇನೆ. ಪ್ರಯಾ ಣಕ್ಕೆ ದಿವಸ ಹೇಗಿದೆ?

ಕ್ಷಪಣಕ—ಕ್ಷೌರಮಾಡಿಸಿಕೊಂಡ ಮೇಲೆ ಆಯುಷ್ಕರ್ಮಕ್ಕೆ ದಿವಸ ಹೇಗಿದೆ ಎಂದು ಕೇಳಿದಂತಾಯಿತು ನಿನ್ನ ಪ್ರಶ್ನೆ. ಈ ದಿನ ಮೊದಲುಗೊಂಡು ಪಾಟಲೀಪುರದ ಮಾರ್ಗವಾಗಿ ಹೋಗುವ ಜನರು ಭಾಗುರಾಯಣನು ಕೊಡುವ ಉಂಡಿಗೆಯನ್ನು ಉಕ್ಕಡದವರಿಗೆ ತೋರಿಸಿ ಹೋಗಬೇಕಂತೆ. ರಾತ್ರಿಯಕಾಲದಲ್ಲಿ ಉಂಡಿಗೆಯ ಆವಶ್ಯಕತೆ ಇನ್ನೂ ಹೆಚ್ಚು. ನೀನು ರಾತ್ರಿಯ ಕಾಲದಲ್ಲಿ ಉಕ್ಕಡದವರಿಗೆ ಸಿಲುಕಿ ಬಂಧನಕ್ಕೆ ಒಳಗಾಗಿ ರಾಜಕುಮಾರನ ಮುಂದೆ ನಿಲ್ಲಬೇಕೆಂಬ ಬಯಕೆ ಇದ್ದರೆ ಉಂಡಿಗೆಯಿಲ್ಲದೆ ಹೋಗು. ಎಷ್ಟಾದರೂ ನೀನು ರಾಕ್ಷಸನ ಕಡೆಯವನಾದ್ದರಿಂದ ನಿನ್ನನ್ನು ಯಾರೂ ತಡೆಯರು. ನಮ್ಮ ಕಾರ್ಯ ಸಿದ್ಧಿಯ ಕಾಲ ಹತ್ತಿರವಾಯಿತು. ಉಂಡಿಗೆಗಾಗಿ ನಾನೂ ಭಾಗು ರಾಯಣನ ಬಳಿಗೆ ಹೋಗುವೆನು.

ಕ್ಷಪಣಕ ಸಿದ್ಧಾರ್ಥಕರು ಮುಂದಿನ ಕಾರ್ಯವನ್ನು ನಡೆಸಲು ಒಬ್ಬರನ್ನೊಬ್ಬರು ಬೀಳ್ಕೊಂಡರು.

ಚಾಣಕ್ಯನ ತಂತ್ರ ಎಷ್ಟು ವಿಚಿತ್ರವಾದದ್ದು! ಅಕಾಲ ಮೇಘ

ದಂತೆ, ವಿಚಿತ್ರವಾದ ದೈವವಿಲಾಸದಂತೆ ಅವನ ನೀತಿಪ್ರಯೋಗ ಒಮ್ಮೆ ಮಹಾಫಲವನ್ನು ಕೊಡುತ್ತದೆ. ಒಮ್ಮೆ ಅದರ ನೆಲೆಯೇ ಗೊತ್ತಾಗುವುದಿಲ್ಲ. ಅವನ ಕಡೆಯುವರೇ ಅದರ ಪೂರ್ಣ ಸ್ವರೂಪವನ್ನರಿಯರು. ಸೇನಾಪತಿ ಭಾಗುರಾಯಣನಿಗೂ ಇದರ ಸ್ವರೂಪ ಅರ್ಥವಾಗದು. ಸ್ವಾಮಿಗಾಗಿ, ಹಣಕ್ಕಾಗಿ ದೇಹವನ್ನು ಮಾರಿಕೊಂಡದ್ದಾಗಿದೆ. ಆದ್ದರಿಂದ ಕುರಿಯಂತೆ ತಲೆಬಾಗಿ ಚಾಣಕ್ಯನ ಅಪ್ಪಣೆಯನ್ನು ಪರಿಪಾಲಿಸುತ್ತಿರುವುದೇ ಭಾಗುರಾಯಣನು ಈಗ ಅನುಸರಿಸುತ್ತಿರುವ ನೀತಿ.

ಪಾಟಲೀಪುರ ಹತ್ತಿರವಾದಂತೆಲ್ಲ ಭಾಗುರಾಯಣನು ಆಪ್ತನಂತೆ ಮಲಯಕೇತುವಿನ ಬಳಿಯಲ್ಲೇ ಇರತೊಡಗಿದನು. ರಾಕ್ಷಸನಂತೆ ರಾಜಕುಮಾರನಿಗೆ ತನ್ನ ಮೇಲೆ ಸಂಶಯ ಬಂದರೆ ತನ್ನಗತಿ ಏನಾಗುವುದೋ ಎಂಬ ಹೆದರಿಕೆ ಅವನಿಗೆ. ಮಲಯಕೇತುವನ್ನು ಒಡಂಬಡಿಸಿ ಸ್ಥಳದಿಂದ ಪರಸ್ಥಳಗಳಿಗೆ ಹೋಗುವ ಜನರಿಗೆ ಉಂಡಿಗೆಯನ್ನು ಕೊಡುವ ಅಧಿಕಾರವನ್ನು ಭಾಗುರಾಯಣನು ತಾನೇ ಇಟ್ಟುಕೊಂಡನು. ಇತ್ತ ಭಾಗುರಾಯಣನು ಮಲಯಕೇತುವಿನ ಮನಸ್ಸಿನಲ್ಲಿ ನೆಟ್ಟ ವಿಷಬೀಜ ಕುಡಿವಡೆಯಲು ಮೊದಲಾಗಿತ್ತು. ‘ಪಾಟಲೀಪುರ ಹತ್ತಿರವಾಯಿತು. ರಾಕ್ಷಸನು ಹೆಂಡತಿ ಮಕ್ಕಳ ಮೇಲಿನ ಮೋಹದಿಂದ, ನಂದರ ವಂಶದಲ್ಲಿ ಹುಟ್ಟಿದವನೆಂಬ ಅಭಿಮಾನದಿಂದ ಚಂದ್ರಗುಪ್ತನೊಡನೆ ಸಂಧಿಗೆ ಒಡಂಬಡುವನೋ, ಇಲ್ಲವೆ ಹಿಡಿದ ಕೆಲಸವನ್ನು ಮಾಡಿಕೊಡುವನೋ ತಿಳಿಯದು. ಈಗ ನನಗಿರುವ ಆಪ್ತನೆಂದರೆ ಭಾಗುರಾಯಣನೊಬ್ಬನೇ. ಅವನನ್ನು ಕೇಳಿ ಮುಂದಿನ ಕೆಲಸವನ್ನು ಮಾಡಬೇಕು’ ಎಂದು ಯೋಚಿಸುತ್ತ ಮಲಯಕೇತು ಭಾಗುರಾಯಣನು ಉಂಡಿಗೆಯನ್ನು ಕೊಡುತ್ತಿದ್ದ ಚಾವಡಿಯ ಬಳಿಗೆ ಬರುತ್ತಿದ್ದನು.

ಆಗ ಉಂಡಿಗೆಗಾಗಿ ಕ್ಷಪಣಕನು ತನ್ನಲ್ಲಿಗೆ ಬರಲು ರಾಜಕುಮಾರನು ತನ್ನಲ್ಲಿಗೆ ಬರುತ್ತಿರುವ ಸುಳಿವನ್ನರಿತು ಭಾಗುರಾಯಣನು ರಾಕ್ಷಸನ ಸ್ನೇಹಿತನಾದ ಕ್ಷಪಣಕನನ್ನು ಕೆಣಕಿ ಈ ರೀತಿ ಮಾತನಾಡಿಸಿದನು—

ಭಾಗುರಾಯಣ—ಸ್ವಾಮಿ ಕ್ಷಪಣಕರೇ, ರಾಕ್ಷಸನ ಕಾರ್ಯ ನಿರ್ವಹಣಕ್ಕಾಗಿ ಹೊರಡಲು ತಾವು ಉಂಡಿಗೆಯನ್ನು ಕೇಳುತ್ತಿಲ್ಲವಷ್ಟೆ?

ಕ್ಷಪಣಕ (ಕಿವಿಯನ್ನು ಮುಚ್ಚಿಕೊಂಡು)—ಶಾಂತಂ ಪಾಪಂ! ಭಾಗುರಾಯಣ, ವಂಚಕನಾದ ರಾಕ್ಷಸನ ಕಾರ್ಯ ನನಗೇಕೆ ಬೇಕು? ಅವನ ಹೆಸರು ಯಾವ ದೇಶದಲ್ಲಿ ಕೇಳಿ ಬರುವುದಿಲ್ಲವೋ ಅಲ್ಲಿಗೆ ಹೋಗುವೆನು. ಉಂಡಿಗೆಯನ್ನು ಕೊಡು.

ಭಾಗುರಾಯಣ–ಕ್ಷಪಣಕರೇ, ಇದೇನು? ಮಿತ್ರನಲ್ಲಿ ಇಷ್ಟೊಂದು ಪ್ರಣಯಕಲಹ? ಆತನು ಮಾಡಿದ ಅಪರಾಧವೇನು? ಆ ವಿಷಯ ಗುಟ್ಟಲ್ಲದಿದ್ದರೆ ನನ್ನೊಡನೆ ಹೇಳಿ.

ಕ್ಷಪಣಕ–ಅಯ್ಯಾ ಸೇನಾಪತಿ, ರಾಕ್ಷಸನದು ವಂಚಕನ ಸ್ವಭಾವ. ನಾನು ಮಾಡಿಕೊಂಡ ಕೆಲಸಕ್ಕೆ ನನಗೇ ನಾಚಿಕೆಯುಂಟಾಗಿದೆ. ಅದು ಗುಟ್ಟಾದ ವಿಷಯವಲ್ಲದಿದ್ದರೂ, ಮಹಾ ಘಾತುಕವ್ಯಾಪಾರವಾಗಿರುವುದರಿಂದ ಅದನ್ನು ತಮ್ಮಲ್ಲಿ ಹೇಳಲಾಗದು.

ಭಾಗುರಾಯಣ—ಹಾಗಾದರೆ ತಾವು ಉಂಡಿಗೆಯನ್ನು ಕೇಳಲಾಗದು.

ಕ್ಷಪಣಕ—ಅಯ್ಯೋ, ಇನ್ನೇನು ಗತಿ! ಹೇಳದಿದ್ದರೆ ವಿಧಿಯಿಲ್ಲ. ಭಾಗುರಾಯಣ, ನಿನಗೆ ಅಷ್ಟೊಂದು ಕುತೂಹಲವಿದ್ದರೆ ಹೇಳುವೆನು ಕೇಳು. ಪರ್ವತರಾಜನು ಹಿಂದೆ ಪಾಟಲೀಪುರದಲ್ಲಿದ್ದಾಗ, ರಾಕ್ಷಸನು ನನ್ನ ಮೂಲಕ ಆ ವಿಷಕನ್ಯೆಯನ್ನೊಪ್ಪಿಸಿ ಆತನನ್ನು ಕೊಲ್ಲಿಸಿದನು. ಇದನ್ನು ತಿಳಿದು ಚಾಣಕ್ಯನು ರಾಕ್ಷಸನ ಮಿತ್ರನಾದ ನನ್ನನ್ನು ಅವಮಾನಪಡಿಸಿ ನಗರದಿಂದ ಹೊರಡಿಸಿದನು. ಅಂದಿನಿಂದಲೂ ರಾಜನೀತಿ ನಿಪುಣನಾದ ರಾಕ್ಷಸನ ಹತ್ತಿರ ಓಡಾಡಲು ನನಗೆ ತುಂಬ ಹೆದರಿಕೆ. ಏಕೆಂದರೆ ಈ ತೆರನಾದ ಪ್ರಸಂಗ ಮತ್ತೊಂದು ಒದಗಿದರೆ ನಾನು ಈ ಲೋಕದಲ್ಲಿ ಇರದಂತೆಯೇ ಆಗಬಹುದು.

ಭಾಗುರಾಯಣ—ಪರ್ವತೇಶ್ವರನಿಗೆ ಕೊಡಬೇಕಾದ ರಾಜ್ಯಾರ್ಧವನ್ನು ಉಳಿಸಿಕೊಳ್ಳಲು ಚಾಣಕ್ಯನೇ ಈ ಕೆಲಸ ಮಾಡಿದನೆಂದು ನಾವು ಕೇಳಿದ ಸುದ್ದಿ ಸುಳ್ಳೇ?

ಕ್ಷಪಣಕ—ಭಾಗುರಾಯಣ, ಚಾಣಕ್ಯನು ನನ್ನ ವೈರಿ; ನಿಜ-

ಅಷ್ಟುಮಾತ್ರದಿಂದಲೇ ನಾನು ಅವನಲ್ಲಿ ದೋಷವನ್ನು ಹೇಳಬಹುದೇ? ಸತ್ಯವಾಗಿಯೂ ಅವನು ಇದೊಂದನ್ನೂ ಅರಿತವನಲ್ಲ.

ಭಾಗುರಾಯಣ—ಕ್ಷಪಣಕರೇ, ಹಾಗಾದರೆ ಈ ವಿಷಯವನ್ನು ರಾಜಕುಮಾರನಾದ ಮಲಯಕೇತುವಿನ ಮುಂದೆ ಹೇಳಬಹುದಲ್ಲ!

ಕ್ಷಪಣಕ—ಭಾಗುರಾಯಣ, ಆ ವೇಳೆಯಲ್ಲಿ ನಾನು ರಾಕ್ಷಸನಿಗೆ ಮಿತ್ರನಾಗಿದ್ದು, ಈ ಸಮಯದಲ್ಲಿ ಅವನಲ್ಲಿ ಶತ್ರುಭಾವವನ್ನು ಆಚರಿಸಬಹುದೇ?

ಭಾಗುರಾಯಣ ಕ್ಷಪಣಕರ ಮಾತನ್ನು ಮರೆಯಲ್ಲಿ ಹೊಂಚಿ ಕೇಳುತ್ತಿದ್ದ ಮಲಯಕೇತುವಿಗೆ ನಂದಿಹೋಗಿದ್ದ ತಂದೆ ಸತ್ತ ದುಃಖ ಮತ್ತೆ ಎರಡುಮಡಿಯಾಯಿತು. ಈಗ ಅವನು ಮುಂದೆ ಬರಲು ತಾನು ಬಂದ ಕೆಲಸವಾಯಿತೆಂದು ತಿಳಿದು ಮತ್ತೊಮ್ಮೆ ಸೇನಾಪತಿಯನ್ನು ಉಂಡಿಗೆಗಾಗಿ ಕಾಣಿಸಿಕೊಳ್ಳುವೆನೆಂದು ಹೇಳಿ ಕ್ಷಪಣಕನು ಮರೆಯಾದನು. ಕೋಪ ಶೋಕಗಳಿಂದ ಕೂಡಿದ ಮಲಯಕೇತು ಸೇನಾಪತಿಗೆ 'ಭಾಗುರಾಯಣ, ರಾಕ್ಷಸನು ಎಂಥ ಕೃತಘ್ನ! ಮಿತ್ರನಾದ ನನ್ನ ತಂದೆಯನ್ನೇ ಕೊಲ್ಲಿಸಿದ. ಅವನಿಗೆ ನಾವು ಮಾಡಿದ ಉಪಕಾರ ಹಾವಿಗೆ ಹಾಲೆರದಂತಾಯಿತು. ಅವನಿಗೆ ಏನನ್ನು ಮಾಡಿದರೆ ತಾನೆ ನನ್ನ ಕೋಪ ಆರೀತು? ನೀನೊಬ್ಬ ಆಪ್ತ ನನಗಿರದಿದ್ದರೆ ನನ್ನ ಗತಿ ಏನಾಗುತ್ತಿತ್ತೆಂದು ನನ್ನ ಮನಸ್ಸು ಚಿಂತಿಸದಾಗಿದೆ' ಎಂದು ನೊಂದು ನುಡಿದನು.

ಮಲಯಕೇತುವಿನ ಮಾತನ್ನು ಕೇಳಿ ಭಾಗುರಾಯಣನಿಗೆ ಹೆದರಿಕೆಯಾಯಿತು. ಕೋಪದಿಂದ ರಾಜಕುಮಾರನು ರಾಕ್ಷಸನನ್ನು ಕೊಲ್ಲಿಸಿದರೆ ಚಾಣಕ್ಯನ ರಾಜತಂತ್ರ ಕೆಡುವುದೆಂದೆಣಿಸಿ, ಭಾಗುರಾಯಣನು ಮಲಯಕೇತುವಿಗೆ 'ಕುಮಾರ, ಈಗ ನೀನು ಕೋಪಗೊಳ್ಳದೆ ಶಾಂತಿಯಿಂದ ವರ್ತಿಸಬೇಕು. ಈ ಸಮಯದಲ್ಲಿ ನೀನು ರಾಕ್ಷಸನ ಪ್ರಾಣಕ್ಕೆ ಕೈಹಾಕಿದರೆ, ಸೇನೆಯಲ್ಲಿ ಕಳವಳವುಂಟಾಗಿ ನಮಗೆ ಜಯ ದೊರೆಯದೆ ಹೋಗಬಹುದು. ಇದೂ ಅಲ್ಲದೆ ರಾಜನೀತಿ ನಿನಗೆ ತಿಳಿಯದೇ? ಪರ್ವತರಾಜನನ್ನು ರಾಕ್ಷಸನು ವಿಷಕನ್ಯೆಯಿಂದ ಕೊಲ್ಲಿಸಿದಾಗ ಚಂದ್ರಗುಪ್ತನಂತೆ ನಿಮ್ಮ ತಂದೆಯೂ ಅವನಿಗೆ ವೈರಿಯಾ

ಗಿದ್ದನು. ಆದ್ದರಿಂದಲೇ ಆತನು ಈ ಕೆಲಸವನ್ನು ನಡೆಸಿರಬೇಕು. ರಾಜನೀತಿಪ್ರಯೋಗದಲ್ಲಿ ಇದು ಒಂದು ದೋಷವಲ್ಲ. ಕಳೆದುಹೋದ ವಿಷಯುಗಳನ್ನು ವಿವೇಕಿಗಳು ಸ್ಮರಿಸರು. ನಮಗೆ ಗೌಡದೇಶ ಕೈವಶ ವಾಗುವ ಈ ಸಮಯದಲ್ಲಿ ಮುಂದಿನ ಕಾರ್ಯದಲ್ಲೇ ನಟ್ಟ ದೃಷ್ಟಿ ಯುಳ್ಳ ನೀನು ಈ ದುಃಖವನ್ನು ಸೈರಿಸಿಕೊಂಡು ಈ ವಿಷಯವನ್ನು ಮರೆತುಬಿಡು' ಎಂದು ಸಮಾಧಾನಪಡಿಸಿದನು. ಸಕಾಲದಲ್ಲಿ ಭಾಗು ರಾಯಣನು ತನ್ನನ್ನು ಎಚ್ಚರಿಸಿದನೆಂದುಕೊಂಡು ಮಲಯಕೇತು ಮನಸ್ಸನ್ನು ಹಿಡಿತಕ್ಕೆ ತಂದುಕೊಂಡು, ಪ್ರಮಾದದಿಂದ ಪಾರಾಗಿ ಅಂತಃಪುರವನ್ನು ಸೇರಿದನು.

ಮಾರನೆಯ ದಿನ ರಾತ್ರಿ ಉಂಡಿಗೆಯಿಲ್ಲದೆ ಉಕ್ಕಡವನ್ನು ದಾಟಿ ಹೋಗಲು ಯತ್ನಿಸಿದ ಸಿದ್ಧಾರ್ಥಕನನ್ನು ಚಾರರು ಮುದ್ರೆಯೊತ್ತಿದ ಲೇಖನದೊಡನೆ ಭಾಗುರಾಯಣ ಮತ್ತು ರಾಜಕುಮಾರರೆದುರಿಗೆ ತಂದು ನಿಲ್ಲಿಸಿದರು. ರಾಕ್ಷಸನನ್ನು ಮಲಯಕೇತುವಿನ ಬಳಿಯಿಂದ ಹೊರಡಿಸಲು ಸಮಯ ಬಂದಿತೆಂದು ತಿಳಿದು, ಭಾಗುರಾಯಣನು ಚಾರ ರನ್ನು ನೋಡಿ 'ಇವನು ಇಲ್ಲಿಗೆ ಹೊಸಬನೋ, ಇಲ್ಲವೆ ಯಾವನೋ ಒಬ್ಬ ಅಧಿಕಾರಿಯ ಸೇವಕನೋ?' ಎಂದು ಪ್ರಶ್ನಿಸಿದನು.

ಸಿದ್ಧಾರ್ಥಕ—ಸ್ವಾಮಿ, ನಾನು ಅಮಾತ್ಯರ ಸೇವಕ. ಅವಸರದ ರಾಜಕಾರ್ಯವಿದ್ದ ಕಾರಣ ತಮ್ಮಲ್ಲಿಗೆ ಬಂದು ಉಂಡಿಗೆಯನ್ನು ಕೇಳ ಲಾಗಲಿಲ್ಲ.

ಭಾಗುರಾಯಣ—ಎಲಾ, ಈ ವೇಳೆಯಲ್ಲಿ ರಾಜಶಾಸನವನ್ನು ಮೀರಿ ಹೋಗುವಂಥ ಕೆಲಸವಾದರೂ ಏನು?

ಅಷ್ಟರಲ್ಲೇ ಭಾಗುರಾಯಣನ ಸಮೀಪದಲ್ಲಿದ್ದ ಮಲಯಕೇತು ವಿಗೆ ಸಿದ್ಧಾರ್ಥಕನ ಬಳಿಯಿದ್ದ ಲೇಖನದ ವಿಷಯವನ್ನರಿಯುವ ಕುತೂ ಹಲ ಹೆಚ್ಚಿ ರಾಕ್ಷಸನ ಮುದ್ರೆ ಕೆಡದಂತೆ ಪತ್ರವನ್ನೋದುವಂತೆ ಸೇನಾ ಪತಿಗೆ ಅಪ್ಪಣೆಮಾಡಿದನು. ಭಾಗುರಾಯಣನು ಎಚ್ಚರಿಕೆಯಿಂದ ಆ ಪತ್ರವನ್ನು ಬಿಚ್ಚಿ ಓದಿದನು. ಅದರಲ್ಲಿ ಈ ರೀತಿ ಬರೆದಿತ್ತು—

'ಸ್ಥಳದಲ್ಲಿರುವ ಮಹಾಶಯರಿಗೆ ಬೇರೊಂದು ಕಡೆ ಇರುವ ಪುರುಷನು ಬಿನ್ನೈಸಿಕೊಳ್ಳುವುದೇನೆಂದರೆ—ನನ್ನ ವೈರಿಯನ್ನು ತಾವು

ದೂರಮಾಡಿದಿರಿ. ಆತನೆದುರಿಗೆ ನನ್ನನ್ನು ಬಾಯಿತುಂಬ ಹೊಗಳಿದಿರಿ. ಬೇರೊಬ್ಬರಿಂದ ಈ ವಿಷಯ ನಮಗೆ ತಿಳಿದುಬಂದುದಲ್ಲದೆ, ತಾವು ಕಳುಹಿಸಿದ ಮೂರು ಆಭರಣದ ಪೆಟ್ಟಿಗೆಗಳೂ ಕೈಸೇರಿದುವು. ನಮ್ಮ ಆಪ್ತರು ಸಮಯ ನೋಡಿ ತಮ್ಮ ಕೆಲಸವನ್ನು ಪೂರ್ಣಗೊಳಿಸಲು ಇಲ್ಲಿ ಕಾದಿದ್ದಾರೆ. ಕೆಲಸ ಕೈಗೂಡಿದಾಗ ತಾವು ಇದನ್ನು ನಡೆಸಿಕೊಡ ಬೇಕು. ಕೆಲವರಿಗೆ ಶತ್ರುವಿನ ಭಂಡಾರದಲ್ಲಿ ಆಸೆಯಿದೆ. ಮತ್ತೆ ಕೆಲವರು ಹಗೆಯ ಗಜಸೇನೆಯನ್ನು ಬಯಸುವರು. ಉಳಿದವರು ನಿಮ್ಮ ವೈರಿಯ ರಾಜ್ಯಕ್ಕೆ ಆಸೆಪಡುತ್ತಾರೆ. ಈ ಆಭರಣಗಳನ್ನು ನೋಡಿದರೆ ಇಲ್ಲಿ ನನ್ನದೇ ಸರ್ವಾಧಿಕಾರವೆಂದು ತಮಗೆ ತಿಳಿಯದಿರದು. ಮಿಕ್ಕ ಸಂಗತಿಗಳನ್ನು ಈ ಆಪ್ತನ ಬಾಯಿಮಾತಿನಿಂದ ತಿಳಿಯ ಬಹುದು.

ಭಾಗುರಾಯಣ—ಎಲಾ, ಈ ಲೇಖನವನ್ನು ನಿನಗೆ ಕೊಟ್ಟವ ರಾರು ? ಬಾಯಿಮಾತೇನು ? ಆಭರಣಗಳೆಲ್ಲಿ ?

ಸಿದ್ಧಾರ್ಥಕ—ಸ್ವಾಮಿ, ನನಗಾವ ವಿಷಯವೂ ತಿಳಿಯದು.

ಸಿದ್ಧಾರ್ಥಕನು ತಮ್ಮನ್ನು ವಂಚಿಸುತ್ತಿರುವನೆಂದು ಮಲಯ ಕೇತುವಿಗೆ ಹೇಳಿ, ಅವನಿಂದ ವಿಷಯವನ್ನು ಸಂಗ್ರಹಿಸಲು ಸೇನಾಪತಿ ಚಾವಟಿಯಿಂದ ಸಿದ್ಧಾರ್ಥಕನನ್ನು ಹೊಡೆಯಿಸಿದನು. ಆ ಹೊಡೆತವನ್ನು ತಾಳಲಾರದೆ ಸಿದ್ಧಾರ್ಥಕನು ನಡುಗಲು, ಅವನ ಕಂಕುಳಲ್ಲಿದ್ದ ಆಭರ ಣದ ಪೆಟ್ಟಿಗೆ ಕೆಳಗೆ ಬಿತ್ತು. ದೂತರು ಅದನ್ನು ತಂದು ಮಲಯ ಕೇತುವಿಗೊಪ್ಪಿಸಲು, ಭಾಗುರಾಯಣನು ಕುಮಾರನ ಅಪ್ಪಣೆಯಂತೆ ಮುದ್ರೆ ಕೆಡದ ಹಾಗೆ ಅದರ ಮುಚ್ಚಳವನ್ನು ತೆಗೆದು ತೋರಿಸುತ್ತಾನೆ ; ಅದರಲ್ಲಿ ಮಲಯಕೇತು ರಾಕ್ಷಸನಿಗೆ ತನ್ನ ಮೈಯಿಂದಲೇ ಕಳಚಿಕೊಟ್ಟಿದ್ದ ಆಭರಣಗಳಿವೆ ! ಮಲಯಕೇತುವಿಗೆ ಅಮಾತ್ಯನಲ್ಲಿದ್ದ ಸಂಶಯ ಇನ್ನೂ ಬಲಪಟ್ಟಿತು. ವಿಷಯವನ್ನು ದೃಢಪಡಿಸಲು ಭಾಗುರಾಯಣ ಸಿದ್ಧಾ ರ್ಥಕನನ್ನು ಮತ್ತೆ ಚಾವಟಿಯಿಂದ ಹೊಡೆಸಿದನು. ಸಿದ್ಧಾರ್ಥಕನು ಹೆದರಿದವನಂತೆ ಕೈಮುಗಿಯುತ್ತ ‘ ಸ್ವಾಮಿ, ಈ ಏಟನ್ನು ತಾಳಲಾರೆ. ಅಭಯ ಕೊಟ್ಟರೆ ಎಲ್ಲವನ್ನೂ ಮರೆಮಾಚದೆ ಹೇಳುವೆನು ’ ಎಂದು ಕೇಳಿಕೊಂಡನು.

ಭಾಗುರಾಯಣ—ನಿಜವನ್ನು ಅರಿಕೆಮಾಡು. ನಿನಗೆ ಅಭಯ ದಾನ ಮಾಡಿದ್ದೇವೆ.

ಸಿದ್ಧಾರ್ಥಕ—ಈ ಪತ್ರ, ಈ ಪೆಟ್ಟಿಗೆ ಅಮಾತ್ಯರದು. ಪಾಟಲೀಪುರದ ಚಕ್ರವರ್ತಿ ಚಂದ್ರಗುಪ್ತ ಮಹಾರಾಜರಿಗೆ ಇವನ್ನು ಕೊಟ್ಟು ಬರುವಂತೆ ಅಮಾತ್ಯರು ನನಗೆ ಅಪ್ಪಣೆ ಮಾಡಿದ್ದಾರೆ. ಅವರು ಹೇಳಿದ ಬಾಯಿಮಾತುಗಳಿವು. 'ಇಲ್ಲಿ ತಮಗೆ ಆಪ್ತರಾದ ಐದುಮಂದಿ ಅರಸರುಂಟು. ಇಲ್ಲಿಯೂ ಆಪ್ತರಂತಿರುವ ಅವರು, ಎಚ್ಚರಿಕೆಯಿಂದಿದ್ದು, ಸಮಯಕಾದು ಇನ್ನು ಕೆಲವು ದಿನಗಳಲ್ಲಿ ನಿಮ್ಮ ಕಾರ್ಯವನ್ನು ಕೈಗೂಡಿಸಿಕೊಡುವರು. ಅವರ ಹೆಸರುಗಳನ್ನು ತಮಗೆ ತಿಳಿಸಲೇ ಬೇಕಾಗಿಲ್ಲ. ತಮ್ಮ ಕೆಲಸ ಕೈಗೂಡಿದಾಗ ಅವರ ಬಯಕೆಯನ್ನು ತಾವು ಸಲ್ಲಿಸಿಕೊಡಬೇಕು.'

ರಾಕ್ಷಸನು ಚಂದ್ರಗುಪ್ತನ ಆಪ್ತನೆನ್ನುವುದಕ್ಕೆ 'ಈಗ ಸ್ಪಷ್ಟವಾದ ನಿದರ್ಶನ ಬಂದೊದಗಿತು. ಮಗನಂತೆ ಕಂಡು ಸಾಕಿದ ರಾಕ್ಷಸನು ತನಗೆ ಒಳ್ಳೆಯ ಉಪಕಾರವನ್ನೇ ಮಾಡಿದನೆಂದುಕೊಂಡನು ರಾಜಕುಮಾರ. ನಾವು ಆಪ್ತರೆಂದು ನಂಬಿದವರೇ ಹೀಗೆ ದ್ರೋಹ ಬಗೆದರೆ ಲೋಕದಲ್ಲಿ ಯಾರನ್ನು ನಂಬುವುದು ಯಾರನ್ನು ಬಿಡುವುದು? ಭಾಗುರಾಯಣನೊಬ್ಬನ ಹೊರತಾಗಿ ಲೋಕವೆಲ್ಲ ದ್ರೋಹಮಯವಾಗಿ ತೋರುತ್ತಿದೆ ರಾಜಕುಮಾರನಿಗೆ. ಯಾವ ರಾಜಕಾರ್ಯವಿದ್ದರೂ ಬಿಟ್ಟು ರಾಕ್ಷಸನು ತನ್ನಲ್ಲಿಗೆ ಬರಬೇಕೆಂದು ದೂತನ ಮೂಲಕ ಮಲಯಕೇತು ಅಪ್ಪಣೆ ಮಾಡಿ ಕಳುಹಿಸಿದನು. ಮಲಯಕೇತುವಿನ ದೂತನು ರಾಕ್ಷಸನಲ್ಲಿಗೆ ಬಂದಾಗ ಅಮಾತ್ಯನು ಪ್ರಯಾಣದ ವ್ಯವಸ್ಥೆಯಲ್ಲಿ ತೊಡಗಿದ್ದನು. ಕುಮಾರನ ಅಪ್ಪಣೆಯನ್ನು ಕೇಳಿ, ಮಲಯಕೇತು ಕೊಟ್ಟ ಆಭರಣಗಳನ್ನು ಸಿದ್ಧಾರ್ಥಕನಿಗೆ ಕೊಟ್ಟಿದ್ದ ಕಾರಣ ವರ್ತಕರಿಂದ ಕ್ರಯಕ್ಕೆ ತೆಗೆದುಕೊಂಡಿದ್ದ ಆಭರಣಗಳನ್ನು ಧರಿಸಿ ಅಮಾತ್ಯನು ಮಲಯಕೇತುವಿನ ಬಳಿಗೆ ಬಂದನು. ದೈವಗತಿ ವಿಚಿತ್ರವಾದದ್ದು. ಮುಂದಾಗುವುದನ್ನು ರಾಕ್ಷಸನು ಅರಿಯ.

ಮಲಯಕೇತುವಿನ ಬಳಿಗೆ ಅಮಾತ್ಯನು ಬಂದಾಗ ರಾಜಕುಮಾರನ ಮುಖ ಪ್ರಸನ್ನವಾಗಿರಲಿಲ್ಲ. ರಾಜಕುಮಾರನ ಈ ಮುಖಭಾವ

ವನ್ನು ರಾಕ್ಷಸನು ಗ್ರಹಿಸದಿರಲಿಲ್ಲ. ಅಂದು ತನಗೆ ಏನೋ ಆಪತ್ತು ಕಾದಿದೆಯೆಂದು ರಾಕ್ಷಸನಿಗೆ ಅಲ್ಲಿನ ಆವರಣದಿಂದ ಅರ್ಥವಾಯಿತು. ಅಮಾತ್ಯನು ರಾಜಕುಮಾರನಿಗೆ ಹರಸಿ ಕುಳಿತುಕೊಳ್ಳಲು, ಮಲಯ ಕೇತು ರಾಕ್ಷಸನನ್ನು ನೋಡಿ 'ಅಮಾತ್ಯರೇ, ನಿಮ್ಮನ್ನು ನೋಡುವ ಬಯಕೆಯಿಂದ ರಾಜಕಾರ್ಯವ್ಯವಸ್ಥೆಯಲ್ಲಿದ್ದ ತಮಗೆ ಶ್ರಮಕೊಡ ಬೇಕಾಯಿತು. ಪ್ರಯಾಣದ ವ್ಯವಸ್ಥೆ ಹೇಗೆ ಎಂಬುದನ್ನು ಕೇಳಲು ನನಗೆ ಕುತೂಹಲವುಂಟಾಗಿದೆ.' ಎಂದನು.

ರಾಕ್ಷಸ—ಕುಮಾರ, ನಮ್ಮ ನಗರರಕ್ಷಣೆಯ ಭಾರವನ್ನು ಶೇಖರ ನಿಗೆ ಒಪ್ಪಿಸಿದೆ. ಮಗಧ ಕಿರಾತ ಸೇನೆಗಳು ನನ್ನೊಡನೆ ಮುಂದೆ ಬರು ತ್ತವೆ. ಚಿತ್ರವರ್ಮಾದಿಗಳು ನಿನ್ನ ಅಂಗರಕ್ಷಕರಾಗಿ ಹಿಂದುಗಡೆ ಬರುತ್ತಾರೆ.

ಮಲಯಕೇತು (ಮನಸ್ಸಿನಲ್ಲಿ) ನನ್ನನ್ನು ಚಂದ್ರಗುಪ್ತನಿಗೆ ಕೈಸೆರೆ ಒಪ್ಪಿಸತಕ್ಕವರೇ ನನ್ನ ಅಂಗರಕ್ಷಕರು! ಚೆನ್ನಾಯಿತು. (ಪ್ರಕಾಶ ವಾಗಿ) ಅಮಾತ್ಯರೇ, ಈಗ ಪಾಟಲೀಪುರಕ್ಕೆ ಹೋಗತಕ್ಕವರು ಯಾರಾ ದರೂ ಉಂಟೇ?

ರಾಕ್ಷಸ—ಕುಮಾರ, ಉಳಿದವರಿಂದ ಏನು ಪ್ರಯೋಜನ? ಇನ್ನು ಒಂದೆರಡು ದಿನಗಳಲ್ಲಿ ಸೇನೆಯೊಡನೆ ನಾವೇ ಅಲ್ಲಿಗೆ ಹೋಗುವೆ ವಲ್ಲ!

ಮರೆಯಾಗಿದ್ದ ಸಿದ್ಧಾರ್ಥಕನು ಈಗ ಮುಂದೆ ಬಂದನು. ಮಲಯ ಕೇತು ರಾಕ್ಷಸನಿಗೆ 'ಈ ಚಾರ ಯಾರ ಕಡೆಯವನು? ಈ ಲೇಖನ ಯಾರದು? ಈ ಪೆಟ್ಟಿಗೆಯನ್ನು ತಾವು ಕಳುಹಿಸಿದುದೆಲ್ಲಿಗೆ?' ಎಂದು ಮುಖವನ್ನು ಗಂಟಿಕ್ಕಿಕೊಂಡು ಪ್ರಶ್ನೆಮಾಡಿದನು. ರಾಕ್ಷಸನಿಗೆ ಆಕಾ ಶವೇ ಮೈಮೇಲೆ ಕಳಚಿ ಬಿದ್ದಂತಾಯಿತು. ಅವನು ಸಿದ್ಧಾರ್ಥಕನ ಮುಖ ನೋಡಲು, ತನ್ನನ್ನು ತುಂಬಾ ಹೊಡೆದುದರಿಂದ ತಾನು ನಿಜ ವನ್ನು ಹೇಳಬೇಕಾಯಿತೆಂದು ಅವನು ನುಡಿದನು. ಇದಾವುದನ್ನೂ ಅರಿಯದ ರಾಕ್ಷಸನಿಗೆ ದಿಕ್ಕೇ ತೋರದಾಯಿತು. ಅವನ ಪ್ರಯತ್ನಗಳು ಭಗ್ನವಾದುವು. ಶತ್ರುಗಳ ತಂತ್ರ ಚೆನ್ನಾಗಿ ಕೈಗೂಡಿತು.

ಭಾಗುರಾಯಣನು ಕೊಟ್ಟ ಲೇಖನವನ್ನೋದಿಕೊಂಡು ರಾಕ್ಷ

ಸನು 'ಕುಮಾರ, ಈ ಲೇಖನ ನನ್ನದಲ್ಲ. ಈ ಮುದ್ರೆ ಶತ್ರುಗಳ ಸೃಷ್ಟಿ. ನೀನು ಕೊಟ್ಟಿದ್ದ ಆಭರಣಗಳನ್ನು ಯಾವುದೋ ಕಾಲದಲ್ಲಿ ನಮ್ಮ ಕಾರ್ಯಸಾಧನೆ ಮಾಡಿದ ಇವನಿಗೆ ಉಚಿತವಾಗಿ ಕೊಟ್ಟಿದ್ದೆನು. ನನ್ನ ಪರಮವೈರಿಗೆ ನಾನು ಬಾಯಿಮಾತನ್ನು ಹೇಳಿಕಳುಹಿಸುವು ದೆಂದರೇನು ?'

ಭಾಗುರಾಯಣ—ಕುಮಾರನೇ ನಿಮಗೆ ಕೊಟ್ಟಿದ್ದ ಈ ಆಭರಣ ಗಳನ್ನು ಈ ಚಾರನಿಗೆ ಕೊಡುವುದೆಂದರೇನು? ನಿಮ್ಮ ಮಾತನ್ನು ಒಪ್ಪುವಂತಿಲ್ಲ. ಎಲಾ, ಈ ಲೇಖನವನ್ನು ಬರೆದವರಾರು ?

ಸಿದ್ಧಾರ್ಥಕ—ಆರ್ಯ, ರಾಯಸದ ಶಕಟದಾಸ.

ರಾಕ್ಷಸ—ಈ ಅಕ್ಷರ ಶಕಟದಾಸನದಲ್ಲ. ಇದನ್ನು ಅವನು ಬರೆ ದಿದ್ದರೆ ನಾನು ಬರೆದಂತೆಯೇ.

ರಾಕ್ಷಸನೆದುರಿಗೆ ಶಕಟದಾಸನು ಸುಳ್ಳಾಡಬಹುದೆಂದೆಣಿಸಿ, ಅವನ ಇನ್ನೊಂದು ಬರವಣಿಗೆಯನ್ನು ತರಿಸಿ ಅಕ್ಷರವನ್ನು ಹೋಲಿಸಿ ನೋಡು ತ್ತಾರೆ; ಒಂದರ ಪ್ರತಿ ಮತ್ತೊಂದು! ಆಗ ರಾಕ್ಷಸನು ಮನಸ್ಸಿನಲ್ಲಿ 'ಅಯ್ಯೋ, ಮಿತ್ರನಾದ ಶಕಟದಾಸನೂ ಹಣದಾಸೆಗಾಗಿ ಶತ್ರುಗಳಿಗೆ ವಶನಾದನೆಂದರೆ ಇನ್ನಾರನ್ನು ನಂಬುವುದು? ಈ ಲೇಖನದ ಅಕ್ಷರ ಶಕಟದಾಸನದು. ಶಕಟದಾಸ ಸಿದ್ಧಾರ್ಥಕರು ಸ್ನೇಹಿತರು. ನನ್ನ ಮುದ್ರಿಕೆ ಶಕಟದಾಸನ ಬಳಿಯಲ್ಲೇ ಇತ್ತು. ಈಗ ಇವರು ಹೊರಿಸುವ ಅಪವಾದವನ್ನು ನಾನು ಹೊತ್ತುಕೊಳ್ಳಲೇಬೇಕಾಗಿದೆ. ಅಯ್ಯೋ, ಏನು ಗತಿ ಬಂತು!' ಎಂದು ಚಿಂತಿಸುತ್ತಿದ್ದನು.

ಆಗ ಇದ್ದಕ್ಕಿದಂತೆಯೇ ಮಲಯಕೇತುವಿನ ಗಮನ ರಾಕ್ಷಸನು ಧರಿಸಿದ್ದ ಆಭರಣಗಳ ಕಡೆಗೆ ಹೊರಳಿತು. 'ಇದೇನು! ನಮ್ಮ ತಂದೆ ಧರಿಸುತ್ತಿದ್ದ ಆಭರಣಗಳು ರಾಕ್ಷಸನ ಮೈ ಮೇಲಿವೆ. ಸಂದೇಹವೇಕೆ? ಅಯ್ಯೋ! ತಂದೆಯೇ, ಈ ವಜ್ರದ ಹಾರವನ್ನು ಧರಿಸಿ ಸಿಂಹಾಸನದ ಮೇಲೆ ನೀನು ಕುಳಿತಾಗ ತಾರೆಗಳಿಂದ ಸುತ್ತುಗಟ್ಟಿದ ಶರಚ್ಚಂದ್ರನಂತಿದ್ದ ನಿನ್ನ ಮುಖವನ್ನು ಹೇಗೆ ಮರೆಯಲಿ?' ಎಂದು ದುಃಖದಿಂದ 'ಅಮಾ ತ್ಯರೆ, ಈ ಆಭರಣಗಳು ಎಲ್ಲಿಯವು? ಚಂದ್ರಗುಪ್ತನು ಕಳುಹಿಸಿದ ಆಭರಣಗಳೋ ಇವು' ಎಂದು ಬಿರುಸಾಗಿ ಮಲಯಕೇತು ನುಡಿದನು.

ರಾಕ್ಷಸ (ಮನಸ್ಸಿನಲ್ಲಿ)-ಏನು? ಇವು ಪರ್ವತರಾಜನ ಆಭರಣ ಗಳೇ! ಆಹಾ! ಈಗ ಶತ್ರುಗಳ ಕಪಟ ಚೆನ್ನಾಗಿ ಫಲಿಸಿತು. (ಪ್ರಕಾಶವಾಗಿ) ಕುಮಾರ, ವರ್ತಕರಿಂದ ಕ್ರಯಕ್ಕೆ ತೆಗೆದುಕೊಂಡ ಆಭರಣ ಗಳಿವು. ಚಾಣಕ್ಯನೇ ವರ್ತಕರ ಮೂಲಕ ಇವನ್ನು ನನಗೆ ಮಾರಿಸಿರ ಬೇಕು.

ಮಲಯಕೇತು – ಆರ್ಯ, ನಮ್ಮ ತಂದೆ ಧರಿಸುತಿದ್ದ ಭೂಷಣ ಗಳಿವು. ಅಲ್ಲದೆ ಚಂದ್ರಗುಪ್ತನ ವಶದಲ್ಲಿದ್ದುವು. ಹೀಗಿರುವಾಗ ವರ್ತ ಕರು ಇವನ್ನು ನಿನಗೆ ಮಾರಿದರೆಂದರೆ ಯಾರಾದರೂ ಒಪ್ಪತಕ್ಕ ಮಾತೇ ಇದು? ಯಾವ ಹೆಚ್ಚು ಲಾಭಕ್ಕಾಗಿ ನೀನು ನನ್ನನ್ನು ಚಂದ್ರಗುಪ್ತನ ವಶಪಡಿಸಲು ಬಯಸಿದೆ? ಚಂದ್ರಗುಪ್ತನು ನಿನಗೆ ಸ್ವಾಮಿಯ ಮಗ; ನಾನು ಸ್ನೇಹಿತನ ಮಗ. ಅಲ್ಲಿ ನೀನು ದಾಸ; ಇಲ್ಲಿ ನೀನೇ ಸ್ವಾಮಿ. ಅಲ್ಲಿ ಚಂದ್ರಗುಪ್ತನು ನಿನಗೆ ಹಣವನ್ನು ದಯಪಾಲಿಸಬೇಕು. ಇಲ್ಲಿ ನೀನು ನನಗೆ ಕೊಟ್ಟಿರುಂಟು. ಹೀಗಿರುವಲ್ಲಿ ಕೃತಘ್ನನಾಗಿ, ಲೋಭಕ್ಕೆ ಒಳಗಾಗಿ ನೀನು ನನ್ನನ್ನು ಶತ್ರುವಿಗೆ ಮಾರಿದೆ. ಅಲ್ಲದೆ ನಮ್ಮ ತಂದೆ ಯನ್ನು ವಿಷಕನ್ಯೆಯ ಮೂಲಕ ಕೊಲ್ಲಿಸಿದೆ. ನಿನ್ನಂಥ ವಂಚಕರು ಲೋಕದಲ್ಲುಂಟೇ? ನಿನಗೆ ಯಾವ ಶಿಕ್ಷೆಯನ್ನು ವಿಧಿಸಿದರೆ ತಾನೇ ಮನಸ್ಸಿಗೆ ಸಮಾಧಾನ ಉಂಟಾದೀತು?

ರಾಕ್ಷಸ (ಕಣ್ಣೀರು ಮಿಡಿದು ಮನಸ್ಸಿನಲ್ಲಿ) ಅಯ್ಯೋ! ಇದೇನು ಬಂತು ಮತ್ತೆ? ಶಕಟದಾಸ ಮತ್ತು ನಾನು ಮಿತ್ರನಲ್ಲವೆಂದು ಹೇಳಿ ದರೆ ಯಾರಾದರೂ ನಂಬುವರೇ? ಹೀಗಿರುವಾಗ ಪರ್ವತರಾಜನನ್ನು ನಾನು ಕೊಲ್ಲಿಸಿದೆನೆಂಬ ಮಾತನ್ನು ಕೇಳಿ ಕುರುವಿನ ಮೇಲೆ ಬೊಕ್ಕೆ ಎದ್ದಂತಾಯಿತು. (ಪ್ರಕಾಶವಾಗಿ) ಕುಮಾರ, ಪರ್ವತರಾಜನನ್ನು ಕೊಲ್ಲಿ ಸಿದವನು ನಾನಲ್ಲ.

ಮಲಯಕೇತು—ಹಾಗಾದರೆ ಇನ್ನಾರು?

ರಾಕ್ಷಸ—ಈ ವಿಷಯದಲ್ಲಿ ದೈವವನ್ನು ಕೇಳಬೇಕು.

ಮಲಯಕೇತು—ದೈವವನ್ನು ಕೇಳಬೇಕೇ? ಜೀವಸಿದ್ಧಿಯನ್ನಲ್ಲ.

ಕ್ಷಪಣಕನೂ ಚಾಣಕ್ಯನ ಗೂಢಚಾರನೆಂದಮೇಲೆ ಶತ್ರುಗಳು ತನ್ನ ಹೃದಯವನ್ನೇ ಆಕ್ರಮಿಸಿದಂತಾಯಿತೆಂದು ರಾಕ್ಷಸನು ಸ್ತಬ್ಧನಾಗಿ

ನಿಂತುಬಿಟ್ಟನು. ಆಗ ಮಲಯಕೇತು, ದೂತನನ್ನು ಕರೆದು 'ಶೇಖರನಿಗೆ ನಾವು ಹೇಳಿದೆವೆಂದು ಈ ರೀತಿ ತಿಳಿಸು. ರಾಕ್ಷಸನ ಸ್ನೇಹಿತರಾಗಿ, ನಮಗೆ ದ್ರೋಹಬಗೆದು ಚಂದ್ರಗುಪ್ತನನ್ನು ಮೆಚ್ಚಿಸತಕ್ಕವರು ಐವರು ರಾಜರು. ಇವರಲ್ಲಿ ನಮ್ಮ ರಾಜ್ಯವನ್ನು ಬಯಸುವ ಚಿತ್ರವರ್ಮಾದಿ ಮೂವರನ್ನು ಆಳವಾದ ಕಮರಿಗೆ ತಳ್ಳಿಸಿ ಮಣ್ಣನ್ನು ಮುಚ್ಚಿಸಲಿ. ಆನೆಯ ಸೇನೆಯನ್ನು ಬಯಸುವ ಮೇಘನಾದಾದಿ ಇನ್ನಿಬ್ಬರನ್ನು ಆನೆಯ ಕಾಲಿಗೆ ಕಟ್ಟಿ ಎಳೆಸಿ.' ಎಂದು ಅಪ್ಪಣೆಮಾಡಿ ಕಳುಹಿಸಿದನು. ಆಮೇಲೆ ರಾಕ್ಷಸನನ್ನು ನೋಡಿ 'ರಾಕ್ಷಸ, ನೀನು ರಾಕ್ಷಸನೇ ಆದೆ. ನೀನು ಬ್ರಾಹ್ಮಣನಾದ ಕಾರಣ ನಿನ್ನನ್ನು ಜೀವಸಹಿತ ಬಿಟ್ಟಿದ್ದೇನೆ. ಈಗ ನಿನ್ನ ಮನಬಂದಂತೆ ಚಂದ್ರಗುಪ್ತನನ್ನು ಹೋಗಿ ಸೇವಿಸು. ಚಾಣಕ್ಯ ಚಂದ್ರಗುಪ್ತರಿಬ್ಬರನ್ನೂ ನೀನು ಕಟ್ಟಿಕೊಂಡು ಬಂದರೂ ನಾಶಮಾಡುವ ಶಕ್ತಿ ನನಗುಂಟು.' ಎಂದು ಹೇಳಿ ಕೋಪದಿಂದ ಅಂತಃಪುರಕ್ಕೆ ಹೊರಟುಹೋದನು.

ಈ ಮಾತನ್ನು ಕೇಳಿ ಖಿನ್ನನಾದ ರಾಕ್ಷಸನು ಏನೊಂದೂ ತೋರದವನಂತೆ ಅಲ್ಲಿಂದ ಎದ್ದುಹೋದನು. ಭಾಗುರಾಯಣನ ಅಪ್ಪಣೆಯಂತೆ ಪ್ರಯಾಣಕ್ಕೆ ಬೇರೊಂದು ದಿನ ಗೊತ್ತಾಯಿತು. ಪ್ರಯಾಣಕ್ಕಲ್ಲ; ಮಲಯಕೇತುವನ್ನು ಸೆರೆಹಿಡಿಯುವುದಕ್ಕೆ. ಇತ್ತ ಮಲಯಕೇತುವಿನ ಅಪ್ಪಣೆಯಂತೆ ಚಿತ್ರವರ್ಮಾದಿಗಳು ಹತರಾಗಲು, ಅವರ ಸೇನೆ ದಿಕ್ಕುಕೆಟ್ಟು ಓಡಿತು. ಶೇಖರನು ಆ ಸೇನೆಯನ್ನಟ್ಟಿಕೊಂಡು ಹೋಗಲು, ಸಮಯ ನೋಡಿ ಭದ್ರಭಟಾದಿಗಳು ಮಲಯಕೇತುವನ್ನು ಸೆರೆಹಿಡಿದರು.

## ೨೯. ರಾಕ್ಷಸನ ಸಂಗ್ರಹ

ಮಲಯಕೇತುವಿನ ಆಶ್ರಯ ತಪ್ಪಿದ ಮೇಲೆ, ರಾಕ್ಷಸನ ಮನಸ್ಸು ಚಂದನದಾಸನ ಬಿಡುಗಡೆಯ ಕಡೆಗೆ ಹರಿಯಿತು. ಚಿಂತೆಯಿಂದ ಭಾರವಾದ ಮನಸ್ಸಿನೊಡನೆ ರಾಕ್ಷಸನು ಮೆಲ್ಲನೆ ಪಾಟಲೀಪುರದ ಕಡೆಗೆ ಹೆಜ್ಜೆಯಿಡತೊಡಗಿದನು. ಬೆನ್ನು ಹತ್ತಿದ ಭೇತಾಳದಂತೆ ಚಾಣಕ್ಯನ ಚಾರನೊಬ್ಬನು ಮರೆಯಾಗಿ ಅವನನ್ನು ಹಿಂಬಾಲಿಸಿಕೊಂಡು ಬರುತ್ತಿದ್ದನು. ರಾಮೇಶ್ವರಕ್ಕೆ ಹೋದರೂ ಶನೀಶ್ವರನ ಕಾಟ ರಾಕ್ಷಸನಿಗೆ

ತಪ್ಪಲಿಲ್ಲ. ಅವನಿಗೆ ಗುರುಬಲ ಒದಗಿ ಶನಿಕಾಟ ಕಳೆಯುವ ಕಾಲ ಹತ್ತಿರವಾಗುತ್ತಿದೆ.

ಇತ್ತ ಭಾಗುರಾಯಣ ಸಿದ್ಧಾರ್ಥಕರು ಚಾಣಕ್ಯನಲ್ಲಿಗೆ ಬಂದು ಎಲ್ಲ ವಿಷಯಗಳನ್ನೂ ವಿವರವಾಗಿ ತಿಳಿಸಿ ಅವನಿಗೆ ಹರುಷವನ್ನು ತಂದರು. ಚಾಣಕ್ಯನು ಭಾಗುರಾಯಣನಿಗೆ 'ಸೇನಾಪತಿ, ಮೌರ್ಯನು ನಿನಗೆ ಮಾಡಿದ ಉಪಕಾರಕ್ಕೆ ನೂರುಮಡಿಯಾಗಿ ಪ್ರತ್ಯುಪಕಾರ ನಿನ್ನಿಂದ ಚಂದ್ರಗುಪ್ತನಿಗೆ ಸಂದಿತು. ನಿಮ್ಮಂಥ ಸ್ವಾಮಿಭಕ್ತರಿರುವಾಗ ಚಂದ್ರ ಗುಪ್ತನಿಗೇನು ಕಡಿಮೆ? ಇನ್ನು ಮುಂದೆ ನೀನು ಎಂದಿನಂತೆ ಮುಖ್ಯ ಸೇನಾಪತಿಯ ಕೆಲಸದಲ್ಲಿದ್ದು ಚಂದ್ರಗುಪ್ತನನ್ನು ಎಚ್ಚರಿಕೆಯಿಂದ ಸೇವಿಸು. ಮಲಯಕೇತುವನ್ನು ಗೌರವದಿಂದ ಕಂಡು ಅವನಿಗೆ ಬೀಡಾ ರದ ಏರ್ಪಾಟನ್ನು ಮಾಡು' ಎಂದು ಸೇನಾಪತಿಯನ್ನು ಹೊಗಳಿ ಕಳು ಹಿಸಿದನು. ಆ ಬಳಿಕ 'ಸಿದ್ಧಾರ್ಥಕ, ಚಂದನದಾಸನನ್ನು ನೀನು ಚಂಡಾಲವೇಷದಿಂದ ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗು; ಅದಕ್ಕೆ ಈ ರೀತಿಯ ಏರ್ಪಾಟನ್ನು ಮಾಡು' ಎಂದು ಅವನು ಮಾಡಬೇಕಾದ ಕೆಲಸಗಳನ್ನೆಲ್ಲ ಹೇಳಿ ಕಳುಹಿಸಿದನು. ಚಾಣಕ್ಯನ ರಾಜನೀತಿಯ ನೆಲೆ ವಿಚಿತ್ರವಾದದ್ದು–ಒಂದು ಕಲ್ಲು ಹೊಡೆದು ಮೂರು ಹಣ್ಣು ಕೆಡವಿದಂತೆ.

ಇತ್ತ ಚಂದನದಾಸನ ಬಿಡುಗಡೆಗಾಗಿ ಹೊರಟ ರಾಕ್ಷಸನು ಪಾಟಲೀಪುರದ ಉಪವನಕ್ಕೆ ಬಂದು ವಿಶ್ರಾಂತಿಗಾಗಿ ಹಾಸುಗಲ್ಲೊಂ ದರ ಮೇಲೆ ಕುಳಿತನು. ನಂದರು ಮಾಡುತ್ತಿದ್ದ ವಿಹಾರ, ಜಲಕ್ರೀಡೆ, ವನಭೋಜನ—ಇವೆಲ್ಲ ಅವನ ನೆನಪಿಗೆ ಬಂದು ಮನಸ್ಸಿನಲ್ಲಿ ಏನೋ ಒಂದು ತೆರನಾದ ಸಂಕಟವುಂಟಾಯಿತು. ಅಷ್ಟರಲ್ಲೇ 'ದೇವತೆಗಳಿರಾ, ನಿಮಗೆ ಸಾಷ್ಟಾಂಗ ಪ್ರಣಾಮಗಳು. ನಾನು ಹುಟ್ಟಿದ ಮೊದಲು ಇದು ವರೆಗೆ ಪಾಪವನ್ನಾಚರಿಸಿದವನಲ್ಲ. ಲೋಕಾಪವಾದಕ್ಕೆ ಅಂಜದೆ ನಡೆದವನಲ್ಲ. ಕಾಮಕ್ರೋಧಗಳಿಗೆ ವಶನಾದವನಲ್ಲ. ಆದರೆ ಮಿತ್ರನ ನಾಶವನ್ನು ಸಹಿಸದೆ ನಾನು ಜೀವವನ್ನು ಕಳೆದುಕೊಳ್ಳುತ್ತಿದ್ದೇನೆ. ನನಗೆ ಆತ್ಮಹತ್ಯದೋಷ ಒದಗದಂತೆ ಅನುಗ್ರಹ ಮಾಡಿ' ಎಂಬ ಕೆಟ್ಟ ಕೂಗೊಂದು ವನದ ನಡುವೆ ಕೇಳಿ ಬಂತು. ಬೆಚ್ಚಿ ರಾಕ್ಷಸನು ಹಿಂದಿ ರುಗಿ ನೋಡುತ್ತಾನೆ; ಯಾವನೋ ಒಬ್ಬನು ಜೀವವನ್ನು ಕಳೆದು

ಕೊಳ್ಳುವ ಕಾರ್ಯದಲ್ಲಿ ತೊಡಗಿದ್ದಾನೆ! ತನ್ನಂತೆಯೇ ಈತನೂ ದುಃಖಿಯಾಗಿರಬೇಕೆಂದು ಅವನ ಬಳಿಗೆ ಬಂದು ರಾಕ್ಷಸನು 'ಅಯ್ಯಾ, ಜೀವವನ್ನು ತೆಗೆದುಕೊಳ್ಳುವಷ್ಟು ಸಂಕಟ ನಿನಗೇನು? ನಿನ್ನ ದುಃಖವನ್ನು ನನಗೆ ತಿಳಿಸು. ನಮ್ಮ ಸುಖದುಃಖಗಳನ್ನು ಹಿತವರಲ್ಲಿ ಹೇಳಿಕೊಂಡರೆ ಅದು ನಮ್ಮ ಮನಸ್ಸಿಗೆ ಸಮಾಧಾನವನ್ನು ತರುವುದು' ಎಂದನು.

ಅದಕ್ಕೆ ಆ ಪುರುಷನು 'ಸ್ವಾಮಿ, ಭಾಗ್ಯಹೀನನಾದ ನನ್ನ ವೃತ್ತಾಂತವನ್ನು ತಾವು ಏಕೆ ಕೇಳುವಿರಿ? ಇದರಿಂದ ನಿಮಗೇನು ಫಲ? ಆದರೂ ನಿಮಗೆ ಅಷ್ಟು ಕುತೂಹಲವಿದ್ದರೆ ಹೇಳುವೆನು ಕೇಳಿ. ಪಾಟಲಿಪುರದಲ್ಲಿ ವಿಷ್ಣುದಾಸನೆಂಬ ಒಬ್ಬ ವರ್ತಕನಿದ್ದಾನೆ. ಈ ನನ್ನ ಮಿತ್ರನು ಈ ಊರಿನ ರತ್ನಪಡಿ ವರ್ತಕನಾದ ಚಂದನದಾಸನ ಸ್ನೇಹಿತ. ಅಮಾತ್ಯರಿಗೆ ಪರಮಮಿತ್ರನಾದ ಚಂದನದಾಸನು ತನ್ನ ಮನೆಯಲ್ಲಿದ್ದ ರಾಕ್ಷಸನ ಹೆಂಡತಿ ಮಕ್ಕಳನ್ನು ಚಾಣಕ್ಯನಿಗೆ ಒಪ್ಪಿಸದಿರಲು ಈ ದಿನ ಚಂದನದಾಸನನ್ನು ಚಾಣಕ್ಯನ ಅಪ್ಪಣೆಯಂತೆ ಶೂಲಕ್ಕೇರಿಸುತ್ತಾರೆ. ಇದನ್ನು ನೋಡಲಾರದೆ ನನ್ನ ಮಿತ್ರನು ತನ್ನೆಲ್ಲ ಆಸ್ತಿಯನ್ನು ದೀನಾನಾಥರಿಗೆ ಕೊಟ್ಟು ಅಗ್ನಿ ಪ್ರವೇಶಮಾಡಲು ನಿಶ್ಚೈಯಿಸಿದ್ದಾನೆ. ಅವನನ್ನು ನಿಲ್ಲಿಸುವುದಕ್ಕೆ ಉಪಾಯಗಾಣದೆ ನನ್ನ ಮಿತ್ರನ ಸಾವನ್ನು ಕೇಳುವುದಕ್ಕಿಂತ ಮುಂಚೆ ಜೀವವನ್ನು ಕಳೆದುಕೊಳ್ಳುತ್ತೇನೆ. ಇನ್ನು ನಾನು ತಡಮಾಡಕೂಡದು' ಎಂದನು.

ದೈವವು ಈಗ ರಾಕ್ಷಸನ ದುಃಖದ ಹೆಬ್ಬಾಗಿಲನ್ನೇ ತೆರೆಯಿತು. ಏನೋ ಪ್ರಮಾದ ಬಂತು; ಕಾರ್ಯಮಿಂಚುವುದಕ್ಕೆ ಮೊದಲೇ ಚಂದನದಾಸನನ್ನು ಬಿಡಿಸಬೇಕೆಂದೆಣಿಸಿ ರಾಕ್ಷಸನು 'ಅಯ್ಯಾ, ನೀನು ಜೀವವನ್ನು ಕಳೆದುಕೊಳ್ಳಬೇಡ. ಈಗಲೇ ಹೋಗಿ ನಿನ್ನ ಮಿತ್ರನ ಯತ್ನವನ್ನು ನಿಲ್ಲಿಸು. ಈ ಖಡ್ಗದಿಂದಲೇ ನಾನು ಚಂದನದಾಸನನ್ನು ಬಿಡಿಸುವೆನು' ಎಂದು ವೀರವಾಣಿಯಿಂದ ನುಡಿದನು.

ಪುರುಷ—ಸ್ವಾಮಿ, ಚಂದನದಾಸನಿಗೆ ಆಪದ್ಬಂಧುಗಳಾಗಿ ಬಂದಿರುವ ತಮ್ಮನ್ನು ನಾನು ಯಾರೆಂದು ತಿಳಿಯಲಿ?

ರಾಕ್ಷಸ – ಅಯ್ಯಾ ಸ್ನೇಹಿತ, ನಂದರನ್ನು ಕಳೆದುಕೊಂಡು, ಮಿತ್ರ

ರನ್ನು ಕಷ್ಟಕ್ಕೆ ಸಿಲುಕಿಸಿ, ದಯಾರಹಿತನಾಗಿ ತೊಳಲುತ್ತಿರುವ ನನ್ನನ್ನು ರಾಕ್ಷಸನೆಂದು ತಿಳಿ.

ಪುರುಷ—(ಕೊರಳಿಗೆ ಹಾಕಿದ ಹಗ್ಗವನ್ನು ತೆಗೆದುಹಾಕಿ) ಅಮಾತ್ಯರೇ, ನಿಮ್ಮಿಂದ ನಮ್ಮ ಕಷ್ಟಗಳು ತೊಲಗಿದುವು. ನನ್ನ ಸಂಶಯ ದೂರವಾಯಿತು. ಆದರೂ ತಮ್ಮಲ್ಲಿ ನನ್ನದೊಂದು ಅರಿಕೆ. ನೀವು ಈ ಸಮಯದಲ್ಲಿ ಹಿರಿದ ಕತ್ತಿಯೊಡನೆ ಹೋದರೆ ಚಂದನದಾಸ ನಿಗೆ ಕ್ಷೇಮವುಂಟಾಗುವುದಿಲ್ಲ. ಇದರಿಂದ ಪ್ರಮಾದವೇ ಉಂಟೆಂದು ತೋರುತ್ತದೆ. ಏಕೆಂದರೆ ಹಿಂದೆ ಶಕಟದಾಸನನ್ನು ಶೂಲಕ್ಕೇರಿಸು ವಾಗ ಯಾರೋ ಹಿರಿದ ಕತ್ತಿಯೊಡನೆ ಅವನನ್ನು ಬಿಡಿಸಿಕೊಂಡು ಹೋದರು. ಇದರಿಂದ ಕೋಪಗೊಂಡ ಚಾಣಕ್ಯನು ಕಟುಕರನ್ನು ಕೊಲ್ಲಿಸಿದನು. ಅಂದಿನಿಂದ ಕಟುಕರು ವಧ್ಯಸ್ಥಾನದ ಬಳಿ ಎಚ್ಚರಿಕೆ ಯಿಂದಿರುತ್ತಾರೆ. ಯಾರಾದರೂ ಕತ್ತಿಯೊಡನೆ ಅಲ್ಲಿ ಸುಳಿದರೆ ತಕ್ಷ ಣವೇ ಬಂದಿಯನ್ನು ಸಂಹರಿಸಿ, ಖಡ್ಗಹಸ್ತನಾದವನನ್ನು ಚಾಣಕ್ಯನ ಬಳಿಗೆ ಕರೆದೊಯ್ಯುತ್ತಾರೆ. ಆದ್ದರಿಂದ ನೀವು ಚಂದನದಾಸನನ್ನು ಬಿಡಿಸುವುದು ಸತ್ಯವಾದರೆ ವಧ್ಯಸ್ಥಾನದ ಬಳಿ ಹಿರಿದ ಕತ್ತಿಯೊಡನೆ ಹೋಗುವುದು ಅಪಾಯಕರ. ತಮಗೆ ಹೆಚ್ಚಾಗಿ ಹೇಳಲು ನಾನು ಶಕ್ತನಲ್ಲ'

ಇದನ್ನು ಕೇಳಿ ರಾಕ್ಷಸನು ತನ್ನ ಮನಸ್ಸಿನಲ್ಲಿ 'ಚಾಣಕ್ಯನ ತಂತ್ರದ ನೆಲೆಯೇ ಗೊತ್ತಾಗುವುದಿಲ್ಲವಲ್ಲ! ಮೊದಲು ಶಕಟದಾಸನನ್ನು ಶೂಲಕ್ಕೇರಿಸುವಂತೆ ನಿಯಮಿಸಿ ಸಂಗಡವೇ ಅವನನ್ನು ಬಿಡಿಸಲು ಸಿದ್ಧಾರ್ಥಕನನ್ನು ಕಳುಹಿಸಿದನೆಂದು ಯೋಚಿಸಲೇ? ಹಾಗಾದರೆ ಶಕಟ ದಾಸನನ್ನು ಬಿಟ್ಟು ಕಟುಕರನ್ನೇಕೆ ಸಂಹರಿಸಬೇಕು? ಹಗೆತನವನ್ನು ಸಾಧಿಸಲು ಶಕಟದಾಸನನ್ನು ವಧ್ಯಸ್ಥಾನಕ್ಕೆ ಕಳುಹಿಸಿದನೆಂದೇ ಇಟ್ಟು ಕೊಳ್ಳೋಣ. ಅದೃಷ್ಟದಿಂದ ತಪ್ಪಿಸಿಕೊಂಡು ನನ್ನ ಬಳಿಗೆ ಬಂದು ತನಗೆ ಒದಗಿದ ವಿಪತ್ತನ್ನು ಪರಿಹಾರಮಾಡಿದ ಸಿದ್ಧಾರ್ಥಕನಿಗೆ ಉಚಿತ ವನ್ನು ಕೊಡಿಸಿದೆನೆಂದು ನಿಶ್ಚೈಸಲೇ? ಹಾಗಾದರೆ ಚಂದ್ರಗುಪ್ತನ ಕಾರ್ಯಕ್ಕೆ ಅನುಕೂಲವಾದ ಕಪಟಲೇಖನವನ್ನು ಸಿದ್ಧಾರ್ಥಕನ ಕೈಯಲ್ಲಿ ಕೊಡಲು ಕಾರಣವಿಲ್ಲ. ಅದು ಏನೇ ಆಗಲಿ, ನನಗಾಗಿ

ಶೂಲವನ್ನೇರುವ ಚಂದನದಾಸನನ್ನು ಬಿಡಿಸುವುದೇ ಧರ್ಮ' ಎಂದು ಯೋಚಿಸಿ, ಖಡ್ಗವನ್ನು ಬಿಸುಟು, ವಧ್ಯಸ್ಥಾನದ ಮಾರ್ಗವಾಗಿ ಹೊರಟು ಹೋದನು. ಈ ಸಮಾಚಾರವನ್ನು ಚಾಣುಕ್ಯನಿಗೆ ತಿಳಿಸಲು ಪಶು ಲೋಮನು ಓಡಿಹೋದನು.

ಇತ್ತ ಚಾಣಕ್ಯನ ಅಪ್ಪಣೆಯಂತೆ ಚಂದನನಾಸನ ಮೆರವಣಿಗೆ ರಾಜಬೀದಿಯ ಮಾರ್ಗವಾಗಿ ವಧ್ಯಸ್ಥಾನದ ಕಡೆಗೆ ಹೊರಟಿತು. ರಾಜಬೀದಿಯ ಇಕ್ಕೆಲದಲ್ಲಿಯೂ ಈ ನೋಟವನ್ನು ನೋಡಲು ಕಣ್ಣೀರು ಸುರಿಸುತ್ತ ಪುರ ಜನರು ನೆರೆದಿದ್ದರು. 'ಚಂದನದಾಸ ಸೆಟ್ಟಿಗೆ ಏನು ಗತಿ ಬಂತು! ಹಾಳು ಚಾಣಕ್ಯನಿಗೆ ಕರುಣೆಯೇ ಇಲ್ಲವಲ್ಲ! ಇನ್ನೆಷ್ಟು ಜನರನ್ನು ಆಹುತಿ ತೆಗೆದುಕೊಳ್ಳುವನೋ ಈ ಪಾಪಿ! ಕಳ್ಳನಂತೆ ಕೊರ ಳಿಗೆ ಕಣಿಗಲೆಯ ಹೂವಿನ ಸರವನ್ನು ಹಾಕಿ ಚಂಡಾಲರು ಇವನನ್ನು ಶೂಲಕ್ಕೇರಿಸಲು ಒಯ್ಯುತ್ತಿದ್ದಾರೆ. ಸೆಟ್ಟಿಯನ್ನು ಹಿಂಬಾಲಿಸಿ ರೋದಿ ಸುತ್ತ ಹೋಗುತ್ತಿರುವ ಅವನ ಹೆಂಡತಿ ಮಗನಿಗೆ ದಿಕ್ಕಾರು? ಸ್ನೇಹಿತನಿಗಾಗಿ ಪ್ರಾಣಕೊಡಲು ಸಿದ್ಧನಾಗಿರುವ ಈತನು ಕಲಿಯುಗದ ಶಿಬಿಯಲ್ಲದೆ ಮತ್ತೇನು?' ಎಂದು ಜನರೆಲ್ಲ ಚಂದನದಾಸನನ್ನು ಹೊಗಳುವವರೇ. ಮೆರವಣಿಗೆ ವಧ್ಯಸ್ಥಾನಕ್ಕೆ ಬರಲು ಚಂದನದಾಸನು ಹೆಂಡತಿಯನ್ನು ನೋಡಿ 'ಪ್ರಿಯೆ ನನಗಾಗಿ ಏಕೆ ಅಳುವೆ? ಮಿತ್ರನಿ ಗಾಗಿ ನಾನು ಪ್ರಾಣಬಿಡುತ್ತಿದ್ದೇನೆ. ನೀನು ನನ್ನ ಮೇಲಣ ಆಸೆ ಯನ್ನು ಬಿಟ್ಟು ಮಗುವಿನೊಡನೆ ಹಿಂದಿರುಗು' ಎಂದನು. ಆಗ ಒಬ್ಬ ಕಟುಕನು 'ಸೆಟ್ಟಿ, ಶೂಲ ನೆಟ್ಟಿದೆ. ನಿನ್ನ ಒಡವೆಗಳು ನಮಗೆ ಸಲ್ಲ ಬೇಕು. ಅವುಗಳನ್ನು ನಮಗೆ ಕೊಟ್ಟು, ನಿನ್ನವರನ್ನು ಹಿಂದಕ್ಕೆ ಕಳುಹು' ಎಂದನು.

ಕಟುಕನ ಮಾತನ್ನು ಕೇಳಿ ಚಂದನದಾಸನ ಹೆಂಡತಿ ಕಣ್ಣೀರು ತುಂಬಿದಳು. ಆಕೆಯನ್ನು ನೋಡಿ ಚಂದನದಾಸನು 'ಪ್ರಿಯೆ, ಈ ಬಾಲ ಕನು ಲೋಕವ್ಯವಹಾರವನ್ನರಿತವನಲ್ಲ. ಇವನನ್ನು ಕಾಪಾಡಿ ಮುಂದಕ್ಕೆ ತರುವ ಭಾರ ನಿನ್ನದಾಗಿದೆ. ನೀನಿನ್ನು ಹಿಂದಿರುಗು' ಎಂದು ಮಗನ ತಲೆಯನ್ನು ಸವರುತ್ತ ನುಡಿದನು.

ಚಂದನದಾಸನ ಹೆಂಡತಿ–ನಾಥ, ಪತಿಯನ್ನು ಹಿಂಬಾಲಿಸುವುದು

ಸತಿಗೆ ಪರಮ ಧರ್ಮ. ಸೃಷ್ಟಿಸಿದ ದೇವರೇ ಈ ಮಗುವನ್ನು ಕಾಪಾಡುವನು. ನಿನ್ನನ್ನು ಅಗಲಿ ನಾನು ಒಂದು ನಿಮಿಷವೂ ಇರಲಾರೆ. (ಮಗುವನ್ನು ನೋಡಿ)ಮಗು, ನಿಮ್ಮ ತಂದೆಯ ಮುಖವನ್ನು ಚೆನ್ನಾಗಿ ನೋಡಿ, ಆತನು ಹೇಳುವ ಬುದ್ಧಿವಾದವನ್ನು ಗ್ರಹಿಸಿಕೋ.

ಚಂದನದಾಸನ ಮಗ (ತಂದೆಯ ಕಾಲಮೇಲೆ ಬಿದ್ದು ಹೊರಳುತ್ತ)—ಅಪ್ಪಾ, ನೀನು ಹೋದ ಬಳಿಕ ಇನ್ನಾರನ್ನು ನಾನು ತಂದೆಯೆಂದು ಕರೆಯಲಿ? ಯಾರಿಗೆ ನಮಸ್ಕರಿಸಲಿ? ನಿನ್ನ ಅಗಲಿಕೆಯ ನೋವನ್ನು ಹೇಗೆ ಸಹಿಸಲಿ? ನಾನು ಜೀವಿಸುವ ಬಗೆ ಹೇಗೆ?

ಮಗನ ಗೋಳಾಟವನ್ನು ನೋಡಿ ಚಂದನದಾಸನು 'ಮಗು, ಚಾಣಕ್ಯನ ಹೆಸರು ಎಲ್ಲಿ ಕೇಳಿ ಬರುವುದಿಲ್ಲವೋ ಆ ದೇಶಕ್ಕೆ ಹೋಗಿ ಅಲ್ಲಿ ಜೀವಿಸಿಕೊಂಡಿರು.' ಎಂದು ಮಗನನ್ನು ಸಂತೈಸಿದನು.

ಈ ಗೋಳಾಟ ಮುಗಿಯದುದನ್ನು ನೋಡಿ ಚಂಡಾಲರು 'ಎಲಾ ಸೆಟ್ಟಿ, ಶೂಲ ಸಿದ್ಧವಾಗಿದೆ. ಮುಂದೆ ಬಾ.' ಎಂದು ಚಂದನದಾಸನನ್ನು ತ್ವರೆಪಡಿಸಿದರು.

'ಅಣ್ಣಂದಿರಾ, ಪತಿಯನ್ನು ಶೂಲಕ್ಕೆ ಹಾಕಬೇಡಿ, ರಕ್ಷಿಸಿ' ಎಂದು ಚಂದನದಾಸನ ಹೆಂಡತಿ ಗೋಳಿಡಲು ಚಂದನದಾಸನು 'ಪ್ರಿಯೆ, ಇನ್ನೊಬ್ಬರ ಅಪ್ಪಣೆಯನ್ನು ಪಾಲಿಸುವ ಈ ಚಂಡಾಲರನ್ನು ಬೇಡಿದರೆ ಏನುತಾನೆ ಪ್ರಯೋಜನ? ನಿಮ್ಮನ್ನು ಇನ್ನುಮುಂದೆ ದೇವರೇ ಕಾಪಾಡುವನು. ಕಂದಾ, ನೀನಿನ್ನು ಇಲ್ಲಿರಬೇಡ, ನಡೆ. ತಾಯಿಯನ್ನು ಸಂತೈಸುತ್ತಾ ಹಿಂದಕ್ಕೆ ಕರೆದುಕೊಂಡುಹೋಗು.' ಎಂದು ಧೈರ್ಯದಿಂದ ನುಡಿದನು.

ತಂದೆಯ ಮಾತನ್ನು ಕೇಳಿ ಮಗನು 'ಅಪ್ಪಾ, ಪರೋಪಕಾರಕ್ಕಾಗಿ ತಮ್ಮ ಸರ್ವಸ್ವವನ್ನೂ ವ್ಯಯಮಾಡಿ ಕೀರ್ತಿಯನ್ನು ಪಡೆದವರುಂಟು. ನೀನಾದರೋ ಇನ್ನೊಬ್ಬರಿಗಾಗಿ ಪ್ರಾಣವನ್ನೇ ಕೊಡುವುದರಿಂದ ನಿನಗೆ ಇಹಪರಗಳಲ್ಲಿ ಶಾಶ್ವತವಾದ ಕೀರ್ತಿಸುಖಗಳುಂಟಾದುವು. ನಾವು ಮಾತ್ರ ಅನಾಥರಾದೆವು.' ಎಂದು ಕಣ್ಣೀರು ತುಂಬಿದನು.

ಚಂದನದಾಸನನ್ನು ಶೂಲಕ್ಕೆ ಹತ್ತಿಸಲು ಅಣಿಮಾಡಿ, ಚಂಡಾಲರು ಅವನ ಹೆಂಡತಿ ಮಕ್ಕಳನ್ನು ಕುರಿತು 'ಇನ್ನು ಯಾರೂ ಇಲ್ಲಿರ

ಕೂಡದು. ಹೋಗಿ' ಎಂದು ಗರ್ಜಿಸಲು, ಚಂದನದಾಸನ ಹೆಂಡತಿ ಎದೆ ಚಚ್ಚಿಕೊಳ್ಳುತ್ತ, ಭೂಮಿಯಲ್ಲಿ ಬಿದ್ದು ಹೊರಳುತ್ತಾ 'ಅಪ್ಪಾ, ನನ್ನ ಗಂಡನನ್ನು ಉಳಿಸಿ' ಎಂದು ಅಳಲಾರಂಭಿಸಿದಳು. ಇನ್ನೇನು? ಇನ್ನೆರಡು ನಿಮಿಷಗಳಲ್ಲಿ ಚಂದನದಾಸನ ಅವತಾರ ಮುಗಿಯುವುದು.

ಇದ್ದಕ್ಕಿದ್ದ ಹಾಗೆ 'ತಾಯೇ, ಅಂಜದಿರು; ಶೋಕವನ್ನು ಬಿಡು. ನಿನ್ನ ಗಂಡನ ಜೀವವನ್ನು ಉಳಿಸುವೆನು.' ಎಂಬ ಮಾತು ಕೇಳಿ ಬಂತು. ಚಂದನದಾಸನು ಬೆಚ್ಚಿ ನೋಡಲಾಗಿ ಅಮಾತ್ಯರು ಕಾಣಿಸಿಕೊಂಡರು. ರಾಕ್ಷಸನು ಚಂಡಾಲರಿಗೆ 'ಎಲಾ, ನಂದರನ್ನು ಕಳೆದುಕೊಂಡು ಮಿತ್ರನನ್ನು ಆಪತ್ತಿಗೆ ಗುರಿಮಾಡಿದ ಪಾಪಿಯಾದ ನನ್ನನ್ನು ಶೂಲಕ್ಕೇರಿಸಬೇಕು. ಹಾಗಲ್ಲದೆ ನಿರಪರಾಧಿಯಾದ ಚಂದನದಾಸನನ್ನು ಶೂಲಕ್ಕೇರಿಸುವುದೇ? ನನಗಾಗಿ ಚಂದನದಾಸನು ಶೂಲಕ್ಕೇರುವನಲ್ಲವೆ? ಅವನನ್ನು ಬಿಟ್ಟುಬಿಡಿ. ನನ್ನನ್ನು ಶೂಲಕ್ಕೇರಿಸಿ' ಎಂದನು. ಈ ಮಾತನ್ನು ಕೇಳಿ ಚಂದನದಾಸನು 'ಅಮಾತ್ಯರೇ, ಇದೇನು ಮಾಡಿದಿರಿ? ಇದುವರೆಗೂ ನೀವು ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಯಿತಲ್ಲ!' ಎನಲು ರಾಕ್ಷಸನು 'ಅಯ್ಯಾ, ಮಿತ್ರ! ನಿನ್ನ ನಡತೆಯಲ್ಲಿ ಒಂದು ಭಾಗದ ಅನುಕರಣ ಇದು. ಅದಿರಲಿ. ಚಂಡಾಲರೇ, ನಾನು ಶೂಲಕ್ಕೇರಲು ಸಿದ್ಧನಾಗಿದ್ದೇನೆ. ಈ ಸಮಾಚಾರವನ್ನು ಚಾಣಕ್ಯ ಚಂದ್ರಗುಪ್ತರಿಗೆ ತಿಳಿಸಿ' ಎಂದನು.

ರಾಕ್ಷಸನ ಮಾತಿಗೆ ಚಂಡಾಲರು 'ಅಮಾತ್ಯರೇ, ಪ್ರಭುಗಳ ಅಪ್ಪಣೆಯಿಲ್ಲದೆ ತಾವು ಶೂಲವನ್ನೇರಲಾಗದು. ಚಂದನದಾಸನನ್ನೂ ನಾವು ಬಿಡುವಂತಿಲ್ಲ. ಸ್ನೇಹಿತನಲ್ಲಿ ನಿಮಗಷ್ಟು ಮಮತೆಯಿದ್ದರೆ ಅರಸರಿಂದ ಅಪ್ಪಣೆಯನ್ನು ಹೊರಡಿಸಿ. ಅಲ್ಲಿಯವರಿಗೆ ನಾವು ಕೈ ತಡೆಯುವೆವು. ಚಂದನದಾಸನನ್ನು ಇಲ್ಲಿಯೇ ನಿಲ್ಲಿಸಿ ನಾವೇ ನಿಮ್ಮನ್ನು ಅಲ್ಲಿಗೆ ಕರೆದೊಯ್ಯುವೆವು' ಎಂದರು. ವಿಧಿಯಿಲ್ಲದೆ ರಾಕ್ಷಸನು ಒಪ್ಪಿಕೊಳ್ಳಲು ಚಂಡಾಲರು ಹೆಂಡತಿಮಗನೊಡನಿದ್ದ ಚಂದನದಾಸನನ್ನು ಮರದ ನೆರಳಿನಲ್ಲಿ ಕುಳ್ಳಿರಿಸಿ ಅಮಾತ್ಯನೊಡನೆ ಚಾಣಕ್ಯನ ಆಶ್ರಮಕ್ಕೆ ಬಂದರು. ಅಷ್ಟರಲ್ಲೇ ಮಲಯಕೇತುವನ್ನು ಹಿಡಿದು ತರುತ್ತಿದ್ದ ಸೈನ್ಯದ ಹರುಷದ

ಧ್ವನಿ ಕೇಳಿ ಬಂತು. ಅಮಾತ್ಯನಿಗೆ ಚಾಣಕ್ಯನ ತಂತ್ರದ ವಿಷಯದಲ್ಲಿ ಆಶ್ಚರ್ಯದ ಮೇಲೆ ಆಶ್ಚರ್ಯ.

ಚಾಣಕ್ಯನ ಆಶ್ರಮಕ್ಕೆ ರಾಕ್ಷಸನೊಡನೆ ಚಂಡಾಲರು ಬಂದು 'ಅಮಾತ್ಯರು ತಮ್ಮ ನೀತಿಪಾಶದಿಂದ ಕಟ್ಟುವಡೆದು, ತಮ್ಮ ದರ್ಶನಕ್ಕೆ ಬಂದಿದ್ದಾರೆ. ಈ ವಿಷಯವನ್ನು ಪೂಜ್ಯರಿಗೆ ತಿಳಿಸಿ.' ಎಂದು ಶಿಷ್ಯನಿಗೆ ಬಿನ್ನೈಸಿಕೊಂಡರು. ಈ ವಿಷಯವನ್ನು ಶಿಷ್ಯನು ಚಾಣಕ್ಯನಿಗೆ ತಿಳಿಸಲು, ಚಾಣಕ್ಯನು ದೂರದಿಂದಲೇ ಅಮಾತ್ಯನನ್ನು ನೋಡಿ 'ಈತನೇ ಮಹಾಪುರುಷನಾದ ರಾಕ್ಷಸ' ಎಂದು ಎದೆ ತುಂಬಿದ ಸಂತೋಷದಿಂದ ಹೊರಗೆ ಬಂದು ದೂತರಿಗೆ ಈ ರೀತಿ ನುಡಿದನು—

ಚಾಣಕ್ಯ—ಎಲಾ, ಧಗಧಗಿಸುವ ಬೆಂಕಿಯನ್ನು ಬಟ್ಟೆಯ ಸೆರಗಿನಲ್ಲಿ ಕಟ್ಟಿದವರಾರು? ಚಂಡಮಾರುತನನ್ನು ಹಗ್ಗದಿಂದ ಬಿಗಿದವರಾರು? ಕ್ರೂರವಾದ ಸಿಂಹವನ್ನು ಪ್ರೈದಡವಿ ತಂದವರಾರು?

ಚಂಡಾಲರು—ನಂದಕುಲಗಿರಿವಜ್ರಾಯುಧರೂ, ಮೌರ್ಯಕುಲ ಪ್ರತಿಷ್ಠಾಪನಾಚಾರ್ಯರೂ ಆದ ತಾವು ಮತ್ತು ತಮ್ಮ ನೀತಿಕುಶಲತೆ.

ಚಾಣಕ್ಯ—ಹಾಗಲ್ಲ. ನಂದಕುಲ ವಿದ್ವೇಷಿಯಾದ ದೈವವೇ ಇವರನ್ನು ಇಲ್ಲಿಗೆ ಕರೆತಂದಿತು. ಅಮಾತ್ಯರೇ, ವಿಷ್ಣುಗುಪ್ತನು ಅಭಿವಂದಿಸುತ್ತಾನೆ.

ರಾಕ್ಷಸನು 'ಈತನೇ ದುರಾತ್ಮನಾದ ಚಾಣಕ್ಯನು!' ಎಂದು ಕೌಟಲ್ಯನನ್ನು ದಿಟ್ಟಿಸಿ ನೋಡಿದನು. ತಕ್ಷಣವೇ ಮನಸ್ಸಿನಲ್ಲಿ 'ಛೇ, ಈತನು ನಿಜವಾಗಿಯೂ ಮಹಾತ್ಮನೇ ಸರಿ. ಅಭ್ಯುದಯಕಾಲದಲ್ಲಿಯೂ ವಿದ್ಯಾನಿಧಿಯಾದ ಈತನಿಗೆ ಎಂಥ ವಿರಕ್ತಿ! ಈ ತೇಜಸ್ವಿಯನ್ನು ಅವಮಾನ ಪಡಿಸಿದ್ದರಿಂದಲೇ ನಂದರು ಹತರಾದರು. ಈತನ ಸಾಹಸವನ್ನು ಮೆಚ್ಚದಿದ್ದರೆ ನನ್ನಲ್ಲಿ ಮಾತ್ಸರ್ಯದೋಷವುಂಟಾಗುವುದು' ಎಂದುಕೊಂಡು 'ಆರ್ಯರೇ, ಚಂಡಾಲರ ಸಹವಾಸದಿಂದ ನಾನು ದೂಷಿತನಾಗಿದ್ದೇನೆ. ತಾವು ನಮಸ್ಕರಿಸಕೂಡದು.' ಎಂದನು.

ಚಾಣಕ್ಯನು ಸ್ವಲ್ಪ ನಕ್ಕು 'ಅಮಾತ್ಯರೇ, ಇವರು ಚಂಡಾಲರಲ್ಲ. ಚಂಡಾಲ ವೇಷಧಾರಿಗಳು. ಈ ಸಿದ್ಧಾರ್ಥಕನ ಪರಿಚಯ ತಮಗಿದ್ದೇ ಇದೆ. ಮತ್ತೊಬ್ಬನು ಸಮಿದ್ಧಾರ್ಥಕ. ಈ ದಿನ ವನದಲ್ಲಿ ತಮಗೆ

ಕಾಣಿಸಿಕೊಂಡವನು ಪಶುಲೋಮ. ಕ್ಷಪಣಕನು ನನ್ನೊಡನಾಡಿಯಾದ ಇಂದುಶರ್ಮ. ಈ ಲೇಖನ, ಈ ಪೆಟ್ಟಿಗೆ— ಇವೆಲ್ಲ ನನ್ನ ತಂತ್ರ. ಭಾಗುರಾಯಣ ಭದ್ರಭಟಾದಿಗಳು ನನ್ನ ಅಪ್ಪಣೆಯಂತೆ ಮಲಯಕೇತುವಿನ ಬಳಿ ಇದ್ದರು. ಇದೆಲ್ಲವನ್ನೂ ನಿಮಗೆ ಚಂದ್ರಗುಪ್ತನ ಸಂಬಂಧವನ್ನುಂಟುಮಾಡಲು ನಾನೇ ಹೂಡಿದ ತಂತ್ರ." ಎಂದು ಎಲ್ಲವನ್ನೂ ವಿವರವಾಗಿ ತಿಳಿಸಿದನು. ಚಾಣಕ್ಯನ ಮಾತನ್ನು ಕೇಳಿ ಅಮಾತ್ಯನಿಗೆ ಶಕಟದಾಸನಲ್ಲಿದ್ದ ಸಂಶಯ ದೂರವಾಯಿತು.

ಚಾಣಕ್ಯನು ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಚಂದ್ರಗುಪ್ತನು ಅಲ್ಲಿಗೆ ಬಂದು ಅಮಾತ್ಯ ಚಾಣಕ್ಯರಿಗೆ ನಮಸ್ಕರಿಸಿದನು. ಸ್ವಾಮಿಭಕ್ತನಾದ ರಾಕ್ಷಸನ ಸ್ಥಿತಿ ಚಂದ್ರಗುಪ್ತನಿಗೆ ಹರಸುವಷ್ಟರ ಮಟ್ಟಿಗೆ ಇಳಿಯಿತು. ರಾಕ್ಷಸನು ಮನಸ್ಸಿನಲ್ಲಿ 'ಚಂದ್ರಗುಪ್ತನಲ್ಲಿ ಮೊದಲಿಂದಲೂ ಪ್ರಭುಲಕ್ಷಣಗಳಿದ್ದುವು. ಈತನಿಗೆ ತೇಜಸ್ವಿಯಾದ ಬ್ರಾಹ್ಮಣನ ನೆರೆ ಬೇರೆ ದೊರಕಿತು. ಹೀಗಾಗಿ ಸಲಗನಿಗೆ ಹಿಂಡಿನ ಒಡೆತನ ದೊರಕುವಂತೆ ರಾಜ್ಯಲಕ್ಷ್ಮಿ ಕೈಸೇರಿದಳು. ನಾನು ಮಾತ್ರ ಅಯೋಗ್ಯನನ್ನು ನೆಚ್ಚಿ ಕೆಟ್ಟೆ.' ಎಂದು ಯೋಚಿಸಿ ಚಂದ್ರಗುಪ್ತನಿಗೆ ಹರಸಿದನು.

ಚಾಣಕ್ಯ—ಅಮಾತ್ಯರೇ, ಚಂದನದಾಸನು ಬದುಕಬೇಕೆಂಬ ಆಸೆ ನಿಮಗುಂಟೋ?

ರಾಕ್ಷಸ—ಚಾಣಕ್ಯರೇ, ಅದಕ್ಕಾಗಿ ತಾನೇ ನಾನು ಇಷ್ಟು ಪ್ರಯತ್ನ ಮಾಡಿದ್ದು.

ಚಾಣಕ್ಯ—ಅಮಾತ್ಯರೇ, ಹಾಗಾದರೆ ಚಂದ್ರಗುಪ್ತನು ನಿಮ್ಮ ಪ್ರಾಣವನ್ನು ಬಯಸುವುದಿಲ್ಲ; ಆಲೋಚನೆಯನ್ನು ಬಯಸುತ್ತಾನೆ. ಈ ಸಚಿವಶಸ್ತ್ರವನ್ನು ಸ್ವೀಕರಿಸಿ, ಮಿತ್ರನ ಪ್ರಾಣವನ್ನು ಉಳಿಸಿ.

ರಾಕ್ಷಸ (ಮನಸ್ಸಿನಲ್ಲಿ) ಇದೇನು ಬಂತು? ನನ್ನ ಪರಮವೈರಿಯನ್ನು ನಾನು ಸೇವಿಸುವುದೇ? (ಪ್ರಕಾಶವಾಗಿ) ಆರ್ಯರೇ, ತಾವು ಧರಿಸಿದ ಶಸ್ತ್ರವನ್ನು ನಾನು ಹಿಡಿಯಲು ತಕ್ಕವನಲ್ಲ.

ಚಾಣಕ್ಯ—ಅಮಾತ್ಯರೆ, ಏನು ಮಾತಿದು? ಸಚಿವಶಸ್ತ್ರವನ್ನು ಹಿಡಿಯಲು ನಿಮಗಿಂತ ಯೋಗ್ಯರು ಇನ್ನಾರಿದ್ದಾರೆ? ನಿಮಗಾಗಿ ತಾನೆ ನಮ್ಮ ಸೇನೆಗಳು ಅನ್ನ ನೀರಿಲ್ಲದೆ ನಿಂತಲ್ಲಿ ನಿಲ್ಲದೆ ಬಳಲುತ್ತಿವೆ. ಅದೆಲ್ಲ

ಹಾಗಿರಲಿ. ನೀವು ಸಚಿವಶಸ್ತ್ರವನ್ನು ಸ್ವೀಕರಿಸಿದ ಹೊರತು ಚಂದನ ದಾಸನಿಗೆ ಬಿಡುಗಡೆ ದೊರಕದು

ರಾಕ್ಷಸ—ಆರ್ಯರೇ, ಮಿತ್ರನಿಗಾಗಿ ನಾನು ಈ ಸಚಿವಶಸ್ತ್ರ ವನ್ನು ಧರಿಸುವೆನು. ಪುರದ ಉದ್ಯಾನದಲ್ಲಿ ನಾನು ಕತ್ತಿಯನ್ನು ಬಿಸು ಟಾಗಲೇ ನಂದರಿಗೆ ನನ್ನ ಸೇವೆ ಸಂದುಹೋಯಿತು.

ಚಾಣಕ್ಯನು ಹಿಗ್ಗಿ ಚಂದ್ರಗುಪ್ತನಿಗೆ ‘ ಕುಮಾರ, ಅಮಾತ್ಯರು ನಿನ್ನ ಮೇಲೆ ಅನುಗ್ರಹ ಮಾಡಿದರು. ನಾನು ಧನ್ಯನಾದೆ. ನನ್ನ ಕೆಲಸ ಕೈಗೂಡಿತು. ನಿನ್ನ ಪಟ್ಟಾಭಿಷೇಕವನ್ನು ನೋಡಿ ತಪೋವನಕ್ಕೆ ಹೋಗು ವೆನು. ನಾಳೆ ಹುಣ್ಣಿಮೆ. ನಿನ್ನ ಪಟ್ಟಾಭಿಷೇಕ ನಡೆಯಲಿ.’ಎಂದನು.

ಅಷ್ಟರಲ್ಲೇ ಮಲಯಕೇತು ಅಲ್ಲಿಗೆ ಬಂದು ಚಾಣಕ್ಯರಾಕ್ಷಸರಿಗೆ ನಮಸ್ಕರಿಸಿದನು. ಚಂದ್ರಗುಪ್ತನು ರಾಜಕುಮಾರನನ್ನು ಆಲಿಂಗಿಸಿ ಕೊಂಡನು. ರಾಕ್ಷಸನ ಮನಸ್ಸಿನಲ್ಲಿದ್ದ ಸಂಶಯಗಳೆಲ್ಲ ಈಗ ಪರಿಹಾರ ವಾದುವು. ಮೆರವಣಿಗೆಗೆ ಎಲ್ಲವೂ ಸಿದ್ಧವಾಯಿತು. ಅಮಾತ್ಯ ಚಾಣ ಕ್ಯರು ಒಂದೇ ಪಲ್ಲಕ್ಕಿಯನ್ನೇರಿ ಕುಳಿತರು· ಮಲಯಕೇತು ಚಂದ್ರ ಗುಪ್ತರು ಮದ್ದಾನೆಯನ್ನೇರಿದರು. ಈ ವೇಳೆಗೆ ಅಲಂಕಾರದಿಂದ ಭೂಷಿತನಾದ ಚಂದನದಾಸನೂ ಬಂದು ಮೆರವಣಿಗೆಯೊಡನೆ ಸೇರಿ ದನು. ಪಾಟಲೀಪುರದಲ್ಲಿ ಇಂದು ಉತ್ಸವದ ಮೇಲೆ ಉತ್ಸವ. ಮಂಗಳ ವಾದ್ಯಗಳು ಮೊರೆಯುತ್ತಿರಲು ಮೆರವಣಿಗೆ ನಿಧಾನವಾಗಿ ರಾಜಬೀದಿ ಗಳ ಮೂಲಕ ಅರಮನೆಯ ಕಡೆಗೆ ಹೊರಟಿತು.

## ೩೦ ಪಟ್ಟಾಭಿಷೇಕ

ಇಂದು ಹುಣ್ಣಿಮೆ. ಚಂದ್ರಗುಪ್ತಮಹಾರಾಜನ ಪಟ್ಟಾಭಿಷೇ ಕಕ್ಕೆ ಗೊತ್ತಾದ ಶುಭದಿವಸ. ಅಮಾತ್ಯರಾಕ್ಷಸನ ಅಪ್ಪಣೆಯಂತೆ ನಗರ ವೆಲ್ಲ ಸಿಂಗಾರವಾಗಿದೆ. ಪಟ್ಟಾಭಿಷೇಕ ಮಹೋತ್ಸವದಲ್ಲಿ ಭಾಗವಹಿ ಸಲು ಪುರಜನರು ಉಟ್ಟು ತೊಟ್ಟು ನಲಿಯುತ್ತಿದ್ದಾರೆ. ಎಲ್ಲರ ಮುಖ ಗಳೂ ಹರುಷದಿಂದ ಅರಳಿವೆ. ಪಾಟಲೀಪುತ್ರನಗರಕ್ಕೆ ಹೊಸ ಕಳೆ ಬಂದಿದೆ.

ಶುಭಮುಹೂರ್ತ ಸಾರಿ ಬಂತು. ಅರಮನೆಯ ಪ್ರಾಕಾರದಲ್ಲಿ

ಮಂಗಳ ವಾದ್ಯಗಳು ಮೊಳಗುತ್ತಿರಲು ಚಾಣಕ್ಯನು ಚಂದ್ರಗುಪ್ತನನ್ನು ತಾನೇ ಅಲಂಕರಿಸಿ ಅವನ ಕೈಹಿಡಿದು ಕಲ್ಯಾಣಮಂಟಪಕ್ಕೆ ಕರೆ ತಂದನು. ಆಗ ವಿಪ್ರರ ವೇದಘೋಷ ಕೇಳಿ ಬರುತ್ತಿರಲು, ಸಾಮಂತ ರಾಜರಿಂದ ಪರಿವೃತನಾದ ಚಂದ್ರಗುಪ್ತನು ಹೆಂಡತಿಯೊಡನೆ ಆರ್ಯ ಚಾಣಕ್ಯರ ಪಾದವನ್ನು ತೊಳೆದು, ಆ ನೀರನ್ನು ತಾವಿಬ್ಬರೂ ತಲೆ ಯಲ್ಲಿ ತಳೆದು 'ಆರ್ಯರೇ, ತಮ್ಮ ಅನುಗ್ರಹದಿಂದ ನನಗಿಂದು ಈ ಸಾರ್ವಭೌಮಪದವಿ ದೊರಕಿತು. ನಾನು ಧನ್ಯನಾದೆ. ಮೌರ್ಯ ಸಾಮ್ರಾಜ್ಯವನ್ನು ಸ್ಥಾಪನೆಮಾಡಿದ ಕೀರ್ತಿ ತಮ್ಮದು. ತಮ್ಮ ಆಶೀ ರ್ವಾದ ನನಗೆ ಯಾವಾಗಲೂ ರಕ್ಷೆಯಾಗಿರಲಿ' ಎಂದು ಚಾಣಕ್ಯ ರಾಕ್ಷಸ ರಿಬ್ಬರಿಗೂ ನಮಸ್ಕರಿಸಿದನು. ಆ ಸಮಯದಲ್ಲಿ ಭಾಗುರಾಯಣನು ಬೆಳ್ಗೊಡೆಯನ್ನು ಹಿಡಿಯಲು, ಭದ್ರಭಟಾದಿಗಳು ಚಾಮರವಿಕ್ಕಲು ಚಾಣಕ್ಯನು ಚಂದ್ರಗುಪ್ತನನ್ನು ಸಿಂಹಾಸನದಲ್ಲಿ ಕೂರಿಸಿ ಬ್ರಾಹ್ಮಣ ರಿಂದ ಅಭಿಷೇಕ ಮಾಡಿಸಿದನು. ಆಗ ತಂಗಾಳಿ ಬೀಸಿತು. ದಿಕ್ಕುಗಳು ಪ್ರಸನ್ನವಾದುವು. ದೀನಾನಾಥರ ಬಡತನ ಹರಿಯಿತು. ಬಡಬಗ್ಗರಿಗೆ ಅನ್ನದಾನ, ವಸ್ತ್ರದಾನಗಳು ನಡೆದುವು. ಬಂದಿಗಳಿಗೆ ಬಿಡುಗಡೆ ದೊರೆ ಯಿತು. ಕೈಕೊಂಡ ಕೆಲಸ ಸಂಪೂರ್ಣವಾಗಿ ಕೈಗೂಡಿದುದಕ್ಕಾಗಿ ಚಾಣಕ್ಯನಿಗೆ ಅಂದು ಅತಿಶಯವಾದ ಸಂತೋಷ. ಸಂಜೆಯ ಮೆರ ವಣಿಗೆಯಿಂದ ಚಂದ್ರಗುಪ್ತ ಮಹಾರಾಜನ ಪಟ್ಟಾಭಿಷೇಕಮಹೋತ್ಸವ ಮುಗಿಯಿತು.

ಮಾರನೆಯ ದಿನ ಚಾಣಕ್ಯನು ಚಂದ್ರಗುಪ್ತನಿಗೆ 'ವತ್ಸ, ನಿನಗೆ ಅಮಾತ್ಯರು ಮಂತ್ರಿಯಾಗಿ ದೊರಕಿದರು. ಇನ್ನು ನಾನು ನೆಮ್ಮದಿ ಯಿಂದ ತಪೋವನಕ್ಕೆ ಹೋಗುವೆನು. ಅಪ್ಪಣೆ ಕೊಡು. ನಾನಿಲ್ಲಿ ಬಹು ಕಾಲ ನಿಲ್ಲಲಾರೆ. ಆಗಲೇ ತಪೋವನ ನನ್ನನ್ನು ಕರೆಯುತ್ತಿದೆ. ಪರ್ವತ ರಾಜನು ನಮಗೆ ಮಾಡಿದ ಸಹಾಯವನ್ನು ನೆನೆದು ರಾಜಕುಮಾರ ಮಲಯಕೇತುವಿನಲ್ಲಿ ಆದರವನ್ನು ತೋರು. ಭದ್ರಭಟಾದಿಗಳು ಅವ ನೊಂದಿಗೆ ಹೋಗಿ ಅವನನ್ನು ರಾಜ್ಯದಲ್ಲಿ ಸ್ಥಾಪಿಸಿ ಬರಲಿ. ಚಂದನ ದಾಸನು ಸತ್ಯವಂತ; ಮಿತ್ರ ಪ್ರೇಮಿ. ಇನ್ನು ಮುಂದೆ ಅವನೇ ನಗರದ ಶ್ರೇಷ್ಠಿಪದವಿಯನ್ನು ಅನುಭವಿಸಿಕೊಂಡು ಬರಲಿ. ಈ ನನ್ನ ಹಿತ

ವಚನವನ್ನು ಗ್ರಹಿಸಿ ಯಾವಾಗಲೂ ಅದರಂತೆ ನಡೆಯಲು ಪ್ರಯತ್ನ ಮಾಡು. ನಿನ್ನ ರಾಜ್ಯ ಭದ್ರವಾಗಿರಬೇಕಾದರೆ ಹಿಂದಿನ ಅಧಿಕಾರಿಗಳನ್ನೇ ನಿಯಮಿಸಿಕೊಂಡು ಅವರನ್ನು ಮರ್ಯಾದೆಯಿಂದ ಕಾಪಾಡಿಕೊಂಡು ಬಾ. ಅನಾದಿಕಾಲದಿಂದ ನಡೆದುಕೊಂಡು ಬಂದಿರುವ ದೇಶಮರ್ಯಾದೆಗಳಿಗೆ ಕೊರತೆ ಬಾರದಂತೆ ರಕ್ಷಿಸಿಕೊಂಡು ಬರುವುದೇ ರಾಜ್ಯನಿರ್ವಾಹ. ಆ ಮರ್ಯಾದೆಯ ಸ್ವರೂಪವನ್ನು ಹೇಳುವೆನು, ಕೇಳು. ವರ್ಣಾಶ್ರಮ ಧರ್ಮಗಳಲ್ಲಿ ವ್ಯತ್ಯಾಸ ಬಾರದಂತೆ ವಿಚಾರಿಸಿ ನಿಗ್ರಾಹಾನುಗ್ರಹದಿಂದ ಪ್ರಜೆಗಳನ್ನು ಕಾಪಾಡಿಕೊಂಡು ಬರುವುದೇ ಮರ್ಯಾದೆಯ ಪಾಲನೆ. ಇದನ್ನು ಉಪೇಕ್ಷಿಸಿದರೆ ಧರ್ಮಕ್ಕೆ ಹಾನಿಯುಂಟಾಗುವುದು. ರಾಜನು ಸರಿಯಾದ ಮಾರ್ಗದಲ್ಲಿ ನಡೆದರೆ ಪ್ರಜೆಗಳೂ ಹಾಗೆಯೇ ನಡೆಯುವರು. ಆದ್ದರಿಂದ ನಿನ್ನ ದೇಹವನ್ನು ಕಾಪಾಡುವಂತೆ ವರ್ಣಾಶ್ರಮ ಧರ್ಮವನ್ನು ರಕ್ಷಿಸು. ಇದಕ್ಕೆ ವಿರುದ್ಧವಾಗಿ ನಡೆದು ರಾಜ್ಯ ಭ್ರಷ್ಟರಾಗಿ ಲೋಕಾಪವಾದಕ್ಕೆ ಗುರಿಯಾದ ರಾಜರನ್ನು ಕಾಲ ಕಾಲಕ್ಕೂ ನೆನೆಯುತ್ತಿರು. ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿಕೊಂಡು ಬಾ. ಅವರಿಗೆ ನಿನ್ನಲ್ಲಿ ಭಯ ಭಕ್ತಿ ವಿಶ್ವಾಸಗಳುಂಟಾಗುವಂತೆ ಮಾಡು. ಮೇರೆ ಮೀರಿ ನಡೆಯುವವರನ್ನು ಯೋಗ್ಯತೆಯರಿತು ದಂಡಿಸು. ಸಾಧುಸಜ್ಜನರಲ್ಲಿ ನಿನ್ನ ದಯೆ ದಾಕ್ಷಿಣ್ಯಗಳು ಸ್ಥಿರವಾಗಿರಲಿ. ನೀನು ನ್ಯಾಯಪಕ್ಷಪಾತಿಯಾಗಿರು. ಲೋಕಾಪವಾದಕ್ಕೆ ಅಂಜಿ ನಡೆ. ನೀತಿಮಾರ್ಗವನ್ನು ಬಿಟ್ಟು ಹೋಗಬೇಡ. ಅಪೂಜರನ್ನು ಪೂಜ್ಯರೆಂದು ಕಾಣಬೇಡ. ನಿಷ್ಠುರವಾದರೂ ಹಿತವಚನವನ್ನು ಯಾರು ನುಡಿಯುವರೋ ಅವರನ್ನು ಅಪದ್ಬಂಧುಗಳೆಂದೆಣಿಸು. ವಿಮರ್ಶೆಮಾಡಿ ಕೆಲಸ ಮಾಡು. ಪಾಪಭೀರುಗಳಾದ ವಿದ್ವಾಂಸರನ್ನು ಸೇವಿಸು. ಕಾರ್ಯದಕ್ಷರ ಮುಂದೆ ಹೇಡಿಗಳಿಗೆ ಸನ್ಮಾನ ಮಾಡಬೇಡ. ಹಿತೈಷಿಗಳೂ, ಕಾರ್ಯದಕ್ಷರೂ ಅದವರಿಗೆ ಪ್ರೋತ್ಸಾಹ ಕೊಟ್ಟು ಉತ್ಸಾಹವುಕ್ಕುವಂತೆ ಮಾಡು. ಸಾಧುಸಜ್ಜನರಿಗೂ ದೀನಾನಾಥರಿಗೂ ಆಧಾರವಾಗಿರು. ನ್ಯಾಯಮಾರ್ಗದಲ್ಲಿ ಹಣವಂತವರಾದವರಿಂದ ದ್ರವ್ಯವನ್ನು ಪಡೆದು ಬಡವರನ್ನು ಕಾಪಾಡು. ರಾಜನಾದವನು ಸ್ತ್ರೀ ಮದ್ಯ ದ್ಯೂತಾದಿಗಳಿಗೆ ವಶನಾಗದೆ ರಾಜ್ಯಭಾರ

ಮಾಡುತ್ತಿದ್ದರೆ ರಾಜ್ಯಲಕ್ಷ್ಮಿ ಅವನಲ್ಲಿ ಸ್ಥಿರವಾಗಿ ನಿಲ್ಲುವಳು. ಆಗ ಕಲಿಯುಗವೂ ಕೃತಯುಗದಂತಾಗುವುದು. ನಾನು ಧರ್ಮವನ್ನು ಸ್ಥಾಪಿಸಿದೆ. ಅದನ್ನು ಕಾಪಾಡಿಕೊಂಡು ಬರುವ ಭಾರ ನಿನ್ನದಾಗಿದೆ. ಇನ್ನು ಮುಂದೆ ನಿನ್ನ ಲಾಲನೆ ಪಾಲನೆ ಸಂಪೂರ್ಣವಾಗಿ ಅಮಾತ್ಯರಿಗೆ ಸೇರಿದೆ. ನನ್ನ ಆಶೀರ್ವಾದ ನಿನ್ನ ಮೇಲೆ ಪೂರ್ಣವಾಗಿದೆ. ನಿನಗೆ ಮಂಗಳವಾಗಲಿ.' ಎಂದು ಹರಸಿ ಹೊರಡಲು ಸಿದ್ಧನಾದನು. ನಿರ್ವಾಹ ವಿಲ್ಲದೆ ಚಾಣಕ್ಯನನ್ನು ತಪೋವನಕ್ಕೆ ಕಳುಹಿಸಿಕೊಡಲು ಚಂದ್ರ ಗುಪ್ತನು ಒಪ್ಪಬೇಕಾಯಿತು. ಮಹಾವೈಭವದಿಂದ ಸಾಮಂತರಾಜರು ಹಿಂಬಾಲಿಸಿ ಬರುತ್ತಿರಲು, ಚಾಣಕ್ಯನು ನಿರ್ಲಿಪ್ತನಾಗಿ ತಪೋವನಕ್ಕೆ ತೆರಳಿದನು. ತನ್ನ ಭಾಗ್ಯದೇವತೆಯನ್ನು ಹಿಂದೆಬಿಟ್ಟು ಬರುತ್ತಿರುವೆ ನೆಂಬ ಅರಿವಿನಿಂದ ಚಾಣಕ್ಯನನ್ನು ಬೀಳ್ಕೊಟ್ಟು ತಾಯಿನಗಲಿದ ಕರುವಿ ನಂತೆ ದುಃಖದಿಂದ ಚಂದ್ರಗುಪ್ತನು ಅಮಾತ್ಯನೊಡನೆ ರಾಜಧಾನಿಗೆ ಹಿಂದಿರುಗಿ ಬಂದನು.

ಚಾಣಕ್ಯನ ಪ್ರತಿಯೊಂದು ಆಜ್ಞೆಯೂ ನೆರವೇರಿತು. ಭದ್ರ ಭಟಾದಿಗಳು ಮಲಯಕೇತುವನ್ನು ರಾಜ್ಯದಲ್ಲಿ ಸ್ಥಾಪಿಸಿ ಬಂದರು. ತನ್ನ ಅಧಿಕಾರಿಗಳ ಗೌರವಕ್ಕೆ ಪಾತ್ರನಾಗಿ, ಪ್ರಜೆಗಳ ಪ್ರೀತಿ ವಿಶ್ವಾಸ ಗಳನ್ನು ಗಳಿಸಿ, ಅಮಾತ್ಯರ ಹರಕೆಯನ್ನು ಹೊತ್ತು ಅನುದಿನವೂ ತನ್ನ ಕುಲದೇವರಾದ ಚಾಣಕ್ಯನನ್ನು ನೆನೆಯುತ್ತ ಚಂದ್ರಗುಪ್ತನು ಬಹುಕಾಲ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು.

ಕ್ಷೀರಿಣ್ಯಸ್ಸಂತು ಗಾವೋ ಭವತು ವಸುಮತೀ ಸರ್ವಸಂಪನ್ನ ಸಸ್ಯಾ ।
ಪರ್ಜನ್ಯಃ ಕಾಲವರ್ಷೀ ಸಕಲಜನಮನೋನಂದಿನೋ ವಾಂತು ವಾತಾಃ ॥
ಮೋದಂತಾಂ ಜನ್ಮಭಾಜ ಸತತಮಭಿಮತಾ ಬ್ರಾಹ್ಮಣಾಸ್ಸಂತು ಸಂತಃ ।
ಶ್ರೀಮಂತಃ ಪಾಂತು ಪೃಥ್ವೀಂ ಪ್ರಶಮಿತರಿಪವೋ ಧರ್ಮನಿಷ್ಠಾಶ್ಚ ಭೂಪಾಃ ॥

---

# ಅನುಬಂಧ

ಈ ಮುಂದಿನ ಪುಟಗಳಲ್ಲಿ ಕವಿಚರಿತ್ರೆ, ಈ ಗ್ರಂಥದಲ್ಲಿ ಬರುವ ಕೆಲವು ವಾಕ್ಯಗಳ ಮೂಲ, ಪೂರ್ವಕಥೆಗಳು—ಇವುಗಳನ್ನು ಸಂಗ್ರಹವಾಗಿ ಕೊಟ್ಟಿದೆ.

ವಿಶಾಖದತ್ತ—ಇವನು ಸಂಸ್ಕೃತ ಭಾಷೆಯಲ್ಲಿ ಮುದ್ರಾರಾಕ್ಷಸ ವೆಂಬ ನಾಟಕವನ್ನು ರಚಿಸಿದ್ದಾನೆ. ಈ ನಾಟಕದ ಪ್ರಸ್ತಾವನೆಯಿಂದ ಕವಿ 'ಸಾಮಂತ ವಟೇಶ್ವರದತ್ತನ ಮೊಮ್ಮಗನೆಂದೂ ಮಹಾರಾಜ ಭಾಸ್ಕರದತ್ತನ ಮಗನೆಂದೂ ತಿಳಿದುಬರುತ್ತದೆ. ಇವರು ಯಾರು, ಯಾವಾಗ, ಎಲ್ಲಿ ಇದ್ದರು ಎಂಬುದೊಂದೂ ನಿರ್ಧಾರವಾಗಿ ಗೊತ್ತಿಲ್ಲ. ಈ ನಾಟಕ ಇಮ್ಮಡಿ ಚಂದ್ರಗುಪ್ತನ ಕಾಲದಲ್ಲಿ (ಕ್ರಿ. ಶ. ಸು. ೪೫೦) ರಚಿತವಾಗಿರಬಹುದೆಂದು ಬಹುಜನ ವಿದ್ವಾಂಸರ ಮತವಾಗಿದೆ. ವಿಶಾಖದತ್ತನು ರಾಘವಾನಂದ, ದೇವೀಚಂದ್ರಗುಪ್ತ ಮತ್ತು ಅಭಿಸಾರಿಕಾ ವಂಚಿತಕ ಎಂಬ ನಾಟಕಗಳನ್ನೂ ಬರೆದಿರುವಂತೆ ತಿಳಿದುಬರುತ್ತದೆ. ಇವುಗಳಲ್ಲಿ ದೇವೀಚಂದ್ರಗುಪ್ತದ ಕೆಲವು ಭಾಗಗಳು ಈಚೆಗೆ ದೊರೆತಿವೆ. ಮಿಕ್ಕ ನಾಟಕಗಳು ದೊರೆತಿಲ್ಲ. ಕವಿಯ ಮುದ್ರಾರಾಕ್ಷಸ ನಾಟಕ ವಿದ್ವಾಂಸರಿಗೆ, ಅದರಲ್ಲಿಯೂ ಪಾಶ್ಚಾತ್ಯರಿಗೆ ತುಂಬ ಪ್ರಿಯವಾಗಿದೆ.'

ನಾರಾಯಣ ಶರ್ಮ—ಬ್ರಾಹ್ಮಣ ಕವಿಯಾದ ಇವನು ಕನ್ನಡದಲ್ಲಿ ಮುದ್ರಾಮಂಜೂಷ ವೆಂಬ ಗದ್ಯಗ್ರಂಥವನ್ನು ಬರೆದಿದ್ದಾನೆ. ಮೈಸೂರಿನ ದೊರೆಯಾದ ಮುಮ್ಮಡಿ ಕೃಷ್ಣರಾಜನ ಆಸ್ಥಾನ ಕವಿಯಾಗಿದ್ದನು. ಗ್ರಂಥ ರಚನೆಯ ಕಾಲ ಕ್ರಿ. ಶ. ೧೮೨೩. ವಿಶಾಖದತ್ತನ ಮುದ್ರಾರಾಕ್ಷಸದ ನಾಟಕದ ಕಥೆಯೊಂದಿಗೆ ಪೂರ್ವ ಕಥೆಯನ್ನು ಸೇರಿಸಿ ಗ್ರಂಥರಚನೆ ಮಾಡಿದ್ದಾನೆ. ಕಳೆದ ಶತಮಾನದ ಆದಿಯಲ್ಲಿ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ಅನೇಕರು ಅನುವಾದಮಾಡಿದ ಕಾರಣ ರಾಜನ ಪ್ರೇರಣೆಯಂತೆ ಕವಿ ಇದನ್ನು ಬರೆದಿರಬಹುದು. ಕವಿಯ ರೂಢನಾಮ ಕೆಂಪುನಾರಾಯಣ.

ಪುಟ ೨. ಒಗ್ಗಟ್ಟಿನಲ್ಲಿ ಬಲವಿರುವುದನ್ನರಿತು ಇತ್ಯಾದಿ. ಜಗಳವಾಡುತ್ತಿದ್ದ ಮಕ್ಕಳಿಗೆ ಕಟ್ಟಿಗೆಯ ಹೊರೆಯ ಮೂಲಕ ಪಾಠ ಕಲಿಸಿದ ತಂದೆಯ ಕಥೆ. ಈಸೋಪನ ಕಥೆಗಳನ್ನು ನೋಡು. ಪುಟ ೬ರ ಕೊನೆಯ ವಾಕ್ಯಗಳನ್ನು ನೋಡು.

ಪುಟ. ೩. ರಾಜನಿಗೆ ಜನರ ನಂಬಿಕೆ ಅತ್ಯಗತ್ಯ. 'Tzu king asked for a definition of good government. The master replied: It consists in providing enough food to eat, in keeping enough soldiers to guard the state, and in winning the confidence of the people. And if one of these three things had to be sacrificed, which should go first.' The master replied: Sacrifice the soldiers. And if of the two remaining things one had to be sacrificed, which should it be? The master said: Let it be food. From the begining men have always had to die. But without the confidence of the people no government can stand at all '— confucius.

ಪುಟ ೧೭. ವೇಣುರಾಯ (ವೇನ ?) ಅಂಗದೇಶಾಧಿಪತಿಯಾದ ಅಂಗನೆಂಬ ರಾಜನಿಂದ ಸುನಿಥೇಯೆಂಬುವಳಲ್ಲಿ ಹುಟ್ಟಿದವನು. ಇವನು ಕೇವಲ ನಾಸ್ತಿಕನಾಗಿದ್ದುದರಿಂದ ಪ್ರಜೆಗಳೆಲ್ಲರೂ ಇವನನ್ನು ಕೊಂದರು.

ವಿದುರ (ಇದೇ ಪುಟ) ವಿಚಿತ್ರವೀರ್ಯನ ಹೆಂಡತಿಯಾದ ಅಂಬಿಕೆಯ ದಾಸಿಯಲ್ಲಿ ಕೃಷ್ಣದ್ವೈಪಾಯನನಿಂದ ಜನಿಸಿದವನು.

ಪುಟ ೨೩. ಸಾಧುಸಜ್ಜನರ........ಸಂದೇಹವೇನು? ಈ ಶ್ಲೋಕವನ್ನು ಗಮನಿಸಿ.

ದಾರುಚರ್ಮ ವಿನಿಶ್ವಾಸೋ ದಹತೇ ಲೋಹಪಂಚಕಂ ।
ಸಾಧುಸಜ್ಜನ ಸಂತಾಪೇ ಕಿಮಾಶ್ಚರ್ಯಂ ಕುಲಕ್ಷಯೇ ॥

ಪುಟ ೨೩. ವಿಶ್ವಾಮಿತ್ರನು ರಾಮಲಕ್ಷ್ಮಣರಿಂದ ಸುಬಾಹು ಮಾರೀಚರನ್ನು ಕೊಲ್ಲಿಸಿದ್ದು—ಸುಬಾಹು ಮಾರೀಚರು ಸೋದರರು. ಸುಬಾಹು ಅಣ್ಣ; ಮಾರೀಚ ತಮ್ಮ. ಇವರ ತಾಯಿ ತಾಟಕೆ. ವಿಶ್ವಾಮಿತ್ರನು ಸಿದ್ಧಾಶ್ರಮದಲ್ಲಿ ಯಾಗ ಮಾಡುತ್ತಿದ್ದಾಗ ಮಾರೀಚನು ಆತನ ಯಾಗವನ್ನು ಹೊಲಸು ಮಾಡತೊಡಗಿ ರಾಮನಿಂದ ವಾಯುವ್ಯಾಸ್ತ್ರದ ಮೂಲಕ ಸಮುದ್ರದ ಆಚೆಗೆ ಬಿದ್ದನು. ಸುಬಾಹು ರಾಮನ ಆಗ್ನೇಯಾಸ್ತ್ರದಿಂದ ಸತ್ತನು.

ಇದೇ ಪುಟ. ಸಾಲು ೧೭—ಗಾಳಿಬೆಂಕಿಗಳು....ಬೂದಿಯಾಗದೆ? ‹ ಅನಿಲಾನಲ ಸಂಯೋಗಮುರಿಪದಿರ್ಕುಮೆ ಪಗೆಯಂ ' ಗದಾಯುದ್ಧದ ಈ ವಾಕ್ಯವನ್ನು ನೆನೆದುಕೊಳ್ಳಿ. ಸಾಲು ೧೮—ನಾಡಿಗೆ ನಾಡೇ ಇತ್ಯಾದಿ How laughs the land with plenty crowned—ಕವಿಯ ಈ ವಾಕ್ಯವನ್ನು ನೆನೆಯಿರಿ. ಸಾಲು ೨೮ ಚಿಂತೆಗೆ ಸಂಬಂಧಪಟ್ಟ ವಾಕ್ಯಗಳು—

ಅವೀಗ್ ಮುತ್ ಇಕ್ಕೋದು
ಉಲೀಗ್ ಅಲ್ ತಿಕ್ಕೋದು
ಚಿಂತೇಗ್ ಎದೇಲ್ ತಾವ್ ಕೊಡೋದು

ಇತ್ಯಾದಿ ರತ್ನನ ಪದಗಳು ‹ ಚಿಂತೆ ' ನೋಡಿ.

ಚಿಂತಾಯಾಶ್ಚ ಚಿತಾಯಾಶ್ಚ ಬಿಂದು ಮಾತ್ರಂ ವಿಶಿಷ್ಯತೆ ।
ಚಿತಾದಹತಿ ನಿರ್ಜೀವಂ ಚಿಂತಾ ದಹತಿ ಜೀವನಂ ॥

ಪುಟ. ೨೪. ಇಲ್ಲಿ ಬರುವ ಕಥೆಗೆ ಆಕಾರವಾದ ಪದ್ಯ.

ಕಾಂತಂ ಪ್ರಾಹ ಕಪೋತಿಕಾಕುಲತಯಾ ನಾಥಾಂತ್ಯ ಕಾಲೋಧುನಾ ।
ವ್ಯಾಧೋಧೋ ಧೃತಚಾಪ ಸಂಯುತಶರಃ ಶ್ಯೇನೋ ಪರಿಭ್ರಾಮ್ಯತಿ॥
ಏನಂ ಸತ್ಯಹಿನಾ ಸದಷ್ಟ ಇಷುಣಾ ಶ್ಯೇನಸ್ತು ತೇನಾ ಹತಃ ।
ತೂರ್ಣಂ ತೌತು ಯಮಾಲಯಂ ಪರಿಗತೌ ದೈವೇ ವಿಚಿತ್ರಾಗತಿಃ॥

ಪುಟ. ೩೩. ನಾವು ಮಾಡಬೇಕಾದ....ಆಯಿತು. ‹ ಅಸ್ಮಾಭಿರ್ಯದನುಷ್ಠೇಯಂ ಗಂಧರ್ವೈಸ್ತದನುಷ್ಠಿತಂ ' ದುರ್ಯೋಧನನು ಘೋಷಯಾತ್ರೆಯ ನೆಪದಿಂದ ಪಾಂಡವರು ವಾಸಮಾಡುತ್ತಿದ್ದ ಅರಣ್ಯದಲ್ಲಿ ಸೇನಾಸಮೇತನಾಗಿ ನಿಂತು

ತನ್ನ ವೈಭವವನ್ನು ಅವರಿಗೆ ತೋರಿಸುತ್ತಿದ್ದಾಗ, ಅವರಿಗೆ ಉಂಟಾದ ಮನಃಕ್ಲೇಶವನ್ನು ಇಾದ್ರನು ಕಂಡು ಚಿತ್ರಸೇನನೆಂಬ ಗಂಧರ್ವನನ್ನು ಅಲ್ಲಿಗೆ ಕಳುಹಿಸುವನು. ಅವನು ದುರ್ಯೋಧನನನ್ನು ಅವಮಾನಗೊಳಿಸಿ ಹಿಂಗಟ್ಟು ಬಿಗಿದು ಇಂದ್ರಲೋಕಕ್ಕೆ ಒಯ್ಯಲು, ಆಗ ಭಾನುಮತಿ ಧರ್ಮರಾಜನಲ್ಲಿಗೆ ಬಂದು ಪತಿದಾನ ಬೇಡುತ್ತಾಳೆ. ಆಗ ಧರ್ಮರಾಜನು ಭೀಮನನ್ನು ನೋಡಲು ಅವನು ಈ ಮಾತುಗಳನ್ನು ಹೇಳುತ್ತಾನೆ.

ಪುಟ ೩೩. ಸಂಜೆಯ ವರ್ಣನೆ. ಶ್ರೀ ದ. ರಾ. ಬೇಂದ್ರೆಯವರ 'ದೀಪ' ಎಂಬ ಪದ್ಯವನ್ನು ನೋಡಿ.

ಬಂತಿದೊ ಶೃಂಗಾರಮಾಸ।
ಕಂತು ನಕ್ಕ ಚಂದ್ರಹಾಸ॥
ಕಿರಿಬೆರಳಲಿ ಬೆಳ್ಳಿಹರಳು।
ಕರಿ ಕೊರಳೊಳು ಚಿಕ್ಕೆ ಅರಳು॥

ಪುಟ. ೩೪ 'ದುಂಬಿಗಳು'....ಇತ್ಯಾದಿ. ಈ ಸುಭಾಷಿತವನ್ನು ನೋಡಿ.

ಆಕಾರೇಣೈವ ಚತುರಾಸ್ತರ್ಕಯಂತಿ ಪರೇಂಗಿತಂ।
ಗರ್ಭಸ್ಥಂ ಕೇತಕೀಪುಷ್ಪಂ ಆಮೋದೇನೈವಷಟ್ಪದಾಃ॥

ಪುಟ ೫೪. ಭಾರತಯುದ್ಧ ...ಭೇದವನ್ನೆಸಗಿದಂತೆ ಇತ್ಯಾದಿ. ಭಾರತಯುದ್ಧ ಮೊದಲಾಗುವುದಕ್ಕೆ ಮುಂಚೆ ಧರ್ಮರಾಯನು ಕೌರವ ಪಕ್ಷದ ಭೀಷ್ಮ, ದ್ರೋಣ, ಕೃಪ, ಶಲ್ಯರನ್ನು ಕಂಡನು. ತಮ್ಮನ್ನು ಕಾಪಾಡಬೇಕೆಂದು ಧರ್ಮರಾಯನಿಗೆ ಭೀಷ್ಮನು 'ಶಿಖಂಡಿಯನು ಮುಂದಿರಿಸಲಾತನ ಕಂಡು ನಾವ್ ಕಾಳಗವ ಮಾಡೆವು' ಎಂದನು. ದ್ರೋಣನು 'ಕಾದುವಾ ಸಮಯದೊಳಗಪ್ರಿಯವಾದ ನುಡಿಗಳ ಕೇಳಿದಾಕ್ಷಣ ಮೇದಿನಿಯೊಳಾವಿರೆವು' ಎಂದು ಹೇಳಿದನು. ಕೃಪನು ಅರಸನಿಗೆ ಹೇಳಿದ ಮಾತಿದು 'ಅವವಧ್ಯರು ಜನಪ ನಿನ್ನನ್ನು ನಾವು ಕೊಲ್ಲೆವು' 'ರಣದಲಿ ತಪನತನಯನ ತೇಜವನು ನಿಷ್ಕೃಪೆಯೊಳವಗಡಿಸು' ಎಂದು ಧರ್ಮರಾಯನು ಶಲ್ಯನಿಗೆ ಹೇಳಿಕೊಟ್ಟು ಅವನಿಂದ ಅಭಯ ಪಡೆದನು.

ಪುಟ ೫೫. 'ಉರಿಯುವನೆ ಬಲ್ಲ'—ದೇವಪು. ಶ್ರೀಯವರ ಇಂಗ್ಲೀಷ್ ಗೀತೆಯಲ್ಲಿ ಬರುವ ದುಃಖಸೇತು ಎಂಬ ಕವಿತೆಯ ಒಂದು ಸಾಲು.

ಪುಟ ೫೬. ನಂದರು ...ಕಂಡರು ಇತ್ಯಾದಿ. 'ಬಡಿಗಂಡನಿಲ್ಲ ಪಾಲನೆಕಂಡಂ' ಪಂಪಭಾರತ ನೋಡು. ಮುಂದಿನ ಸಾಲು. ಅವರು ಚಾಪೆಯ.... ನುಸಿಯಿತು ಇತ್ಯಾದಿ. ಪಂಪರಾಮಾಯಣ ಸಂಗ್ರಹದ ಮುನ್ನುಡಿಯನ್ನು ನೋಡಿ. (ಪುಟ XI).

ಪುಟ ೫೭ ಮನಸ್ಸಿನ ಗಾಯಕ್ಕೆ....ಬಾರದಾಯಿತು ಇತ್ಯಾದಿ.

—The innocent sleep,
Sleep that knits up the ravell'd sleave of care,

The death of each day's life, sore labour's bath,
Balm of hurt minds, great nature's second course,
Chief nourisher in life's feast,—
Macbeth, Act II Sc, II.

ಪುಟ ೫೮. ಸಾಲು ೯ ಸರ್ಪಯಾಗದ ಕತೆ—ತಕ್ಷಕನು ಪರೀಕ್ಷಿತಮಹಾರಾಜನನ್ನು ಕಚ್ಚಿಕೊಂದನು. ಇದರಿಂದ ಕೋಪಗೊಂಡ ಜನಮೇಜಯನು ಸರ್ಪಯಾಗ ಮಾಡಿದನು ತಕ್ಷಕನು ಇಂದ್ರನನ್ನು ಮರೆಹೊಕ್ಕನು ಋತ್ವಿಕರು ಇಂದ್ರ, ತಕ್ಷಕರಿಬ್ಬರೂ ಬರಬೇಕೆಂದು ಆಹ್ವಾನ ಮಾಡಲು, ಆಗ ಆಸ್ತೀಕನಿಂದ ಯಾಗ ನಿಂತಿತು.

ಪುಟ ೬೩. 'ತನ್ಮೊಳಗ್ಗಲಿಸಿ........ಸಂಚಲಂ' ಈ ವಾಕ್ಯ ಮತ್ತು ಮುಂದಿನ ಪದ್ಯ ಪಂಪಭಾರತ XII—೯೨, ೯೩.
ಪುಟ ೬೩. 'ಇತ್ತ ಪುಲಿ, ಅತ್ತ ದರಿ' ಲಕ್ಷ್ಮಿಯ ಮಾತು. ಗದಾಯುದ್ಧ.

ಪುಟ ೬೪. ಗಯನೆಂಬ ಗಂಧರ್ವನ ಕಥೆ: ಇವನು ಮಣಿಪುರದ ಅರಸು. ಅರ್ಜುನನನ್ನು ಮರೆಹೊಕ್ಕು ಕೃಷ್ಣನಿಂದ ಬದುಕಿದನು.

ಪುಟ ೭೨. 'ರಾಕ್ಷಸನು........ಲಾಭ'—ಸಂಸ್ಕೃತ ನಾಟಕ. ಪುಟ ೧೫೬ ಆ ಭಾಗವನ್ನು ಪೂರ್ತಿಯಾಗಿ ಓದಿ. ಇದೇ ಪುಟ ಸಾಲು ೧೩ 'ಮುಳ್ಳಿನಿಂದ.... ತೆಗೆಯುವಂತೆ' ಇತ್ಯಾದಿ. ಪಂಪಭಾರತ ix—೬೬.

ಪುಟ. ೭೩. ತಪೋವನ ವರ್ಣನೆ. ರಘುವಂಶ, ಸರ್ಗ 1 ಶ್ಲೋಕಗಳು ೫೦, ೫೧, ೫೩ ನೋಡಿ—

ಆಕ್ಷೀರ್ಣಮೃಷಿಪತ್ನೀನಾಮುಟಜದ್ವಾರರೋಧಿಭಿಃ ।
ಅಪತ್ಯೈರಿವ ನಿವಾರ ಭಾಗಧೇಯೋಚಿತೈರ್ಮೃಗೈಃ ॥
ಸೇಕಾಂತೇ ಮುನಿಕನ್ಯಾಭಿಸ್ತತ್ಕ್ಷಣೋಜ್ಝಿತವೃಕ್ಷಮ್ ।
ವಿಶ್ವಾಸಾಯ ವಿಹಂಗಾನಾಮಾಲವಾಲಾಂಬುಪಾಯಿನಾಮ್ ॥
ಅಭ್ಯುತ್ಥಿತಾಗ್ನಿಪಿಶುನೈರತಿಥೀನಾಶ್ರಮೋನ್ಮುಖಾನ್ ।
ಪುನಾನಂ ಪವನೋದ್ಧೂತೈರ್ಧೂಮೈರಾಹುತಿಗಂಧಿಭಿಃ ॥

ಪುಟ ೭೫. 'ಅದೃಷ್ಟ............ತುಳಿಯುವುದು' ಟಾಲ್‌ಸ್ಟಾಯಿಯವರ ಇಪ್ಪತ್ತುಮೂರು ಕಥೆಗಳಲ್ಲಿ ಒಂದಾದ ಇಲಿಯಾಸನ ಕಥೆಯಲ್ಲಿ ಈ ಮಾತುಗಳು ಬರುತ್ತವೆ. Fortune turns like a wheel etc.

ಕಾಳಿದಾಸನ ಮೇಘಸಂದೇಶ—ಉತ್ತರ ಮೇಘ, ಪದ್ಯ ೪೬.
ಕಸ್ಯಾತ್ಯಂತಂ ಸುಖಮುಪನತಂ ದುಃಖಮೇಕಾಂತತೋ ವಾ ।
ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ ॥

ಭಾಸನ ಸ್ವಪ್ನವಾಸವದತ್ತ—ಚಕ್ರಾರ ಪಂಕ್ತಿರಿವ ಗಚ್ಛತಿ ಪಂಕ್ತಿಃ—ಅಂಕ ೧ ಪದ್ಯ ೪.

ಅದೇ ಪುಟ. ಕರಗುವ ಮುಗಿಲು ಇತ್ಯಾದಿ—ಜೈನ ಕಾವ್ಯಗಳಲ್ಲಿ ಸಾಮಾನ್ಯವಾಗಿ ಬರುವ ಮಾತು.

ಪುಟ ೮೦. ಅರ್ಜುನನ ಮನಸ್ಸಪಹರಿಸಿದ ಉಲೂಪಿ—ನಾಗಕನ್ನಿಕೆ. ಕೌರವ್ಯನೆಂಬ ನಾಗರಾಜನ ಮಗಳು. ಅರ್ಜುನನು ತೀರ್ಥಯಾತ್ರೆಗೆ ಹೋಗಿದ್ದಾಗ ಇವಳನ್ನು ಮದುವೆಯಾಗಿ ಇರಾವಂತನೆಂಬ ಮಗನನ್ನು ಪಡೆದನು. ಬಭ್ರುವಾಹನನಿಂದ ಹತನಾದ ಅರ್ಜುನನನ್ನು ಸಂಜೀವನ ಮಣಿಯಿಂದ ಈಕೆ ಬದುಕಿಸಿದಳು.

ಪುಟ ೮೨ ಮಾದ್ರಿಯನ್ನಪ್ಪಿ ಸತ್ತ ಪಾಂಡುವಿನ ಕಥೆ.

'ಸ್ತ್ರೀಸಂಪರ್ಕಮಾಡಿದರೆ ನೀನು ಸಾಯುವೆ' ಎಂಬ ಕಿಮುಂದಮುನಿಯ ಶಾಪವನ್ನು ಹೊತ್ತು ಪಾಂಡು, ತನ್ನ ಹೆಂಡಿರಾದ ಕುಂತಿ ಮತ್ತು ಮಾದ್ರಿಯರೊಡನೆ ಕಾಡಿನಲ್ಲಿ ಇದ್ದಾಗ, ಒಮ್ಮೆ ಮಾದ್ರಿಯೊಡನೆ ವಿವಹರಿಸಿ ಸತ್ತನು.

ಪುಟ ೮೫- 'ಅರ್ಜುನನನ್ನು........ಕಾಪಾಡಿದಂತೆ ಇತ್ಯಾದಿ.

ಭಾರತ ಯುದ್ಧದ ಕಾಲದಲ್ಲಿ ಒಮ್ಮೆ ರಾತ್ರಿಯುದ್ಧ ನಡೆಯಿತು. ಆಗ ಘಟೋತ್ಕಚನ ಪ್ರತಾಪ ಹೆಚ್ಚಾಯಿತು. ಆಗ ಕರ್ಣನು ಇಂದ್ರನಿಂದ ಪಡೆದು, ಅರ್ಜುನನನ್ನು ಕೊಲ್ಲುವುದಕ್ಕಾಗಿಯೇ ಮೀಸಲಾಗಿಟ್ಟಿದ್ದ ಶಕ್ತ್ಯಾಯುಧವನ್ನು ದುರ್ಯೋಧನನ ಪ್ರಾರ್ಥನೆಯಂತೆ ಘಟೋತ್ಕಚನ ಮೇಲೆ ಪ್ರಯೋಗಿಸಿ ಅವನನ್ನು ಕೊಂದನು. ಇದು ಕೃಷ್ಣನ ತಂತ್ರ.

ಪುಟ ೯೧. ಸತ್ಯವನ್ನು........ಆಚರಿಸಿ ಇತ್ಯಾದಿ. ಸತ್ಯಂವದ, ಧರ್ಮಂಚರ—ತೈತರೀಯೋಪನಿಷತ್ತು ; ಶಿಕ್ಷಾವಲ್ಲಿ.

ಪುಟ ೧೦೮. ಕೊರಳಸೆರೆ ಹಿಗ್ಗಿದವು ಇತ್ಯಾದಿ. ಕನ್ನಡ ಮಹಾಭಾರತದ ಉದ್ಯೋಗಪರ್ವದಲ್ಲಿ ಕರ್ಣಭೇದದಲ್ಲಿ ಬರುವ 'ಕೊರಳಸೆರೆ ಹಿಗ್ಗಿದವು ದೃಗುಜಲ'—ಈ ಪದ್ಯವನ್ನು ನೋಡಿ.

ಪುಟ ೧೧೦. ಇಲ್ಲಿ ಬರುವ ಶರತ್ಕಾಲದ ವರ್ಣನೆಗೆ ಆಕರವಾದ ಪದ್ಯಗಳು.

ಅಳಿ ಬಿರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ ಹಂಸೆ ಪೂತ ಪೂ |
ಗೊಳದೊಳೆ ರಾಗಿಸುತ್ತಿರೆ ಶುಕಾವಳಿ ಬಂಧುರ ಗಂಧ ಶಾಳಿ ಸಂ ||
ಕುಳದೊಳೆ ಪಾಯ್ದು ನಲಿಯುತ್ತಿರೆ ಸಾರೆ ಚಕೋರಮಿಂದು ಮಂ |
ಡಳ ಗಳಿತಾಮೃತಾಸವಮನುಂಡುಸಿರುತ್ತಿರೆ ಚೆಲ್ವು ಶಾರದಂ ||

ಪುಳಿಯೋಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಮಾಕಾಶಮಂ |
ಡಳಮಂ ಪರ್ವಿದ ಬೆಳ್ಮುಗಿಲ್ ಮುಗಿಲ ಬೊಳ್ಪೊಕ್ಕು ತಳ್ಪೊಯ್ಯೆಬ |
ಳ್ವಳ ಸೀಳ್ದಿರ್ದ ದಿಶಾಳಿ ಶಾಲ ವನ ಗಂಧಾಂಧ ದ್ವಿರೇಫಾಳಿ ಕ |
ಣ್ಗೊಳಿಸಿತ್ತೊರ್ಮೆಯೆ ಬಂದುವಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ ||

ಪಂಪ ಭಾರತ || ೭೦, ೭೧

ಒಡನೆ ಸುರಾಸುರರ್ ಕನಕ ಪರ್ವತಮಂ ಕಡೆಗೋಲ ಮಾಡಿ ಮೇಣ್ |
ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣ ಮಾಡಿ ಪಾ ||
ಲ್ಗಡಲನುಪಾಯದಿಂ ಕಡೆಯೆ ರಾಹುಗೆ ವಾಯುಪಥಾಗ್ರಮೆಂಬ ಪೆ |
ರ್ಮಡಕೆಯೊಳಿಕ್ಕಿ ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ ||

ಕವಿಚರಿತ್ರೆ 1 ಪುಟ ೨೫